# ಕಾರಣಪುರುಷ

( ಸಾಮಾಜಿಕ ಕಾದಂಬರಿ )



ಬರೆದವರು :

ರಂ. ಶ್ರೀ. ಮುಗಳಿ

ಎಂ. ಎ., ಬಿ. ಟಿ.

( ಎರಡನೆಯ ಆವೃತ್ತಿ )

ಮೊ॥ ೧೯೪೧ ] [ ಬೆಲೆ ೧-೦-೦

# ಅರ್ಪಣೆ

ದಿವಂಗತ

ಮಾತೃಶ್ರೀ ಕಮಲಕ್ಕನಿಗೆ

—ರಂಗನಾಥ

# ಮುನ್ನುಡಿ



ಜೂನ ೧೯೩೯ರಲ್ಲಿ ಮೊದಲು ಪ್ರಕಟವಾದ, ಈ ನನ್ನ ಕಾದಂಬರಿಯು ಜೂನ ೧೯೪೧ರಲ್ಲಿ ಅಂದರೆ ಎರಡು ವರುಷಗಳಲ್ಲಿ ಎರಡನೆಯ ಆವೃತ್ತಿಯಾಗಿ ಈಗ ಪ್ರಕಟಗೊಳ್ಳುತ್ತಿದೆ. ಎರಡನೆಯ ಜನ್ಮ ಗ್ರಂಥಕರ್ತನಿಗೆ ಬಂದರೂ ಅವನ ಗ್ರಂಥಕ್ಕೆ ಎರಡನೆಯ ಆವೃತ್ತಿ ದೊರೆಯುವುದು ಕನ್ನಡದಲ್ಲಿ ದುರ್ಲಭವೆಂಬ ಎನಿಸಿಕೆಯು ಇಂದು ಅನೇಕ ಹೊಸ ಗ್ರಂಥಗಳ ವಿಷಯದಲ್ಲಿ ಸುಳ್ಳಾಗುತ್ತಿದೆ. ಈ ಸುಳ್ಳಿನಲ್ಲಿ ಕನ್ನಡಿಗರ ರಸಿಕತೆಯ ಸತ್ಯಸ್ವರೂಪವು ವ್ಯಕ್ತವಾಗುತ್ತದೆಂದು ತಿಳಿಯಬಹುದು. 'ಕನ್ನಡಿಗರ ಅಂತಃಕರಣವನ್ನು ಸೂರೆಗೊಳ್ಳುವ ಸ್ವಾರಸ್ಯವಾದ ಕಾದಂಬರಿ' ಎಂದು ಗ್ರಂಥಮಾಲೆಯ ಸಂಪಾದಕರು ಇದನ್ನು ತುಂಬ ಧಾರ್ಷ್ಟ್ಯದಿಂದ ವರ್ಣಿಸಿದ್ದರು. ಅವರ ವರ್ಣನೆಯಲ್ಲಿ ಎಷ್ಟು ಸತ್ಯತೆಯಿರುವುದೋ ನಾನು ಹೇಳಲಾರೆ. ಆದರೆ ಇದನ್ನೋದಿ ತಮ್ಮ ಮೆಚ್ಚಿಗೆಯನ್ನೂ ಉಪಯುಕ್ತವಾದ ಗುಣದೋಷವಿಮರ್ಶೆಯನ್ನೂ ತಿಳಿಸಿದ ಎಲ್ಲ ಕನ್ನಡ ಬಾಂಧವರಿಗೆ ನಾನು ತುಂಬ ಕೃತಜ್ಞನಾಗಿದ್ದೇನೆ.

ಈ ಕಾದಂಬರಿಯನ್ನು ಒರುವ ವರ್ಷದ ಇಂಟರಮೀಡಿಯಟ್ ಕ್ಲಾಸಿನ ಕಲೆ ಹಾಗೂ ವಿಜ್ಞಾನ ಇವೆರಡೂ ಶಾಖೆಯ ವಿದ್ಯಾರ್ಥಿಗಳಿಗೆ ಪಠ್ಯ ಪುಸ್ತಕವಾಗಿ ನೇಮಕಗೊಳಿಸಿದ್ದಕ್ಕಾಗಿ ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರಿಗಳಿಗೂ ಕನ್ನಡ ಪಠ್ಯಸಮಿತಿಯವರಿಗೂ ನನ್ನ ಹೃತ್ಪೂರ್ವಕವಾದ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಇದರಲ್ಲಿಯ ದೇಸಿ ಉತ್ತರಕರ್ನಾಟಕದಲ್ಲಿ ರೂಢವಾದುದೆಂಬ ಕಾರಣದಿಂದ ಇದನ್ನೋದಿದ ಮೈಸೂರಿನ ವಿದ್ಯಾರ್ಥಿಗಳಿಗೆ ಕನ್ನಡಭಾಷೆಯ ಉತ್ತರದ ಬಗೆ ತಿಳಿಯಲು ಅನುವಾಗಬಹುದು. ಇದರಿಂದ ಅಖಂಡ ಕರ್ನಾಟಕ ದೃಷ್ಟಿ ಉದಯವಾಗಲು ಸಹಾಯವಾದೀತು. ಅಂತೆ ಅಭ್ಯಾಸಿಗಳ ಸೌಕರ್ಯಕ್ಕಾಗಿ ಈ ಆವೃತ್ತಿಯ ಕೊನೆಯಲ್ಲಿ ಈ ಕಾದಂಬರಿಯ ವಿಶಿಷ್ಟ ಪ್ರಯೋಗಗಳು ಹಾಗೂ ಅದಕ್ಕೆ ಸಮಾನವಾದ ಮೈಸೂರು ಮಾತಿನ ಪ್ರಯೋಗಗಳು ಇಲ್ಲವೆ ಕೇವಲ ವಿವರಣೆ ಈ ಕ್ರಮವುಳ್ಳ ಶಬ್ದಕೋಶವೊಂದನ್ನು ಜೋಡಿಸಲಾಗಿದೆ. ಇದು ಎಲ್ಲ ವಿದ್ಯಾರ್ಥಿಗಳಿಗೆ ಪ್ರಯೋಜನಕಾರಿಯಾದೀತೆಂದು ನಂಬಿದ್ದೇನೆ. ಬಗೆಬಗೆಯ ಕನ್ನಡಂಗಳನ್ನು ಅಭ್ಯಾಸ ಮಾಡುತ್ತಿರುವ ಜಿಜ್ಞಾಸುಗಳಿಗೆ ಕೂಡ ಇದು ಉಪಯುಕ್ತವಾಗಬಹುದೆಂದು ಆಶೆಯಿದೆ. ಇದನ್ನು ಸಿದ್ಧಪಡಿಸುವುದರಲ್ಲಿ ಅತ್ಯಂತ ಶ್ರಮ ವಹಿಸಿ ತಮ್ಮ ಸವಿವರವಾದ ಸೂಚನೆಗಳನ್ನಿತ್ತ ನನ್ನ ಮಿತ್ರರಾದ ಶ್ರೀಮಾನ್ ತೀ. ನಂ. ಶ್ರೀಕಂಠಯ್ಯನವರಿಗೆ ನಾನು ಬೊಗಸೆತುಂಬ ನೆನಕೆಯ ಹೂಗಳನ್ನು ಅರ್ಪಿಸುತ್ತೇನೆ. ಇದನ್ನು ಪಾಠ ಹೇಳುವ ಕನ್ನಡ ಅಧ್ಯಾಪಕರೂ ಇದರ ಅಭ್ಯಾಸವನ್ನು ಮಾಡುವ ವಿದ್ಯಾರ್ಥಿಗಳೂ ತಮ್ಮ ಪರಾಮರ್ಶೆಯನ್ನು ನನಗೆ ಬಿಚ್ಚುಮನಸ್ಸಿನಿಂದ ತಿಳಿಸಬೇಕೆಂದು ಅವರಲ್ಲಿ ನನ್ನ ಬಿನ್ನಹ.

ಇದನ್ನು ಈಗ ಪ್ರಕಟಗೊಳಿಸುವದರಲ್ಲಿ ಬಹಳ ನೆರವಾದ ಶ್ರೀಮಾನ್ ಗೋವಿಂದಾಚಾರ್ಯ ಜೋಶಿಯವರಿಗೆ ನಾನು ಉಪಕೃತನಾಗಿದ್ದೇನೆ.

೧೨-೫-೧೯೪೧. ರಂ. ಶ್ರೀ. ಮುಗಳಿ

## ಇದೇ ಗ್ರಂಥಕರ್ತರ ಇನ್ನಿತರ ಗ್ರಂಥಗಳು

| | | | | |
|---|---|---|---|---|
| ೧ | ಬಾಳುರಿ (ಕಾದಂಬರಿ) | ೦ | ೧೨ | ೦ |
| ೨ | ಪಾವನಪಾವಕ (ಸ್ವಪ್ನಪ್ರಶ್ನೆಗಳು) | ೦ | ೮ | ೦ |
| ೩ | ನಾಮಧಾರಿ (ನಾಟಕ) | ೦ | ೧೨ | ೦ |
| ೪ | ಮಹಾದೇವಿಯಕ್ಕ (ನಾಟಕ) | ೦ | ೮ | ೦ |
| ೫ | ಬಾಸಿಗ (ಕವನಸಂಗ್ರಹ) | ೧ | ೦ | ೦ |

## ಅಚ್ಚಿನಲ್ಲಿದ್ದ ಗ್ರಂಥಗಳು

೧ ವಿಜಯಸಾಮ್ರಾಜ್ಯ (ನಾಟಕ)
೨ ಏಕಾಂಕ ನಾಟಕ ಸಂಗ್ರಹ
೩ ಸಣ್ಣ ಕತೆಗಳ ಸಂಗ್ರಹ
೪ ಕನ್ನಡ ಸಾಹಿತ್ಯ ಚರಿತ್ರೆ

ಪುಸ್ತಕ ದೊರೆಯುವ ಸ್ಥಳ:

**ಜೀವನ ಪುಸ್ತಕಾಲಯ, ಧಾರವಾಡ**

# ಕಾರಣಪುರುಷ

## ಪ್ರಕರಣ ೧.

ಕಾರ್ತಿಕಮಾಸದ ಬೆಳದಿಂಗಳಿನ ರಾತ್ರಿಯೊಂದು. ಅಷ್ಟಮಿಯ ಚಂದ್ರನು ಆಕಾಶಮಂಟಪದಿಂದ ಪಶ್ಚಿಮದ ಕಡೆಗೆ ಇಳಿಯುತ್ತಿರುವನು. ಊರೆಲ್ಲ ಮಲಗುವ ಹೊತ್ತಾಗಿದೆ. ಅಷ್ಟರಲ್ಲಿ ಧಾರವಾಡದ ಒಂದು ಬೀದಿಯು ಹಳೆಯ ಹೊಸ ವಾದ್ಯಗಳ ಕಲಕಲದಿಂದ ತುಂಬಿತು. ನೂರಾರು ಜನರ ಮೆರವಣಿಗೆಯೊಂದು ನಡೆದಿದೆ. ಎಲ್ಲಕ್ಕೂ ಮುಂದೆ ಬ್ಯಾಂಡು-ಬಜಂತ್ರಿಯವರು, ಅವರ ಹಿಂದೆ ಆಳುಮಕ್ಕಳು ಹಾಗೂ ನಾದಪ್ರಿಯರಾದ ಬೀದಿಯ ಹುಡುಗರು, ಅಲ್ಲಿಂದ ಸಿಂಗಾರವಾದ ಹೊಸ ಮೋಟಾರಕಾರು, ಅದರ ಹಿಂದೆ ಹೆಂಗಸರು, ಕೊನೆಗೆ ಗಂಡಸರು. ಸುತ್ತೆಲ್ಲ ಗ್ಯಾಸಬತ್ತಿಗಳ ಸೊರ್ರೆನ್ನುವ ಬೆಳಕು.

ಮೆರವಣಿಗೆಯು ಒಂದು ಸಣ್ಣ ಮನೆಯ ಮುಂದೆ ಹಾಯುತ್ತಿರುವಾಗ ಇಬ್ಬರು ಅತ್ತೆ-ಸೊಸೆಂದಿರು ಬಾಗಿಲ ಮುಂದೆ ನಿಂತು ಕಣ್ಣಾಣಿಯೆ ನೋಡಿದರು. ಅವರಿಗೇಕೋ ಸಂತೋಷವುಕ್ಕಿತು, ಮೋರೆಯರಳಿತು. ಮೋಟರಿನಲ್ಲಿ ಕುಳಿತ ವರನನ್ನು ಬಾಗಿ ನೋಡುತ್ತ ಇಬ್ಬರೂ ತಮ್ಮೊಳಗೆ ಮಾತಾಡಿದರು.

‘ ಹುಡಗೀ ದೈವ ತೆರೀತು. ಕೆಲಸಾದ ಹುಶಾರ ಗಂಡ ಸಿಕ್ಕ.’

‘ ಅಷ್ಯಾಕ ಹಿಡಿರೇ, ಹುಡುಗನ ದೈವ ತೆರೀತನ್ನರಿ ಇನ್ನೂ. ತಂದಿಲ್ಲ, ತಾಯಿಲ್ಲ ಪರದೇಶಿ ಹುಡುಗ. ಕೆಲಸ ಹಚ್ಚಿಕೊಡುವ ಮಾಮಲೇದಾರ ಮಗಳು ಇವಗ ಸಿಗತಿದ್ದಳೇನು ?’

ಮೆರವಣಿಗೆಯು ಮುಂದೆ ಸಾಗಿತು. ಅದೇ ಮಾಳಿಗೆಯ ಮೇಲೆ ಹೊರಳಿದ ರಸಿಕ ಹೆಂಗಳೆಯರನ್ನು ಒಡನೆಬ್ಬಿಸಿ ಅವರ ಕಣ್ಣೋಟವನ್ನು

ಕೈವಶಮಾಡಿಕೊಂಡು ಹಿರಿಬೀದಿಗಳಲ್ಲೆಲ್ಲ ತನ್ನ ದಿಗ್ವಿಜಯ ಮಾಡಿತು. ಕಾರಿನಲ್ಲಿ ಮೊದಲು ಎದೆಯುಬ್ಬಿ ಕುಳಿತ ಎಳಮಕ್ಕಳು ಅಷ್ಟೊತ್ತಿಗೆ ತೂಕಡಿಸಿ ನಿದ್ದೆಹೋದರು. ವರನು ತನ್ನ ತಾಳ್ಮೆಯನ್ನು ಒರೆಗೆ ಹಚ್ಚಿ ಕೊನೆಗೆ ಬೇಸತ್ತು ಮೋರೆ ಗಂಟುಹಾಕಿದನು. ನಡುನಡುವೆ ತಿಳಿಯಾದ ಮುಗಿಲಲ್ಲಿ ಮೆಲ್ಲಗೆ ಈಸುವಂತಿದ್ದ ಚಂದ್ರನನ್ನು ನೋಡಿ 'ಈ ಗದ್ದಲದಿಂದ ಒಮ್ಮೆ ಪಾರಾಗಿ ಆ ಶಾಂತಮೂರ್ತಿಯ ಹತ್ತಿರ ನಾನು ಹಾರಿ ಹೋಗಬಾರದೇಕೆ?' ಎನ್ನುವಂತೆ ತೋರುವನು. ಮೆರವಣಿಗೆಯ ಕೊನೆಕೊನೆಯು ಒಂದಂತೆ ಅವನ ನಿಟ್ಟುಸಿರು ಹೆಚ್ಚಾಗಿ ಬೇಸರದ ಆರಸಿದ್ದೆಯಲ್ಲಿ ಮೋಟರಿನ ಹಿಂಬದಿಗೆ ಅವನು ಒರಗಿಬಿಟ್ಟಿದ್ದನು.

ನಡುರಾತ್ರಿಯ ಹೊತ್ತಿಗೆ ಬೀಗರಿಗೆಂದು ಗೊತ್ತುಪಡಿಸಿದ ಮನೆಯ ಇದಿರು ಮೋಟರು ನಿಂತಿತು. ಆದರೂ ವರನು ಇಳಿಯಲಿಲ್ಲ. ಮಾಪಂದಿರೂ ಪುರೋಹಿತರೂ ಮುಂಬರಿದು ಬಂದು ವರನನ್ನು ಆರಸಿದ್ದೆಯಿಂದ ಎಚ್ಚರಿಸಿ ಇಳಿಸಿಕೊಂಡರು. ಎಲ್ಲರ ವಿನೋದಕ್ಕೆ ಅದೊಂದು ಒಳ್ಳೆಯ ನೆವವಾಯಿತು. ಪುರೋಹಿತರಂತೂ ವರನ ಕೂಡ ಮನೆಯೊಳಕ್ಕೆ ಹೋಗುತ್ತ 'ಏನು ರಾಯರೇ, ಲಕ್ಕ ಬೆಳದಿಂಗಳು ನೋಡಿ ಗೊಂಬೆಯ ಹಾಗೆ ಮಲಗಿಬಿಟ್ಟಿದ್ದಿರೇನು?' ಎಂದು ನಗೆಯಾಡಿದರು. 'ಹೌದು ಮತ್ತೆ. ನಿಮ್ಮಂಥವರ ಕೈಯೊಳಗೆ ನಾವು ಗೊಂಬೆಯೆ ಸರಿ. ಈ ಮೆರವಣಿಗೆ ಧಾರವಾಡ ಸಾಲದೆ ಕರ್ನಾಟಕದ ಉಳಿದ ಪ್ರಸಿದ್ಧ ಪಟ್ಟಣಗಳಲ್ಲಿ ಸುತ್ತಾಡಿ ಬರಬಹುದು ಎಂದು ನಾವು ಮಲಗಿಬಿಟ್ಟಿದ್ದೆವು!' ಎಂದು ನಿದ್ದೆಗಣ್ಣಲ್ಲಿಯೂ ವರದೇವನು ತನ್ನ ಉತ್ತರ ಕೊಡದೆ ಬಿಡಲಿಲ್ಲ. ಆದರೆ ಆ ಮುಂದೆ ಯಾರೂ ಮಾತಿನೆಳೆಯನ್ನು ಬಗ್ಗಲಿಲ್ಲ. ವರನ ಬುದ್ಧಿವಂತಿಕೆಯನ್ನು ಅರಿತು ತಮ್ಮ ಮನಸ್ಸಿನಲ್ಲಿ ಹೊಗಳುವವರೇ ಎಲ್ಲರು. ಮೇಲಾಗಿ ಮಾತಿನಲ್ಲಿ ತಾವು ಸೋತು ಹೋದರೂ ವರನನ್ನೂ ವರನ ಕಡೆಯವರನ್ನೂ ಸಂಭಾಳಿಸಿಕೊಂಡು ಮದುವೆಯ ಮಂಗಳ ಕಾರ್ಯವನ್ನು ಸಾಂಗಮಾಡಬೇಕೆಂಬುದೇ ಆ ಹೊತ್ತಿನ ಅನುಭವಿಕ ಹಿರಿಯರ ಮುತ್ಸದ್ದಿತನದ ಸೂತ್ರವಾಗಿತ್ತು.

ಅಂತೂ ಮದುವೆಯೆಂಬ ಮಹಾಕಾವ್ಯದ ಪೀಠಿಕಾಪ್ರಕರಣ ಎಂದರೆ ಇದಿರುಗೊಳ್ಳುವ ವಿಧಾನವು ಮುಗಿಯಿತು. ಬೆಳದಿಂಗಳು ಹೋದ ಮೇಲೆ

ಗ್ಯಾಸದೀಪಗಳ ಝಳದಲ್ಲಿ 'ಬಿಸಿಲೂಟ'ವನ್ನೂ ಮಾಡಿದರು! ಅದು ವರನು ಉಣಬಾರದ ಊಟವೆಂದೇ ಬಹುಕಾಲದಿಂದ ಪ್ರಸಿದ್ಧವಾಗಿದೆ. ಏಕೋ ಮಿಕ್ಕುತ್ತಿದ್ದ ವರನ ಕಳವಳವು ಉಕ್ಕೇರುತ್ತ ಹೋಯಿತು. ಆದರೆ ಅವನು ಇತ್ತ ತಾಳಲಾರ, ಅತ್ತ ಅಳಲಾರ ಎಂಬಂತೆ ಆದನು. ನಾಳೆ ಬೆಳಗ್ಗೆ ಬೇಗನೆ ಅಕ್ಕೀಕಾಳೆಂದು ಎರಡೂ ಕಡೆಯವರು ಒಂದೆರಡು ತಾಸು ನಿದ್ದೆಯ ಮೊರೆಹೋದರು.

ಮದುವೆಮನೆಯಿಂದ ನಾಲ್ಕು ಹೆಜ್ಜೆ ಹೋದರೆ ಬೀಗರ ಮನೆ. ಸಾವು ಲೇದಾರರ ವ್ಯವಸ್ಥೆಯೆಂದ ಮೇಲೆ ಕೇಳುವುದೇನಿದೆ? ಅಟ್ಟದ ಮೇಲೆ ಅಳಿಯನಿಗೆ ಅಚ್ಚುಕಟ್ಟಾದ ಮಂಚ, ಮೆತ್ತನ್ನ ಗಾದೆ, ಸೊಳ್ಳೆಯ ಪರದೆ, ಸುತ್ತು ಊದಬತ್ತಿಯ ಸುವಾಸ—ಈ ಎಲ್ಲವೂ ಇತ್ತು. ಅಳಿಯನು ಮಲಗಬೇಕೆಂದು ಹಾಸಿಗೆಯ ಮೇಲೆ ಬಿದ್ದುಕೊಂಡನು. ಏನು ಮಾಡಿದರೂ ನಿದ್ದೆ ಬರಲೊಲ್ಲದು. ಒತ್ತಿಕ್ಕಿದ ನೋವು ಹೊರಉಕ್ಕಿತು. ಎರಡು ತಲೆಗಿಂಬುಗಳ ನಡುವೆ ತಲೆಯೊತ್ತಿ ಅದನ್ನು ಸುಮ್ಮನಾಗಿಸಬೇಕೆಂದನು. ಇನ್ನಿಷ್ಟು ಯೋಚನೆಗಳು ನುಗ್ಗಿದವು. ಪ್ರಯತ್ನವೆಲ್ಲ ವಿಫಲವಾಗಿ ಚಟ್ಟನೆ ಎದ್ದು ಕುಳಿತನು. ಹಿಂದಿನ ಇರುವಿಕೆಯ ತುಣುಕುತುಣುಕು ಚಿತ್ರಗಳು ಕಣ್ಣಮುಂದೆ ಸುಳಿದವು. ಕಡೆಗೆ ನಿದ್ದೆಯ ಆಶೆಯನ್ನು ಪೂರಾ ಬಿಟ್ಟು ಅಟ್ಟದ ಮಾಳಿಗೆಗೆ ಹೋಗಿ ಮುಗಿಲುಮಾಳಿಗೆಯನ್ನು ನೋಡುತ್ತ ನಿಂತನು. ಏನೋ ತುಸು ಜೀವಕ್ಕೆ ಹಗುರೆನಿಸಿತು. 'ಈ ಅಸಂಖ್ಯ ಚಿಕ್ಕೆಗಳ ಕೂಟದಲ್ಲಿ ಅದಾವ ಮೋಡಿಯಿದೆಯೋ! ತಮ್ಮ ಅನಂತ ಗೊಂದಲದಿಂದಲೇ ಗೊಂದಲ-ಗೆಟ್ಟ ಜೀವವನ್ನು ಇವು ತಣಿಸುವವಲ್ಲವೇ?' ಎಂದು ತನ್ನೊಳಗೆ ಅಂದುಕೊಂಡನು. ಒಂದು ಸಂತೆಯಲ್ಲಿಯೋ ಜಾತ್ರೆಯಲ್ಲಿಯೋ ಅಕಲ್ಪಿತವಾಗಿ ಮುಸಮಳೆಯು ಬೀಳಲು ಎಲ್ಲರೂ ಗಾಬರಿಗೊಂಡು ಚದರುತ್ತಿರುವಾಗ, ಪರಿಸೆಯ ಕೂಡ ನಾನೊಬ್ಬ ಎಂಬ ಭಾವವು ಎಂಥ ದುರ್ಬಲನನ್ನೂ ಸಮಾಧಾನಮಾಡುವುದು. ಹಾಗೇ ಒಂದು ಕ್ಷಣ ಆ ತರುಣ ವರನಿಗೆ ಶಾಂತಿಸುಖವು ಸಿಕ್ಕಿತು. ಆದರೆ ಅದು ಕೊನೆಬಾಳಲಿಲ್ಲ. ಮತ್ತೆ ವಿಚಾರಝರಿಯು ಹರಿಯತೊಡಗಿತು. ತನ್ನ ಶಾಲೆ-ಕಾಲೇಜಿನ ಕಾಲದಲ್ಲಿ ತಾನು ಕಟ್ಟಿದ ಆಸೆಮನೆಗಳು ಅವನನ್ನು ಕೆಣಕುತ್ತ ಇದಿರು ನಿಂತವು. ಎಲ್ಲಕ್ಕೂ ಮಿಗಿಲಾಗಿ ಒಂದು

ಸಂಗತಿಯ ನೆನಪು ಅವನನ್ನು ಕಲಕಿಬಿಟ್ಟಿತು. ಕಾಲೇಜಿನ ಮೊದಲೆರಡು ವರ್ಷಗಳಲ್ಲಿ ಹೊಸದಾಗಿ ಹೊರಟಿರುವ ಒಂದು 'ಆದರ್ಶವಿದ್ಯಾಲಯ'ದಲ್ಲಿ ಅವನು ಕಲಿತನು. ಅಲ್ಲಿಯ ವಿಜ್ಞಾನದ ಪ್ರೊಫೆಸರೊಬ್ಬರು ಅವನಿಗೆ ಆಶ್ರಯವನ್ನು ಕೊಟ್ಟು ಎಲ್ಲ ಬಗೆಯಿಂದ ಪಾಲಕನಂತೆ ನೋಡಿಕೊಳ್ಳುತ್ತಿದ್ದರು. ಅವರಿಂದಲೇ ಒಂದು ಹೊಸ ಬಾಳಿನ ಧ್ಯೇಯವು ಅವನಲ್ಲಿ ಮೂಡಿ ಬೆಳೆಯಿತು. ಅದೆಷ್ಟೋ ಸಾರೆ ಅವನೊಡನೆ ಬಿಚ್ಚುಮನಸ್ಸಿನಿಂದ ಅವರು ತಮ್ಮ ಕೋಣೆಯಲ್ಲಿ ಮಾತಾಡುತ್ತಿದ್ದರು. ಆ ಎಲ್ಲ ಮಾತುಗಳೇ ಅವನನ್ನು ಕೆಚ್ಚೆದೆಯ ಧ್ಯೇಯವಾದಿಯನ್ನಾಗಿ ಮಾಡಿದ್ದವು. ತಮ್ಮ ಸ್ವಂತ ಜೀವನದ ಬಹಳ ಆತ್ಮೀಯವಾದ ವಿಷಯಗಳನ್ನು ಕುರಿತು ಮಾತಾಡುತ್ತ ಒಮ್ಮೆ ಅವರು ಅವನಿಗೆ ಕಾನೇರಿ ಹೇಳಿದರು: 'ವಾಮಣ್ಣಾ, ಒಂದು ಮಾತು ಹೇಳತೇನೆ. ಅದನ್ನು ನೀ ನಡಸು. ನನ್ನಂತೆ ಮೂರ್ಖನಾಗಬೇಡ. ಜಾಣರು ಜಾರುವ ದಾರಿಯಿದು. ಯಾವದೇ ಲಾಭದ ಭ್ರಾಮಕ ಕಲ್ಪನೆಯಿಂದ ಮದುವೆಯಾಗಬೇಡ. ನಮ್ಮ ತರುಣರು ಕೃತಿಶೂರರಾಗಬೇಕು. ಮಾತಿನ ಮಲ್ಲತನವು ಸಾಕಾಗಿದೆ. ಮದುವೆಯಲ್ಲಿ ಸಂಪ್ರದಾಯವು ಒಡ್ಡುವ ಸಾವಿರಾರು ಬಲೆಗಳಿಗೆ ಸಿಲುಕದೆ ತನ್ನ ಒಡನಾಡಿಯನ್ನು ಹುಡುಕಿ ಪಡೆಯುವ ತರುಣನೇ ಇಂದಿನ ಯುಗಪುರುಷನೆಂದು ತಿಳಿ. ಹೀಗಾದರೆ ಮದುವೆಯಾಗದೆ ಹೋಗಬಹುದು ಎನ್ನುವಿಯ? ಹೋಗಲಿ, **ಮದುವೆಯಾಗದೆ ಹೋಗಲಿ. ಮನುಷ್ಯನಾಗಿ ಬಾಳು**'

ಈ ನುಡಿಗಳು ವಾಮಣ್ಣನ (ವಾಮನ ಎಂಬ ಹೆಸರಿನ ಸಲಿಗೆಯ ರೂಪವಿದು.) ಎದೆಯನ್ನು ಅಲುಗಾಡಿಸಿ ಕಲ್ಲಿನಲ್ಲಿ ಕೊರೆದ ಅಕ್ಷರದಂತೆ ನಿಂತಿದ್ದವು. ಅದನ್ನು ಈಗ ನೆನೆಯುತ್ತಲೆ ಅವನ ಎದೆಗೆ ಬರೆಕೊಟ್ಟ ಹಾಗಾಯಿತು. ಕೆಲಹೊತ್ತು ಆ ವಿಷಯವನ್ನೇ ಮರಸಬೇಕೆಂದು, 'ಆ ತನ್ನ ಸ್ಫೂರ್ತಿಗುರುಗಳು ಈಗ ಎಲ್ಲಿರಬಹುದು? ಅವರನ್ನು ಕಳೆದುಕೊಂಡ ನಮ್ಮ ನಾಡಿನ ದುರ್ದೈವವೆಷ್ಟು?' ಎಂಬ ಭಾವನೆಗೆ ಇಂಬುಗೊಟ್ಟು ಕಳವಳಪಟ್ಟನು. ಆದರೆ ಕಿಡಿಗೇಡಿ ಹುಡುಗನಂತೆ ಆ ಗುರೂಪದೇಶದ ನೆನಪು ಮತ್ತೆ ತಲೆಯಲ್ಲಿ ಹುಡುಗಾಟವಾಡಹತ್ತಿತು. ಅದರೊಡನೆ ತನ್ನ ಮದುವೆಯ ಹೂಡಿಕೆಯನ್ನು ಜೋಡುಮಾಡಿ ನೆನೆದನು. ಇನ್ನು ೩-೪ ತಾಸುಗಳಲ್ಲಿಯೇ

ತನ್ನ ಸುತ್ತು ಅಕ್ಕೀಕಾಳಿನ ರಾಶಿಯು ಬಿದ್ದು ತನ್ನನ್ನು ಮದುವಣಿಗನಾಗಿ ಮಾಡಿಯೇ ತೀರುವದೆಂಬ ನಿಷ್ಠುರ ಸತ್ಯವು ಅವನನ್ನು ತಿವಿದಿತು. ಒಮ್ಮೆಲೆ ಮಾಳಿಗೆಯ ಮೇಲಿನ ಆರಾಮ ಖುರ್ಚಿಯಲ್ಲಿ ಬೀಳುತ್ತ 'ಅಯ್ಯೋ, ಯಾವುದನ್ನು ಮಾಡಬೇಡೆಂದು ನನ್ನ ಪರಮ ಗುರುವು ೫-೬ ವರುಷದ ಹಿಂದೆ ಹೇಳಿದ್ದನೋ ಅದನ್ನೇ ಮಾಡುತ್ತಿರುವೆ. ಅದೇಕೆ, ಮಾಡಿಯೇ ಬಿಟ್ಟೆ. ಘೋರಸತ್ಯವೇ, ನಿನಗಿಂತ ಯಾರು ಮೇಲು? ಬಿ. ಎ. ಆಗಿ ಕೆಲಸವಿಲ್ಲದೆ ತಿರುಕನಂತೆ ತಿರಿದು ಕೊನೆಗೆ ಒಂದು ಉಮೇದವಾರಿಯ ಆಮಿಷಕ್ಕೆ ಮನ ಸೋತು ಮಾಮಲೇದಾರರ ಮದುವೆ-ಬಲೆಗೆ ಬಿದ್ದೆ.... ಹೆಣ್ಣು ಹೇಗೋ, ನೆಟ್ಟಗೆ ನೋಡಲಿಲ್ಲ......ಒಳಗಿನ ಕಣ್ಣು ಮುಚ್ಚಿದೆ...... **ಮದುವೆಯಾದೆ, ಮನುಷ್ಯನಾಗಲಿಲ್ಲ**' ಎಂದು ಕೊನೆಯ ಮಾತನ್ನು ಗಟ್ಟಿಯಾಗಿ ಕೂಗಿಬಿಟ್ಟನು. ಕಣ್ಣಿಂದ ದಳದಳ ಎಂದು ಬಿಸಿಹನಿಗಳು ನೋವು ನೀರಾದಂತೆ ಉದುರಿದವು.

ಶಾಮಣ್ಣನು ಹೇಗೋ ಬಲುಮೆಯಿಂದ ಒಳಹೋಗಿ ಹಾಸಿಗೆಯಲ್ಲಿ ಹೊರಳಿದನು. ಒಂದೆರಡು ತಾಸು ಅವನಿಗೆ ನಿದ್ದೆ ಆಯಿತೊ ಇಲ್ಲವೊ ಅಷ್ಟರಲ್ಲಿ ಸನಾದಿಯವರ ಉದಯರಾಗವೂ ಸುರಿಗೆಯ ಸ್ನಾನದ ಸಿದ್ಧತೆಯನ್ನು ನಡಸಿದವರ ಕಲಕಲದ ಭೈರವ ರಾಗವೂ ಕೂಡಿ ಅವನನ್ನು ಎಬ್ಬಿಸಿಬಿಟ್ಟವು. ಬೆಳಗಾಯಿತು, ಸೂರ್ಯ ಬಂದನು, ಅಷ್ಟೇ ಕಣ್ಣು ಕೆಂಪಗೆ ಮಾಡಿಕೊಂಡು ಅವನೂ ಎದ್ದನು.

ಸುರಿಗೆಯೆರೆದರು, ಹೊಸ ಬಟ್ಟೆಗಳನ್ನು ಕೊಟ್ಟು ವರಮೂರ್ತಿಯನ್ನು ಸಜ್ಜುಗೊಳಿಸಿದರು. ಮುಂಜಾನೆ ಎಂಟುವರೆ ಗಂಟೆಗೆ ಅಕ್ಷತೆಯಿದ್ದುದರಿಂದ ತಡಮಾಡದೆ ಪದ್ಧತಿಯಂತೆ ಅವನನ್ನು ಲಗ್ನಮಂಟಪಕ್ಕೆ ಕರೆದೊಯ್ದರು.

ಲಗ್ನಮಂಟಪದ ಸಿಂಗಾರವು ಹೇಳತೀರದು. ಮಾಮಲೇದಾರ ಬೆಣ್ಣೆ ಭೀಮರಾಯರ ಮಗಳ ಮದುವೆಯೆಂದರೆ ಸಾಕು. ಹತ್ತಿಪ್ಪತ್ತು ದಿನಗಳ ವರೆಗೆ ಕೈಕೆಳಗಿನ ಅಧಿಕಾರಿಗಳೂ ಆಳುಮಕ್ಕಳೂ ಕೂಡಿ ಮಾಡಿ ಒಂದು ಹೊಸಕಾಲದ ರಾಜಸಭೆಯನ್ನೇ ನಿರ್ಮಾಣಮಾಡಿದ್ದರು. ಭೀಮರಾಯರು ಸಣ್ಣ ಹುದ್ದೆಯಿಂದ ಮೊನ್ನೆ ಮೊನ್ನೆ ಮಾಮಲೇದಾರಿಕೆಗೆ ಏರಿದವರು. ಆಳಾಗಿ ದುಡಿದವರಿಗೆ ಅರಸಾಗಿ ಉಣ್ಣಲು ಸರಿಯಾಗಿ ಗೊತ್ತಿರುವದೆಂಬಂತೆ

ಅಧಿಕಾರದರ್ಪದಿಂದ ತಮ್ಮ ಕೆಳಗಿನವರಿಂದ ಕೆಲಸಮಾಡಿಸಿಕೊಂಡು ಸುಖ ಬಡುವ ರೀತಿಯೂ ಅವರ ಗುಣವಿಶೇಷವಾಗಿತ್ತು. ಭೀಮರಾಯರೆಂದರೆ ಎಲ್ಲರಿಗೂ ಬೆದರಿಕೆ; ಅಷ್ಟು ಅಬ್ಬರ ಅವರದು. ಅವರ ಮೈಕಟ್ಟಿನಲ್ಲಿಯೂ ನಡಿಗೆ ನೋಟಗಳಲ್ಲಿಯೂ ಅಂಥ ಆಳರಸತನವು ಇಳಿದುಬಿಟ್ಟಿತ್ತು. ಸಾದಗಪ್ಪಾದ ಆಜಾನುಬಾಹು ಆಳು, ಮುಂದೆ ಬಂದ ಹೊಟ್ಟೆ, ದೊಡ್ಡಮೂಗಿನ ದುಂಡು ಮೋರೆ. ನಡೆವಾಗ ಅಡ್ಡಡ್ಡವಾಗಿ ಹೆಜ್ಜೆಬಿದ್ದು ಅವರಿಗೆ ಪ್ರಯಾಸವಾಗು ತ್ತಿದ್ದರೂ ಅದನ್ನು ಮುಚ್ಚಿಕೊಂಡು ಕೋಗಣ್ಣಿನಿಂದ ನೋಡಿ ನಾಗುವ ಹುದ್ದೇದಾರನ ಹಿರಿಬಿಂಕವು ಅವರಲ್ಲಿ ನೋಡುವಂತಿತ್ತು. ಅಂಥವರ ಮನೆ ಮದುವೆಯೆಂದ ಮೇಲೆ ಅಂಗಳದಲ್ಲಿ ಬೆರಗುಗೊಳಿಸುವ ಮಂಟಪವು ಸಿದ್ಧವಾಗಿತ್ತು. ಅದರಲ್ಲಿ ಹಳೆಯ ಪದ್ಧತಿಯ ಬಾಳೆದಿಂಡುಗಳೂ ಹೊಸ ರೀತಿಯ ಬಣ್ಣದ ಕಾಗದಗಳೂ ಕೂಡಿಕೊಂಡಿದ್ದವು. ಒಂದು ಕಡೆ ಫೋನೋಗ್ರಾಫಿನ ಉಚ್ಚಸ್ವರ, ಇನ್ನೊಂದು ಕಡೆ ವೈದಿಕರ ಮಂತ್ರಘೋಷ.

ಅಕ್ಕೀಕಾಳಿನ ಹೊತ್ತು ಸಮೀಪಕ್ಕೆ ಬಂದಿತು. ಜನಸಂದಣಿಯಿಂದ ಮಂಟಪವು ಕಿಕ್ಕಿರಿದು ತುಂಬಿತ್ತು. ವರನು ಲಗ್ನವೇದಿಕೆಯ ಮಣೆಯ ಮೇಲೆ ಕುಳಿತಿರುವನು. ಹತ್ತಿರದ ಬಂಕದಲ್ಲಿ ಮಾತ್ರ ಎಲ್ಲರ ಲಕ್ಷ್ಯವನ್ನು ಎಳೆಯುವ ಒಂದು ದೃಶ್ಯವು ನಡೆದಿತ್ತು. ನಿಲುವಂಗಿಯ ಮೇಲೆ ದೊಡ್ಡ ಜರದ ರುಮಾಲು ಹಾಕಿಕೊಂಡು ಕುಳಿತ ಬಿಳಿಗೂದಲಿನ ಹಣ್ಣುಮುದುಕರೊಬ್ಬರು ತಮ್ಮೊಳಗೆ ಗುಣುಗುಣಿಸುತ್ತಿದ್ದರು. ಅವು ವೇದಮಂತ್ರಗಳಲ್ಲವೆಂದೂ ಲಗ್ನದ ಲೌಕಿಕಕ್ಕೆ ಸಂಬಂಧಪಟ್ಟ ಕಿಡಿನುಡಿಗಳೆಂದೂ ಅನುಭವಿಕರು ತಿಳಿಯ ಬಹುದಾಗಿತ್ತು. ಎಲ್ಲರ ಕಣ್ಣಿನ ಸುಳಿವು ಹಿಡಿದು ವಾಮಣ್ಣನು ಅತ್ತ ನೋಡಿದನು. ಆ ಮುದುಕರು ಅವನ ತಾಯಿಯ ತಂದೆಯಾದ ಅಪ್ಪು ರಾಯರು. 'ಅನಾಥ ಹುಡುಗ ನಮ್ಮ ಮೊಮ್ಮಗ. ಅವನಿಗೆ ವ್ಯವಹಾರ ತಿಳಿಯದು. ಅವನ ಮೋಸಮಾಡಿ ವರದಕ್ಷಿಣೆಯಿಲ್ಲದಂತೆ ಈ ಮದುವೆಯನ್ನು ಹೂಡಿರುವರೆ'ಂದು ಅವರ ಮುಖಚರ್ಯೆಯು ದೂರುತ್ತಿತ್ತು. ಹೆಣ್ಣಿನ ಕಡೆಯ ಪುರೋಹಿತರು ಅವರನ್ನು ಒಳಗೆ ಕರೆದೊಯ್ದು ಏನೋ ರಹಸ್ಯ ಮಾಡಿ ಹೊರಬಂದರು. ಅಪ್ಪುರಾಯರಿಗೆ ಸಮಾಧಾನವಾಗಲಿಲ್ಲ. ಅವರು ನಡುನಡುಗುತ್ತ ಎದ್ದು ಹೋಗಿ ವಾಮಣ್ಣನನ್ನು ಮಣೆಯಿಂದ ಹೊರ

ಕರೆದು 'ಅಕ್ಕೀಕಾಳಿಗೆ ಕೂಡಬ್ಯಾಡ ನೀ. ಅದೇನು ಮಾಡತಾರ ನೋಡೂಣ' ಎಂದು ತಮ್ಮ ಹತ್ತಿರ ಕೂಡಿಸಿಕೊಂಡರು. ಅವರಿಗೆ ಎಲ್ಲಾ ಪರಿಸ್ಥಿತಿಯನ್ನು ಸೌಮ್ಯವಾಗಿ ವಾಮಣ್ಣನು ತಿಳಿಸಿ ಹೇಳಿದನು. ಅವರೇನು ಕೇಳಲಿಲ್ಲ. ಅಕ್ಕೀ ಕಾಳಿನ ಗಳಿಗೆಬಟ್ಟಲವು ತುಂಬುವ ಹೊತ್ತು ಸಮೀಪಿಸಿತು. ಈ ಸುದ್ದಿ ಹೆಣ್ಣುಮಕ್ಕಳ ಗುಂಪಿನಲ್ಲಿ ಹೊಕ್ಕಿತು. ಹೆಣ್ಣಿನ ಕಡೆ ಯಾವಳೊ ಒಬ್ಬ ಕುಚೋದ್ಯಗಾತಿಯು ಅಳಿಯನಿಗೂ ಅಜ್ಜನಿಗೂ ಕೇಳುವಂತೆ ಬಾಗಿಲ ಬಳಿ ಯಲ್ಲಿ ನಿಂತು ಆಡಿದಳು: 'ಬಿಕಾರಿಗೆ ಬಂಗಾರದಂಥ ಕೆಲಸ ಹಚ್ಚಿಕೊಟ್ಟ ಮ್ಯಾಲ ಮುತ್ಯಾಕ ವರದಕ್ಷಿಣೆ ಅಂಬೂದು!' ನೆರೆದ ಕೆಲವು ಮುತ್ತೈದೆ ಯರು ನಕ್ಕರು. ಅಜ್ಜನ ಸಿಟ್ಟು ಬ್ರಹ್ಮರಂಧ್ರಕ್ಕೆ ಮುಟ್ಟಿತು. ವಾಮಣ್ಣನು ಒಳಗೊಳಗೆ ಉರಿದು ಗಪ್ಪುಗಾರಾಗಿ ಕುಳಿತನು. ಕೊನೆಗೆ ಭೀಮರಾಯರ ವರೆಗ ಈ ಕಥೆಯು ಹೋಯಿತು. ಅವರು ಸದ್ಗೃಹಸ್ಥರ ಸ್ವಾಗತವನ್ನು ಸ್ವಲ್ಪ ನಿಲ್ಲಿಸಿ ಲಗುಬಗೆಯಿಂದ ಬಂದು 'ಏನು ಅಪ್ಪುರಾಯರೇ, ಹಿರಿ ಯರು ಕೂತು ಮಂಗಳಕಾರ್ಯಕ್ಕೆ ವಿಘ್ನ ತರಬೇಕೇ, ಹೇಳಿರಿ. ಕಾರ್ಯ ಸಾಂಗವಾಗಲಿ. ವಾಮನರಾಯರು ಇನ್ನ ಮ್ಯಾಲೆ ನಮ್ಮ ಅಳಿಯಂದರು, ನಿಮ್ಮ ಮೊಮ್ಮಕ್ಕಳಲ್ಲ. ಅವರ ಡನಿಂದ ನಾ ಏನು ಮಾಡೇನು, ಏನು ಮಾಡ ಲಿಕ್ಕಿಲ್ಲ. ನನ್ನ ಮ್ಯಾಲ ವಿಶ್ವಾಸ ಇಡರಿ. ನಿನ್ನೇ ಕಮಿಶನರ ಸಾಹೇಬರ ಭೆಟ್ಟಿ ಆಗಿತ್ತು. ನಮ್ಮ ಅಳಿಯನಿಗೆ ಲಗೂನೆ ಪ್ರಬೇಶನರಿಯೊಳಗೆ ತಗೊ ಳ್ಳೇಣ ಎಂದು ವಚನ ಕೊಟ್ಟರು' ಎಂದು ಮೊದಲಾಗಿ ಅಳ್ಳು ಹುರಿದಂತೆ ಮಾತಾಡಿ ಮನವೊಲಿಸಿದರು.

ಲಗ್ನವೇದಿಕೆಯ ಮೇಲೆ ಇದುರುಬದುರಾಗಿ ವಧೂವರರು ನಿಂತಿರು ವರು. ನಡುವೆ ಅಂತಃಪಟವನ್ನು ಗಟ್ಟಿಯಾಗಿ ಹಿಡಿದಿದ್ದಾರೆ. ಅಕ್ಕಿಕಾಳು ಹಂಚುವ ಓಡಾಟವು ನಡೆದಿದೆ. ಬ್ರಾಹ್ಮಣರು ಮಂಗಳಾಷ್ಟಕವನ್ನು ಏರೇರು ದನಿಯಿಂದ ಹೇಳುತ್ತಿರುವರು. ವಾಮಣ್ಣನಿಗೆ ಮಾತ್ರ ವಿಚಿತ್ರ ವೇದನೆಯಾ ಗುತ್ತಿದೆ. ಕೆಲವು ದಿನಗಳ ಹಿಂದೆ ಕಾಲೊಳಗೆ ಗೋಣಿಟ್ಟು ಕುಳಿತ ಕನ್ಯೆ ಯನ್ನು ನೋಡಿ ತಾನು ಮದುವೆಗೊಪ್ಪಿದನು. ತಿರುಗಿ ಅವಳನ್ನು ನೋಡ ಲಿಲ್ಲ. ಅವಳ ಮೈಮಾಟವನ್ನೂ ಮನಸ್ಸನ್ನೂ ಗುರುತಿಸಲಿಲ್ಲ. ಇಂದು ಅವ ಳೊಡನೆ ಮದುವೆ. ಆಯುಷ್ಯದ ಕಗ್ಗಂಟು ಇಬ್ಬರನ್ನೂ ಬಿಗಿಯುತ್ತಿದೆ.

ಈಗಾದರೂ ಒಂದು ಕ್ಷಣ ಆವಳನ್ನು ಸರಿಯಾಗಿ ನೋಡಬಾರದೆಂಬುವಂತೆ ಈ ಅಂತಃಪಟವನ್ನು ನಡು ನಿಲ್ಲಿಸಿರುವರು. ಇವರು ಒಂದು ಉಕ್ಕಿನ ಗೋಡೆ ಯನ್ನೇ ನಮ್ಮಿಬ್ಬರ ನಡುವೆ ಕಟ್ಟಿ ಬೇಕಾದಷ್ಟು ಉತ್ಸವದಿಂದ ನಮ್ಮ ಮೇಲೆ ಸಿಡಿಲಿನ ಅಕ್ಷತೆಗಳನ್ನು ಯಾಕೆ ತೂರಬಾರದು? ಈ ಅಂತಃಪಟವು ನಮ್ಮ ಅಂತಃಕರಣದ ಅಗಲಿಕೆಯ ಗುರುತೇ ಆದೀತೇ?......ಈ ಯೋಚನೆ ಯಿಂದ ಅವನ ಮೈ ಜುಮ್ಮೆಂದಿತು. ಆ ದಾರಿಯಲ್ಲಿ ಮನಸ್ಸನ್ನು ಹರಿಬಿಡು ವುದು ಬೇಡೆಂದು ತಲೆಕೊಡವಿ ಮೇಲೆ ನೋಡಿದನು. ಅಂತಃಪಟದ ಆಚೆ ಬಾಗಿ ನಿಂತ ಎಳಗನ್ನೆಯ ಕೂದಲ ಕಪ್ಪು ಕಂಡಿತು, ಮೋಡದ ತುದಿಯ ಚಂದ್ರನಂತೆ ಮೋರೆಯೂ ತುಸು ಕಂಡಿತು. ಅದನ್ನು ನೋಡಿದೊಡನೆ ಅದೇಕೊ ಒಂದು ಹೆಚ್ಚಿನ ಸಮಾಧಾನವು ಮೈದುಂಬಿತು. ತಾನು ಅರಿಯದ ಶಕ್ತಿ ತನಗೆ ಒಪ್ಪುವಂಥ ಹೆಣ್ಣನ್ನೇ ಆಯುಷ್ಯದ ಜೊತೆಗಾರಳನ್ನಾಗಿ ಕೊಟ್ಟಿರ ಬಹುದು ಎಂದುಕೊಂಡು ಮದುವೆಯ ಮುಂದಿನ ವಿಧಾನಗಳಿಗೆ ಸಿದ್ಧ ವಾದನು. ಮಂತ್ರ, ವಾದ್ಯ, ಕೂಗಾಟ-ಕಿರಿಚಾಟ ಮೊದಲಾದ ಗೊಂದಲದ ಮೇಳದಲ್ಲಿ ಅಕ್ಕಿಕಾಳು ಬಿದ್ದವು. ಎಲ್ಲರೂ ಸಂತುಷ್ಟರಾದರು. ಮಾಮಲೆ ದಾರರು ಪಾರಾದರೆಂದು ನೆರೆದ ಸಭ್ಯಗೃಹಸ್ಥರು ತಾಂಬೂಲ ತಕ್ಕೊಂಡು ಮನೆಗಳಿಗೆ ತೆರಳಿದರು. ಪಾರಾಗಲಿಕ್ಕೆ ಅಂಥ ಕುತ್ತೇನು ಬಂದಿತ್ತೆಂಬುದು ಸಣ್ಣ ಪುಟ್ಟ ತರುಣಮಂಡಳಿಗೆ ತಿಳಿಯಲಿಲ್ಲ. ಸಂಸಾರ ಮಾಡದೆ ಹೆಣ್ಣು ಹುಟ್ಟದೆ ಅದು ತಿಳಿಯುವಂಥ ವಿಷಯವೂ ಅಲ್ಲ!....

ಮುಂದಿನ ಶಾಸ್ತ್ರವಿಧಿಗಳು ಒಂದೊಂದಾಗಿ ಜರುಗಿದವು. ಸಾಡೆ ಮುಗಿದ ಮೇಲೆ ಧರ್ಮಪತ್ನಿಯಾದ ಪದ್ಮಕ್ಕನು ಬೀಗರ ಮನೆಗೆ ಹೋದಳು. ಆವಳನ್ನು ಕಣ್ತುಂಬ ನೋಡಬೇಕೆಂದು ಹಂಬಲಿಸುವ ವಾಮಣ್ಣನ ಜೀವಕ್ಕೆ ಈಗ ಅನುವು ದೊರೆಯಿತು. ಅವನ ಅಕ್ಕನಿಂದ ಹೆಳಲು ಹಾಕಿಸಿಕೊಳ್ಳುತ್ತ ಪದ್ಮಕ್ಕನು ಬಂಕದಲ್ಲಿ ಕುಳಿತಿರುವಳು. ಆ ಬಂಕದ ಇದಿರಿನ ಅಟ್ಟದ ಕೋಣೆ ಯಲ್ಲಿ ಕಿಡಿಕಿಯೊಳಗಿಂದ ಆವಳನ್ನು ನೋಡುತ್ತ ವಾಮಣ್ಣನು ತಿರುಗಾಡು ತ್ತಿರುವನು. ಕಳವಿನಿಂದಾದರೂ ಸಾವಧಾನದಿಂದ ಕಣ್ಣು ತುಂಬಿ ಆವಳನ್ನು ನೋಡುತ್ತಿರುವನು. ಗೋದಿಗೆಂಪಾದ ಬಣ್ಣ, ದಪ್ಪನ್ನ ಮೈ, ಅಗಲವು ಎದ್ದು ಕಾಣುವ ಮೋರೆ, ಮೂಗು ಚೂಪಲ್ಲ ಮೊಂಡಲ್ಲ, ಸ್ಥಿರವಾದ ಕಣ್ಣು

ಆ ಈ ಹಾವಭಾವ, ಒನಪು-ಒಯ್ಯಾರವನ್ನರಿಯದ ಸರಳವಾದ ಮುಖ
ಚರ್ಯೆ, ಹತ್ತಿರದಲ್ಲಿ ನೋಡಿದ ಮೇಲೆ ವಾಮಣ್ಣನಿಗೆ ಒಂದು ಮಾತು
ನಿಚ್ಚಳವಾಗಿ ಅನಿಸಿತು. ಇವಳು ಕಂಡಕೂಡಲೆ ಮನಸ್ಸೆಳೆಯುವ ಮೋಹಿನಿ
ಯೇನು ಅಲ್ಲ, ಹೀಗೆಂದು ಒಲ್ಲೆನಿಸುವ ಕುರೂಪಿಯೂ ಅಲ್ಲ. ಇವಳ ಸರಳ
ಮುಗ್ಧ ಸ್ವಭಾವವು ಇವಳ ರೂಪದಲ್ಲಿ ಒಡೆದು ಕಾಣುವಂತಿದೆ. ಇದಕ್ಕಿಂತ
ಹೆಚ್ಚೇನು ಬೇಕು? ಪ್ರೇಮದಿಂದ ಇಬ್ಬರೂ ಬೆರೆತು ಬಾಳಿದರೆ ಆ ದಿವ್ಯ
ಲೋಕದಿಂದ ಯಾರು ನಮ್ಮನ್ನು ತಳ್ಳಬಲ್ಲರು?....ಎಂದು ಮುಂತಾಗಿ
ತನ್ನ ಮುಂದಿನ ಸಂಸಾರದ ಸವಿಗನಸುಗಳನ್ನು ಅನುಭವಿಸುವಂತೆ ಹಿಗ್ಗಿದ
ಮುಖದಿಂದ ಕಿಡಿಕಿಯಲ್ಲಿ ಬಾಗಿ ನಿಂತಿದ್ದನು. ತನ್ನ ತುರುಬಿನ ಮೇಲೆ ಹಿಂಗ
ಡೆಗೆ ಎರಡೂ ಕೈಗಳನ್ನಾಡಿಸುತ್ತ ಏನೂ ಕಲ್ಪನೆಯಿಲ್ಲದೆ ಒಮ್ಮೆಲೆ ಪದ್ದ
ಕ್ಕನು ಅವನನ್ನು ನೋಡಿದಳು. ತಟ್ಟನೆ ನಾಚಿ ಬಾಗಿದಳು, ಮತ್ತೆ ನೋಡಿ
ಮತ್ತೆ ಬಾಗಿದಳು ಅಷ್ಟರಲ್ಲಿ ವಾಮಣ್ಣನ ವಾಮನರೂಪವು ಅವಳ ಕಣ್ಣಲ್ಲಿ
ಮೂಡಿಬಿಟ್ಟಿತು. ಆ ಕೆಂಪಗಿನ ದುಂಡನ್ನ ಮೋರೆ, ನೇಟಾದ ಮೂಗು,
ಹೊಳೆಯುವ ಕಣ್ಣು, ಹರವಾದ ಹಣೆ ಎಲ್ಲವೂ ಅವನ ಸೊಬಗನ್ನು ಸಾರಿ
ದವು. ಅವಳು ನೋಡಿದ್ದಕ್ಕೋ ಏನೋ ತಾನೂ ತುಸು ನಾಚಿದವನಂತೆ
ವಾಮಣ್ಣನು ಹಿಂಜರಿದು ಕೋಣೆಯ ಇನ್ನೊಂದು ಬದಿಗೆ ಹೋದನು.
ಅಲ್ಲಿಂದಲೂ ಪದ್ದಕ್ಕನನ್ನು ಅವನು ಬಾಗಿ ಬಾಗಿ ನೋಡುವುದನ್ನು ಬಿಡಲಿಲ್ಲ.
ಅವನಕ್ಕನು ಹೆರಳು ಮುಗಿಸಿ ತನ್ನ ಕೆಲಸಕ್ಕೆ ಒಳಗೆ ಹೋದಳು ಪದ್ದಕ್ಕನು
ಕನ್ನಡಿಯಲ್ಲಿ ಮೋರೆ ನೋಡುತ್ತ ಹಣಿಗೆಯಿಂದ ಬೈತಲು ಸರಿಗೊಳಿಸುತ್ತ
ಒಬ್ಬಳೇ ಕುಳಿತಳು. ಇಡೀ ಮದುವೆಯ ಸಮಾರಂಭದ ೪ ೫ ದಿನಗಳಲ್ಲಿ
ಹೀಗೆ ಅವಳು ಒಬ್ಬಳಾಗಿ ಇದ್ದುದು ವಾಮಣ್ಣನಿಗೆ ಕಂಡಿರಲಿಲ್ಲ. ಅವಳನ್ನು
ಸ್ವಲ್ಪಾದರೂ ನುಡಿಯಿಸಬೇಕೆಂಬ ಅವನ ಒಳಒಳಗಿನ ಬಯಕೆಗೆ ಈ ವರೆಗೆ
ಆಸ್ಪದವೇ ದೊರೆತಿರಲಿಲ್ಲ. ತನ್ನವಳೆಂದು ಮದುವೆಯಾದವಳು ತನ್ನೊಡನೆ
ಮೊದಲೆಂದೂ ಮಾತಾಡದೆ ತನ್ನ ಹೆಂಡತಿಯೆಂದು ಕರೆಯಿಸಿಕೊಳ್ಳುವ ಈ
ವಿಶ್ವವೈಚಿತ್ರ್ಯವೆಂಥದು ಎಂದು ಅವನು ದಿಗಿಲುಗೊಂಡಿದ್ದನು. ಕಾಲೇಜಿ
ನಲ್ಲಿ ಆದರ್ಶವಿವಾಹಪದ್ಧತಿಯ ಬಗ್ಗೆ ಗೆಳೆಯರೊಡನೆ ಹರಟೆ ಹೊಡೆಯು
ವಾಗ ಅವನು ಯಾವಾಗಲೂ ಹುರಿಗೊಂಡು ಹೇಳುತ್ತಿದ್ದನು. 'ಗಂಡ-

ಹೆಂಡತಿ ಎಂದು ಎನಿಸಿಕೊಳ್ಳುವವರು ತಮ್ಮೊಳಗೆ ತಾವು ಮುಕ್ತಮನಸ್ಸಿನಿಂದ ಮೊದಲು ಮಾತುಕತೆಯಾಡಬೇಕು. ಅದೇ ಆದರ್ಶವಿವಾಹದ ಮೊದಲನೇ ಮೆಟ್ಟಲು. ಅದೆಲ್ಲಾ ಇಲ್ಲಿ ಅದೃಶ್ಯವಾಗಿಬಿಟ್ಟಿತ್ತು. ಕಾಲೇಜಿನ ಮೇಲಟ್ಟದ ನೂರಾರು ಮೆಟ್ಟಲುಗಳನ್ನು ಜಾರಿ ಸತ್ಯಸೃಷ್ಟಿಯ ಹುರುಬರಕಾದ ನೆಲಕ್ಕೆ ತಾನು ಉರುಳಿರುವೆನೆಂದು ಇತ್ತೀಚೆ ಅವನಿಗೆ ತೋರಿತ್ತು. ಆದರೂ ಆದರ್ಶದ ಎತ್ತರಕ್ಕೆ ಆಗಾಗ ಕೈಚಾಚುವ ಅವನ ಹವ್ಯಾಸವು ಕಡಿಮೆಯಾಗಿರಲಿಲ್ಲ. ಅಂತೆ ಈಗ ಪದ್ಮಕ್ಕನನ್ನು ಮಾತನಾಡಿಸಿಬಿಡಬೇಕೆಂದು ಬಹಳ ಹುರುಪಿನಿಂದ ಅಟ್ಟದಿಂದ ಕೆಳಗೆ ಸರಸರನಿಳಿದು ಅವಳು ಕುಳಿತ ಕಡೆಗೆ ಹೋದನು. ಅವನನ್ನು ನೋಡಿದೊಡನೆ ಪದ್ಮಕ್ಕ ಕೈಕಸ್ತುಡಿಯೊಡನೆ ಚಟಕ್ಕನೆ ಎದ್ದು ನಿಂತಳು. ಅವನ ಗಿಡ್ಡ ನಿಲುವಿಕೆ, ಅವಳ ಎತ್ತರ ಎರಡೂ ಸಮರೇಖೆಯಾದವು. ಮುಂದೆ ನಡುಮನೆಗೂ ಅಡಿಗೆಮನೆಗೂ ಅವನು ಹೊರಟಿರಬಹುದೆಂದು ಪದ್ಮಕ್ಕನು ಗೋಡೆಯ ಕಡೆಗೆ ಮೋರೆತಿರುಪಿದಳು. ಅವನು ಹೋಗದೆ ಕಂಬಕ್ಕೆ ಒತ್ತುಕೊಂಡು ನಿಂತನು. ಅವನಿಗೆ ಏನು ಮಾತಾಡಬೇಕು ಎಂಬುದೇ ಹೊಳೆಯಲೊಲ್ಲದು. ಅವನು ವಿಚಾರದಲ್ಲಿ ಬಿದ್ದು ಆಕಾಶವನ್ನು ನೋಡುತ್ತಿದ್ದಾನೆ. ಅವಳು ಮೊದ್ದಾಗಿ ಗೋಡೆಯನ್ನು ನೋಡುತ್ತಿರುವಳು. ಒಂದೆರಡು ನಿಮಿಷಗಳಾಗಲು ತನ್ನ ಮಾತಿನ ರಚನೆಯನ್ನು ಗೊತ್ತುಪಡಿಸಿ ವಾಮಣ್ಣನು 'ಅಲ್ಲ, ಪದ್ಮಾ, ನಿನ್ನ . . . . ' ಎಂದು ಬೆನ್ನು ತಿರುವಿ ನೋಡುತ್ತಾನೆ. ಅಷ್ಟರಲ್ಲಿ ಯಾವುದನ್ನು ಅವಳು ನೋಡುತ್ತ ನಿಂತಿದ್ದಳೋ ಪರಿದಾತಲು ಸಾಧ್ಯವಿಲ್ಲದ ಆ ಗೋಡೆ ಅಲ್ಲಿದೆ, ಅವಳು ಮಾತ್ರ ಮಟಮಾಯವಾಗಿಬಿಟ್ಟಿರುವಳು !

ಈ ಸಣ್ಣ ನಿರಾಶೆಯು ವಾಮಣ್ಣನ ಎದೆಯಲ್ಲಿ ಒಂದು ದೊಡ್ಡ ಮುಳ್ಳು ಮುರಿದಂತೆ ಅಳುಕತೊಡಗಿತು. ಅವನು ಬರೆದ ತನ್ನ ಭವಿಷ್ಯದ ಕಲ್ಪನಾಚಿತ್ರವನ್ನು ಅದು ಒರಸಿಬಿಟ್ಟಿತು. ಏನು ಮಾಡಬೇಕೆಂದು ತಿಳಿಯದೆ ತನ್ನ ಕೋಣೆಗೆ ಹೋಗಿ ಅವನು ಆರಾಮುಖುರ್ಚಿಯ ಮೇಲೆ ಬಿದ್ದುಕೊಂಡನು. 'ಮಾಮುಲೇದಾರರ ಮಗಳೆಂದು ಎಷ್ಟು ಸೊಕ್ಕದು !' ಎಂದು ಹೆಂಡತಿಯನ್ನು ಮೊದಲು ಶಪಿಸಿದನು. 'ಸೊಕ್ಕಿರಬಾರದು' ಎಂದು ಮರುಕ್ಷಣದಲ್ಲಿ ತೋರಲು 'ಹಾಗಾದರೆ ಇಷ್ಟು ಪರಿನಾಚುವುದೇ' ಎಂದು

ಆ ತ್ರೋಚಿಕೆಗೆ ತನ್ನಲ್ಲಿ ಸವಾಲು ಹಾಕಿದನು. 'ಒಳಗೆ ಯಾರಾದರೂ ಆ ಹೊತ್ತಿಗೆ ಕರೆದಿರಬಹುದು' ಎಂದು ಇನ್ನೊಂದು ಯೋಚನೆ ಹಣಿಕಿತು. 'ಆದರೇನು? ಈಗ ಬರುವೆನೆಂದು ತುಸು ಮಾತನಾಡಿ ಹೋಗಬಾರದೇ! ಎಂದು ಆ ಯೋಚನೆಯನ್ನು ಅತ್ತ ದಬ್ಬಿದನು. ಹೀಗೆ ಏನೇನೋ ಕಲ್ಪಿಸುತ್ತ ಬಿದ್ದಲ್ಲಿಯೇ ಒದ್ದಾಡಿದನು, ಅತ್ತ ನಿದ್ರೆಯು ಜೊಂಪು ಎಲ್ಲವನ್ನೂ ಮರೆಗೆ ಹಾಕಿತು. ನಿಜವಾದ ಕಾರಣವನ್ನು ತಿಳಿಯುವ ಬುದ್ಧಿಯನ್ನೂ ಬಲಿಯ ಬೇಕೆಂದೇ ಆ ನಿದ್ರೆಯು ತನ್ನ ಬಲೆಯನ್ನು ಬೀಸಿರಬೇಕು!

ಕಳವೂಟವು ಮದುವೆಯ ಕಾರ್ಯಕ್ರಮವನ್ನು ಕೊನೆಗಾಣಿಸಿತು. ಮದುವೆಗೆ ಬಂದ ಎರಡೂ ಕಡೆಯ ಬಳಗದ ಜನರು ತಮ್ಮೂರಿಗೆ ಹೊರಟುಹೋದರು. ತಾನೆಲ್ಲಿ ಇರಬೇಕು? ಏನು ಮಾಡಬೇಕು? ಎಂಬ ವಿಚಾರದಲ್ಲಿ ವಾಮಣ್ಣನು ಮುಳುಗಿದ್ದನು. ಹತ್ತು ವರುಷದ ಹಿಂದೆ ತಂದೆ-ತಾಯಿ ತೀರಿದ್ದರು. ಅವರು ಬಿಟ್ಟುಹೋದ ಒಂದು ಹೊಲದ ಪಟ್ಟಿ, ಮುರುಕು ಮನೆ, ಹಳ್ಳೂರು ಎಂಬ ದೂರದ ಹಳ್ಳಿಯಲ್ಲಿ ಇದ್ದುವು. ಅವನ ಅಜ್ಜ ಅಪ್ಪುರಾಯರೂ ಅದೇ ಊರವರಾದ್ದರಿಂದ ತಮ್ಮ ಹೊಲಮನೆ ಯೊಡನೆ ಅವುಗಳ ಆಗುಹೋಗು ನೋಡುತ್ತಿದ್ದರು. ಆಗುವುದಕ್ಕಿಂತ ಅವುಗಳಿಂದ ಹೋಗುವುದೇ ಹೆಚ್ಚಾಗಿತ್ತು. ಬಹಳೆಂದರೆ ವರ್ಷಕ್ಕೆ ಇಪ್ಪತ್ತು ರೂಪಾಯಿ ವಾಮಣ್ಣನ ಕೈಗೆ ಬೀಳುತ್ತಿದ್ದುವು. ಆದರೆ ಹಳ್ಳೂರೆಂಬ ಆ ಹೆಸರು ಅವನ ಹೆಸರಿನೊಡನೆ ಅಂಟಿಕೊಂಡು ಯಾವಾಗಲೂ ತನ್ನ ನೆನ ಪನ್ನು ಅವನಿಗೆ ಕೊಡುತ್ತಿತ್ತು. ಇಂಗ್ಲಿಷ್ ಶಾಲೆಯ ಕಡೆಯ ಮೂರು-ನಾಲ್ಕು ವರುಷಗಳನ್ನೂ ಕಾಲೇಜಿನ ನಾಲ್ಕು ವರುಷಗಳನ್ನೂ ಅವನು ಅಪ್ಪುರಲ್ಲಿಯೂ ಗುರುಗಳಲ್ಲಿಯೂ ಇದ್ದುಕೊಂಡೇ ಕಳೆದಿದ್ದನು. ಮುಂದೆ ಒಂದೆರಡು ವರುಷ ಕೆಲಸದ ಭಿಕ್ಷೆಗಾಗಿ ಊರಿಂದೂರಿಗೆ ಅಲೆದಾಡಿ ಎಲ್ಲಾ ಗೆಳೆಯರ ಹಾಗೂ ಅಪ್ಪುರ ಆದರಾತಿಥ್ಯವನ್ನು ಬರೆಗೆ ಹಚ್ಚಿದಂತಾಗಿತ್ತು. ಈಗ ಮಾಮಲೇದಾರರ ಪ್ರಯತ್ನದಿಂದ ಕಲೆಕ್ಟರ ಕಚೇರಿಯಲ್ಲಿ ಉಮೇದ ವಾರಿಯು ಅವನಿಗೆ ಸಿಕ್ಕು ನಾಲ್ಕೈದು ತಿಂಗಳಾಗಿತ್ತು. ಈ ಅವಧಿಯನ್ನು ಬಾಡಿಗೆ ಕೋಣೆಯಲ್ಲಿದ್ದು ಖಾನಾವಳಿಯೂಟ ಮಾಡುತ್ತ ಅವನು ನೂಕಿ ದ್ದನು ಇಷ್ಟರಲ್ಲಿ ಮದುವೆಯ ಗಾಳಿ ಬೀಸಿತು, ಅದಕ್ಕೆ ಮೈಯೊಡ್ಡಿದನು.

ಇನ್ನು ಮುಂದೆ ತನ್ನ ಚಿಂತೆಯ ಕೂಡ ಇನ್ನೊಂದು ಜೀವದ ಚಿಂತೆ ಕೂಡಿತು. ಮನೆ ಮಾಡಬೇಕೇ? ಅದೇ ಮದುವೆಯಾದ ಚಿಕ್ಕ ಹೆಂಡತಿ, ಸಂಬಳವಿಲ್ಲದ ಕೆಲಸ. ಬಿಡಬೇಕೆ? ಅದು ಲೋಕಕ್ಕೆ ಹೇಗೆ ತೋರುವುದೋ? ಇವೆಲ್ಲ ನೂರೆಂಟು ಎಣಿಕೆಗಳಲ್ಲಿ ಅವನು ತೂಗಾಡುತ್ತಿರುವಾಗ ಸಹಜಧೂರ್ತರಾದ ಮಾವಂದಿರು ಅವನ ಕಳೆ ಹಿಡಿದು ಖಾಸಗಿ ಮಾತಿಗೆಂದು ತಮ್ಮ ಒಳಕೋಣೆಗೆ ಕಳವೂಟವಾದ ದಿನ ರಾತ್ರಿಯ ಹೊತ್ತು ಕರೆಸಿಕೊಂಡರು. ಬಹಳ ವಿಚಾರ ಮಾಡದೆ ಅವನಿಗೆ ತತ್‌ಕ್ಷಣ ಹೇಳಿಯೂ ಬಿಟ್ಟರು. 'ವಾಮನರಾವ, ನಮ್ಮ ಅಟ್ಟದ ಕೋಣೆಯನ್ನು ನಿಮ್ಮ ದೆಸೆಯಿಂದ ನಾಳಿನಿಂದ ತೆರವು ಮಾಡಿಸ ತೀನಿ. ನೀವು ನಮ್ಮಲ್ಲಿಯೇ ಇದ್ದು ಬಿಡಿರಿ.' ಈ ಸ್ಪಷ್ಟ ಉದಾರ ಹೇಳಿಕೆ ಯಿಂದ ಅವನು ದಂಗುಬಡಿದು ಕುಳಿತನು. 'ಇಲ್ಲ, ನಾನು ಮೊದಲಿನಂತೆ ಖಾನಾ ವಳಿಯಲ್ಲಿ....' ಎಂದು ಅರೆಮಾತು ಆಡುವುದರಲ್ಲಿಯೇ ಭೀಮರಾಯರು ಅದನ್ನು ಮುರಿದುಹಾಕಿ 'ಅದ್ಯಾವದೂ ಬ್ಯಾಡ. ನಾ ಹೇಳಿದಂತೆ ಮಾಡರಿ' ಎಂದು ಸತ್ತೆಯಿಂದ ಒತ್ತಾಯಪಡಿಸಿದರು ನಿರ್ಣಯ ಮಾಡದಾಗಿ ತೂಗಾಟ ಮಾಡುವ ಮನುಷ್ಯನಿಗೆ ಹೀಗೆ ಮಾಡಿಬಿಡೆಂದು ಯಾರಾದರೂ ಹೊಸಬಗೆ ಯಲ್ಲಿ ಹೇಳಿದರೆ ಅವನ ಮನಸ್ಸು ಅದಕ್ಕೆ ಹೂಗುಟ್ಟಿಬಿಡುವುದು. ವಾಮಣ್ಣನ ಸ್ಥಿತಿಯೂ ಹೀಗಾಯಿತು. ತಾನು ನಿರ್ಗತಿಕ, ಅವರು ತನಗೆ ಉಪಕಾರಿಗಳು ಎಂಬ ಭಾವನೆಯು ನುಗ್ಗಿ ಅವನ ಒಪ್ಪಿಗೆಗೆ ಒಪ್ಪಕೊಟ್ಟಿತು. 'ಹಾಗೇ ಆಗಲಿ' ಎಂದು ಅವರಿಗೆ ತಿಳಿಸಿದನು. ಅವರು ಬಹಳ ಸಂತೋಷಬಟ್ಟರು.

ವಾಮಣ್ಣನ ಮದುವೆಯಾದದ್ದು ೧೯೩೦ ನವಂಬರ ತಿಂಗಳ ಕೊನೆ ಕೊನೆಗೆ. ಮುಂದೆ ವಿಶೇಷವೇನೂ ಇಲ್ಲದೆ ಒಂದು ತಿಂಗಳು ಹೋಯಿತು. ಪದ್ಮಕ್ಕನು ಮನೆಯಲ್ಲಿಯೇ ಇದ್ದ ಗಂಡನ ಸೇವೆಯನ್ನು ನಾಚುನಾಚುತ್ತ ಹಿರಿಯರಿಂದ ಹೇಳಿಸಿಕೊಂಡು ಸರಿಯಾಗಿಯೇ ಮಾಡುತ್ತಿದ್ದಳು. ಅವಳಿನ್ನೂ ಚಿಕ್ಕವಳು, ಬುದ್ಧಿ ಬೆಳೆಯಲಿ ಎಂದು ತನ್ನ ಹೆಚ್ಚಿನ ಹವ್ಯಾಸವನ್ನು ಬಹು ಮಟ್ಟಿಗೆ ವಾಮಣ್ಣನು ಗಂಟುಕಟ್ಟಿಯೇ ಇಟ್ಟಿದ್ದನು. ಒಂದು ದಿನ ಕಚೇರಿ ಯಿಂದ ತಿರುಗಿ ಬಂದು ಮನೆಯ ಹೊಸತಿಲದಲ್ಲಿ ಅವನು ಕಾಲಿಡುವಷ್ಟ ರಲ್ಲಿ ಮಗ್ಗಲಿಗೆ ನಿಂತ ಯಾರೋ ಕೆಂಪುಬಣ್ಣವನ್ನು ಅವನ ಮೈಮೇಲೆ ಸುರುವಿಬಿಟ್ಟರು. ಇಂಥ ಪ್ರಸಂಗಗಳನ್ನು ಬೇರೆ ಕಡೆ ನೋಡಿದ್ದರಿಂದ

ಅವನಿಗೆ ಕಾರಣವು ಗೊತ್ತಾಯಿತು. ಆದರೆ ಈ ಹುಚ್ಚು ಪದ್ಧತಿಗಾಗಿ ಅವನ ರೊಚ್ಚು ಸಿಡಿದೆದ್ದಿತು. ಗಂಟುಮೋರೆಯಿಂದ ಒಂದೆರಡು ಬಯ್ಗುಳ. ಆದರೆ ಸುತ್ತಲಿದ್ದ ಹಿರಿಯರೂ ಕಿರಿಯರೂ ಅವನನ್ನು ನೋಡಿ ನಗುವವರೇ. ಆ ನಗೆಯಲ್ಲಿ ಎಲ್ಲಾ ಮುನಿಸು ಕರಗಿಹೋಯಿತು. ಕೂಡಲೆ ಕೋಣೆಗೆ ಹೋಗಿ ಅರಿವೆಗಳನ್ನು ಬದಲಿಸಿದನು.

ಅಂತೂ ಪದ್ಮಕ್ಕ ಮೈನೆರೆದಳು. ಜಗತ್ತಿಗೆ ಅದನ್ನು ತಿಳಿಪಡಿಸುವ ಮೆರವಣಿಗೆ ಮೊದಲಾದ ಉತ್ಸವಗಳು ಜರುಗಿದುವು. ಮುಂದೆ ೮-೧೦ ದಿನಕ್ಕೆ ಫಲಶೋಭನದ ಮುಹೂರ್ತವು ಗೊತ್ತಾಯಿತು. ಮಳೆ-ಹೊಳೆಯಲ್ಲಿ ತೇಲುವ ಕಡ್ಡಿಯಂತೆ ವಾಮಣ್ಣನು ಎಲ್ಲದಕ್ಕೂ ಆಗಲಿ ಎಂದನು. ತನಗೆ ಕೆಲಸದಲ್ಲಿ ಒಂದು ಸ್ಥಿರತೆ ಬರುವ ವರೆಗೆ ಪ್ರಸ್ತವನ್ನು ಮುಂದೆ ಹಾಕಬೇಕೆಂದು ಒಮ್ಮೆ ಮಾವಂದಿರಿಗೆ ಅಂಜಂಜುತ್ತ ಕೇಳಿಕೊಂಡನು. ಆದರೆ ಅವರು ತಮ್ಮ ಅದ್ಭುತ ಆಶಾವಾದದಿಂದ ಅವನ ಸಂಶಯಗಳನ್ನೆಲ್ಲ ಹೊಡೆದಟ್ಟಿ ಶುಭಕಾರ್ಯದ ಸಿದ್ಧತೆ ಮಾಡಿದರು.

ಆ ರಾತ್ರಿಯು ಬಂದಿತು. ಅದೇಕೊ ಹೊಸ ಹಿಗ್ಗು ವಾಮಣ್ಣನಲ್ಲಿ ಚಿಗುರಿತು. ಮದುವೆಯ ಕಲಕಲಾಟದಲ್ಲಿ ಉಳಿದುಹೋದ ತನ್ನ ಆಸೆ ಈಗ ಈಡೇರಬಹುದು; ಅದೇಕೆ ಇಂದೇ ನಿಜವಾದ ಮದುವೆಯ ದಿನವೆಂದುಕೊಂಡು ಅವನು ಉಬ್ಬಿದನು. ಹಲವು ಬಗೆಯಿಂದ ಸಿಂಗಾರವಾದ ತನ್ನ ಕೋಣೆಗೆ ಪದ್ಮಕ್ಕ ಬಂದು ಬಾಗಿಲು ಹಾಕಿದಳು. ಇನ್ನು ಅವಳು ತನ್ನ ಹೃದಯದ ಮನೆಯ ಬಾಗಿಲ ತೆರೆಯಬಹುದಲ್ಲವೇ, ಎಂದು ಮಂಚದಲ್ಲಿ ಕುಳಿತು 'ಪದ್ಮಾ' ಎಂದು ಕೂಗಿ ಕರೆದನು. ಉತ್ತರವೀಯದೆ ಅವಳು ಸಾಧ್ಯವಿದ್ದಷ್ಟು ದೂರದ ಮೂಲೆಗೆ ಸರಿದು ಕೆಳಬಾಗಿ ನಿಂತಳು. 'ಪದ್ಮಾ, ಇಲ್ಲಿ ಬಾರಲ್ಲ' ಎಂದನು ಬರಲಿಲ್ಲ. ಎದ್ದು ಹೋಗಿ ಕೈಹಿಡಿದು ಬಲುಮೆಯಿಂದ ಕರೆತಂದು ಹತ್ತಿರ ಕೂಡಿಸಿಕೊಂಡನು. ಅವಳು ಅತ್ತತ್ತ ಸರಿದಳು. 'ಹೀಗ್ಯಾಕ ಮಾಡತೀ ಪದ್ಮಾ, ಈವತ್ತಾದರೂ ಮಾತಾಡು' ಎಂದನು. ಬಹಳ ಸಲ ಕೇಳಿ ಕಾಡಲು ಮೇಲೆ ಕೈಯಾಡಿಸಿ ಮುದ್ದಾಡಿದ ಮೇಲೆ 'ಏನು?' ಎಂಬೊಂದು ಒಳಗಿನ ದನಿಯು ಹೃದಯದ ಗವಿಯಿಂದ ಹೊರಬಿತ್ತು. ಅದರಲ್ಲಿ ಭಾವವಿಲ್ಲ, ಅರ್ಥವಿಲ್ಲ. ರಾತ್ರಿ ಏರಿತು. ಅವನು ಬೇಸತ್ತು ಬಿದ್ದುಕೊಂಡನು. ಅವಳು

ಕುಳಿಕುಳಿತು ಸಿಟ್ಟಿನಿಂದ ತೂಕಡಿಸಹತ್ತಿದಳು. ವಾಮಣ್ಣನು ಕನಿಕರದಿಂದ ಕೈಬಗ್ಗಿ ಮಲಗಿಸಿದನು. ಶರೀರಗಳು ಕೂಡಿದವು, ಹೃದಯಗಳು ದೂರ ದಲ್ಲಿ ನಿಡಿದು ನಿಂತವು.

ಮುಂದೆ ಮೂರು-ನಾಲ್ಕು ದಿನಗಳು ಕಳೆದವು. ಅಷ್ಟರಲ್ಲಿ ವಾಮಣ್ಣನು ತನ್ನ ಧ್ಯೇಯವಾದದ ಹುಮ್ಮಸ್ಸಿನಿಂದ ಮೊನ್ನಿನ ಹೃದಯದ ನೋವನ್ನು ಮಾಯಿಸಿಕೊಂಡಿದ್ದನು. ಯಾವುದು ಈಗ ಇಲ್ಲವೋ ಅದು ಮುಂದೆ ಬರುವ ದಿದೆ, ನಮ್ಮ ಸಾಹಸದಿಂದಲೆ ಬರುವದಿದೆ ಎಂಬ ಆಶೆಯು ಅವನಲ್ಲಿ ಉದಯ ವಾಗಿತ್ತು. ಈ ಹೊತ್ತಿಗೆ ಸುಮಾರು ಜನೇವರಿ ತಿಂಗಳ ಆರಂಭವು ಬಂದಿತು. ತಾನು ಕಲಿತ ಕರ್ನಾಟಕ ಕಾಲೇಜಿನ ಕನ್ನಡ ಸಂಘದ ವಾರ್ಷಿಕೋತ್ಸವವು ಮರುದಿನ ೪ ಗಂಟೆಗೆ ಇರುವುದೆಂದೂ ಅದಕ್ಕೆ ತಪ್ಪದೆ ಬರಬೇಕೆಂದೂ ಅವ ನಿಗೆ ಸ್ನೇಹಿತರಿಂದ ಆಮಂತ್ರಣವು ಬಂದಿತು. ಆ ಕಾಲೇಜಿನಲ್ಲಿ ಎರಡು ವರ್ಷ ವಿದ್ಯಾರ್ಥಿಯಾಗಿ ಅವನು ಅಲ್ಲಿಂದಲೇ 'ಬಿ.ಎ.' ಆದವನು. ಮೇಲಾಗಿ ಕನ್ನಡ ಸಂಘದ ಕಾರ್ಯದರ್ಶಿಯಾಗಿಯೂ ಒಂದು ವರ್ಷ ಬಹಳ ಆಸ್ಥೆಯನ್ನು ವಹಿಸಿ ಕೆಲಸ ಮಾಡಿದನನು. ಬಿ.ಎ. ಆದಮೇಲಿನ ನಿರುದ್ಯೋಗದ ಹೊಯ್ದಾ ಟದಲ್ಲಿ ಅವನ ಕನ್ನಡ ಹೆಮ್ಮೆಯು ಕಮರಿದಂತಾಗಿತ್ತು. ಇಂದು ಆಮಂತ್ರ ಣವು ಬಂದೊಡನೆ ಅದೇಕೊ ದಿಗ್ಗೆಂದು ಎದ್ದಿತು. ಸಂಘದ ಉತ್ಸವಕ್ಕೆ ಹೋಗಲೇಬೇಕೆಂದು ನಿಶ್ಚಯಿಸಿ ತನ್ನ ಕಚೇರಿಯಿಂದ ಅರ್ಧ ದಿನದ ರಜೆ ಪಡೆದು ಹೊತ್ತಿಗೆ ಸರಿಯಾಗಿ ಅವನು ಕಾಲೇಜು ಸೇರಿದನು. ಉತ್ಸವದ ಪ್ರಾರಂಭಗೀತವು ಸೊಗಸಾಯಿತು. ಮುಖ್ಯ ಭಾಷಣಕಾರರ ಪರಿಚಯ ವಿಧಾನವು ಮುಗಿಯಿತು. ಅವರ ಹೆಸರು ಕಲ್ಯಾಣರಾಯರೆಂದೂ ಅವರು ಯಾವ ಬಿರುದು-ಬಾವುಲಿಗಳಿಲ್ಲದಿದ್ದರೂ ಕನ್ನಡದ ಅತ್ಯಂತ ಪ್ರೇಮದಿಂದ ಜನಜಾಗೃತಿಯುಂಟುಮಾಡುತ್ತಿರುವ ವೀರ ಕನ್ನಡಿಗರೆಂದೂ ಅವರ ಪರಿ ಚಯವನ್ನು ಕೇಳಿ ವಾಮಣ್ಣನು ಹಿಗ್ಗಿದನು. ಅವರ ಮಾತು ಕೇಳುವ ಕುತೂಹಲವು ಹೆಚ್ಚಿತು. ಈ ನಡುವೆ ಮೊದಲನೆಯ ದಿನ ನಡೆದ ಭಾಷಣ ಹಾಗೂ ಕವಿತೆಗಳ ಸ್ಪರ್ಧೆಯಲ್ಲಿ ವಿಜಯಿಗಳಾದವರಿಗೆ ಭಾಷಣಕಾರರ ಕೈಯಿಂದ ಮೆಚ್ಚುಗೆಗಳನ್ನು ಕೊಡುವ ಕಾರ್ಯಕ್ರಮವು ನಡೆಯಿತು. ಕವಿತೆ ಹೇಳುವುದರಲ್ಲಿ ಮೊದಲನೆಯ ನಂಬರು ಪಡೆದ ವಿದ್ಯಾರ್ಥಿಯು ಅಂದ

ಕವಿತೆ 'ಕನ್ನಡಕೋಗಿಲೆ' ಎಂಬ ಉಪನಾಮದ ಹೆಸರಾದ ಕವಿಯಿಂದ ರಚಿತವಾದ 'ಕಾರಣಪುರುಷ' ಎಂಬುದು ಎಂದು ಹೇಳಲಾಯಿತು. ಭಾಷಣಕಾರರ ವಿಶೇಷ ಅಪೇಕ್ಷೆಯ ಮೇರೆಗೆ ಇನ್ನೊಮ್ಮೆ ಆ ಕವನವನ್ನು ಆ ವಿದ್ಯಾರ್ಥಿ ಹಾಡಿತೋರಿಸಿದನು. ನಿಜವಾಗಿಯೂ ಆ ಕವನದ ಭಾವ, ಅದರ ಹಾಡಿಕೆಯ ಧಾಟಿ ಸಭೆಯನ್ನು ಮರುಳುಗೊಳಿಸಿದವು. ವಾಮಣ್ಣನಂತೂ ಆ 'ಕನ್ನಡಕೋಗಿಲೆ' ಯಾರು? ಎಂದು ಹತ್ತಿರದ ಗೆಳೆಯರನ್ನು ಕೇಳುತ್ತ ಸಂತೋಷದ ಸೂಸು ಹೊಳೆಯಲ್ಲಿ ತೇಲಾಡಿದನು.

ಮುಖ್ಯ ಅತಿಥಿಗಳ ಭಾಷಣವು ಅತ್ಯುಜ್ಜ್ವಲವಾಗಿ ಧಾರಾಳವಾಗಿ ಹೊರಹೊಮ್ಮಿತು. ಅದರ ಆಶಯವು ಹೀಗಿತ್ತು: 'ಭಾರತದ ಸುತ್ತೆಲ್ಲ ಕಾಣದ ಬೇಗೆ ಹಬ್ಬಿದೆ. ಅದರಲ್ಲಿಯೂ ಈ ಕನ್ನಡನಾಡು ಆ ಬೇಗೆಗೆ ತುತ್ತಾದ ಕಟ್ಟ ಕಾಷ್ಠವಾಗಿದೆ. ಹಿಂದಿನವರು ಕಾಡು ಸವರಿ ಇದನ್ನು ನಾಡು ಮಾಡಿದರು. ಇಂದಿನವರು ನಾವು ನಾಡು ಸವರಿ ಕಾಡು ಮಾಡಿದ್ದೇವೆ! ಕನ್ನಡದ ಮಹಾದುಃಖವನ್ನು ನೆನೆಸುವ ಗೋಳು ಯಾರಿಗೂ ಬರಬಾರದು! ನೂರು ಆಳಿಕೆಯ ಮಂಗಗಳಿಂದ ತುಳಿದಾಟ ಹೊಂದಿದ ಬಾಳೆಯ ಬನವಾಗಿದೆ ಈ ನಾಡು. ಇದರ ಹೊಟ್ಟೆಪಾಡು, ಇದರ ಧರ್ಮಸಂಸ್ಕೃತಿ, ಇದರ ಭಾಷೆಸಾಹಿತ್ಯ ಇವನ್ನು ಯಾರೂ ಕೇಳುವವರಿಲ್ಲ. ಕನ್ನಡಜನ ಎಂದರೆ ಕಾಡುಜನ ಎಂದು ಗಾದೆಮಾತಾಗಿದೆ. ಹೊರಗಿನವರ ಮಾತೇಕೆ, ಕನ್ನಡ ಜನರೇ ಕನ್ನಡಕ್ಕೆ ಹೊರತಾಗಿರುವರು. ಕನ್ನಡವನ್ನು ತುಚ್ಛ ಮಾಡುತ್ತಿರುವರು. ತಮ್ಮ ಮನೆಯ ವಿಧವೆಯನ್ನು ತಾವೇ ಛೀ ಥೂ ಎಂದು ಹೊರಗಟ್ಟುವಂತೆ ಕನ್ನಡ ತಾಯಿಗೆ ನಾವು ನಮ್ಮ ಹೃದಯದಿಂದ ಹೊರಗಟ್ಟುತ್ತೇವೆ. ಹೊಸ ಬುದ್ಧಿ ಇದೀಗ ಹುಟ್ಟಿದೆ, ಇನ್ನೂ ಹೊಸ ಶಕ್ತಿಶ್ರದ್ಧೆಗಳು ಬರಬೇಕು. ಆ ಕಾಲ ಬರಲೆಂದು ನಾವೆಲ್ಲರೂ ಹಾರೈಸೋಣ.'

ಸಮ್ಮೇಲನದ ಕಾರ್ಯಕ್ರಮವು ಮುಂದರಿಯಿತು. ಆದರೆ ಆ ಭಾಷಣ ಕೇಳಿದ ಮೇಲೆ ವಾಮಣ್ಣನಿಗೆ ಅಲ್ಲಿ ನಿಲ್ಲುವುದಾಗಲಿಲ್ಲ. ಅವನ ಕಣ್ಣಿಂದ ದಳದಳ ನೀರು ಸುರಿಯುತ್ತಿದ್ದುವು. ಯಾವುದೋ ಹುಚ್ಚು ಭಾವನೆಯು ಮೈಹೊಕ್ಕಿತ್ತು. ಅವನು ಸಭೆಯಿಂದ ಹೊರಬಿದ್ದು ಹೊರಟನು. ಅವನ ಮಿತ್ರರಲ್ಲಿ ಕೆಲವರು 'ರ್ಯಾಕೆಟ್' ಬೀಸುತ್ತ ಆಟದ ಹೊತ್ತಾಯಿತೆಂದು

ಹೊರಟಿದ್ದರು. 'ಏನು ಲೆಕ್ಚರ ಹೊಡೆದನರಿ'—'ನಮಗೇನು ಆ ಕನಡು ತಿಳೀಲಿಲ್ಲರೆಪಾ'—'ಏನೇ ಅನ್ನರಿ ಹಿಂಗ ಲೆಕ್ಚರ ಕೊಡಬೇಕು ನೋಡಿರಿ' ಎಂಬ ಮಾತು ಕೇಳಿದವು. ಆ ಮಿತ್ರರಲ್ಲಿ ವಾಮಣ್ಣನ ಸಲಿಗೆಯ ಆಟಗುಳಿ ಮಿತ್ರನಾದ ಮುರಲಿ ಇದ್ದನು. 'ಹೋಗಲಿ ಬಿಡಿರೋ, ಆ ನಮ್ಮ ಮಿಸ್ ಜೇನ ಹಾದೀ ನೋಡತಿದ್ದಾಳು ನಡೀರಿ' ಎಂದು ಅವನು ಕೂಗಿದನು. ಎಲ್ಲರೂ ಖೊಳ್ಳೆಂದು ನಕ್ಕು ಕೈಬೀಸುತ್ತ ಹೋದರು.

ಬೇರೆ ದಾರಿಯಿಂದ ವಾಮಣ್ಣನು ತನ್ನ ಮನೆಯ ಕಡೆ ಸಾಗಿದನು. ಕಿಚ್ಚುಬಿದ್ದ ಕಾಡಿನಂತೆ ಮೈಯೆಲ್ಲ ದುಮುದುಮು ಉರಿಯುತ್ತಿತ್ತು. ಮನಸ್ಸು ಪಾಪಿಯಂತೆ ತನ್ನ ತಾನೇ ಹರಿದು ತಿನ್ನುತ್ತಿತ್ತು. ಆ ಭಾಷಣದ ನೆನಪು ಉಕ್ಕುಕ್ಕಿ ಕಣ್ಣೀರು ಹರಿಸುತ್ತಿತ್ತು. ಅವನು ಈ ಸ್ಥಿತಿಯಲ್ಲಿ ಮನೆಗೆ ಹೋಗಕೂಡದೆಂದು ಊರ ಹೊರಗಿನ ಹಾದಿ ಹಿಡಿದು ಯಾರೂ ಹತ್ತಿರ ಸುಳಿಯದ ದಿನ್ನೆಯೊಂದನ್ನು ಏರಿ ಅಲ್ಲಿ ಕುಳಿತನು. ತನ್ನ ಬಾಳನ್ನೂ ಕನ್ನಡದ ಗೋಳನ್ನೂ ನೆನೆದನು. ನೋವು ಅದರಿಂದ ಮಿಕ್ಕುವಂತೆ ತೋರಿತು. ಅದನ್ನೆಲ್ಲ ಮರೆತುಬಿಡಬೇಕೆಂದು ಹೆಣಗಿದನು. ಅದು ಕೈಗೂಡಲಿಲ್ಲ. ಕೊನೆಗೆ ತಡೆಯಲಾರದ ಆವೇಶದಿಂದ 'ಕನ್ನಡತಾಯಿ ವಿಧವೆಯಂತಾಗಿರುವಳು... ....ನಾನು ಮದುವೆಯಾದೆ, ಕೆಲಸಹಿಡಿದು ಕಟ್ಟುಬಿದ್ದೆ........ಕನ್ನಡಕ್ಕೆ ನಾನೇನೂ ಮಾಡಲಾರೆ,........ಮಾಡಲಾರೆ........' ಎಂದು ಎತ್ತರದ ದನಿಯಲ್ಲಿ ಕೂಗಿ ದಿನ್ನೆಯ ಹುಲ್ಲಿನ ಮೇಲೆ ದೊಪ್ಪನೆ ಬಿದ್ದುಬಿಟ್ಟನು.

---

## ಪ್ರಕರಣ ೨.

ಮಾವಂದಿರ ಉದಾರ ಆಶ್ರಯದಲ್ಲಿ ವಾಮಣ್ಣನ ಸಂಸಾರನಾಟಕವು ಆರಂಭವಾಯಿತು. ಆದರೆ ಮಹಾಜನರ ಪ್ರೋತ್ಸಾಹಕ್ಕಿಂತ ಯಾರೊಬ್ಬರ ಆಶ್ರಯ ಬಲದಿಂದಲೇ ಬದುಕಿರುವ ಹೊಸ ಒಂದು ನಾಟಕಮಂಡಳಿಯಂತೆ ತನ್ನ ಗತಿಯಾಗಬಹುದೇ ಎಂಬ ಚಿಂತೆ ಅವನನ್ನು ಬಿಟ್ಟಿರಲಿಲ್ಲ. ದಿನವೂ ಹನ್ನೊಂದು ಗಂಟೆಗೆ ಸರಿಯಾಗಿ ಕಲೆಕ್ಟರ ಕಚೇರಿಗೆ ಹೋಗಿ ಆರು ಏಳರವರೆಗೆ ನಿಷ್ಠೆಯಿಂದ ಕೆಲಸಮಾಡಿ ಅವನು ಮರಳುತ್ತಿದ್ದನು. ಉಮೇದವಾರಿಯ

ಕೆಲಸದ ಬಗೆಯೆ ಅತಿ ವಿಚಿತ್ರವಾದದ್ದು. ಎಷ್ಟೋ ಸಾರೆ ಕೆಲಸವಿಲ್ಲದೆ ಸುಮ್ಮನೆ ಕೂಡವುದೇ ಹಿರಿಗೆಲಸವಾಗುತ್ತಿತ್ತು. ಕೆಲಸವು ಒಂದಾಗ ಲೆಕ್ಕಣಿಕೆಗೆ ಬಿಡುವಿಲ್ಲ, ಮೈಗೆ ಪರಿವೆಯಿಲ್ಲ. ಬುದ್ಧಿವಂತನ ವಿಂದುಳಿಗೆ ತಕ್ಕ ಉದ್ಯೋಗವೆಂದು ಸಮಾಧಾನವನ್ನು ಹಚ್ಚಿಕೊಳ್ಳುವ ಸ್ಥಿತಿಯು ತೀರ ಅಪ ರೂಪ. ಸಾಮಾನ್ಯವಾದ ಕರಡು, ನಕಲು ಈ ಮೊದಲಾಗಿ ವಿಂದುಳಿಗಿಂತ ಕೈಸರಗಳ ಪರೀಕ್ಷೆ ಮಾಡುವ ಪರಿಶ್ರಮವೇ ಅಲ್ಲಿ ಹೆಚ್ಚಾಗಿತ್ತು. ಈ ಗಾಣ ದೆತ್ತಿನ ಕುರುಡುಕೆಲಸಕ್ಕಾಗಿ ನಾವು ಹುಟ್ಟಿದೆವೇ? ಎಂದು ಪ್ರತಿದಿವಸ ದಲ್ಲಿ ವಾಮಣ್ಣನಿಗೆ ಅದೆಷ್ಟೋ ಸಾರೆ ಅನಿಸಿ ಕರುಳುಹಿಂಡುವ ಸಂಕಟವು ಆಗುತ್ತಿತ್ತು. ಆದರೆ ಒದಗು ಹೆಚ್ಚಿನದು, ಬದುಕಿನ ಸೇವೆಗೆ ಬುದ್ಧಿ ಬಾಗಲೇಬೇಕೆಂದು ಮರುಕ್ಷಣದಲ್ಲಿ ಅಂದುಕೊಂಡು ಅವನು ನಿರುಪಾಯ ವಾದದ್ದನ್ನು ಒಪ್ಪಿಕೊಳ್ಳುತ್ತಿದ್ದನು. ಇದ್ದುದರಲ್ಲಿ ತನ್ನ ಜೀವಕ್ಕೆ ಸುಖ ಕೊಡುವದಕ್ಕೆಂದು ಕಚೇರಿಗೆ ಹೋಗುವಾಗ ತನ್ನ ಪ್ರೀತಿಯ ಯಾವು ದೊಂದು ಕಥೆಯ ಇಲ್ಲವೆ ಕವಿತೆಯ ಚಿಕ್ಕ ಪುಸ್ತಕವನ್ನು ಕಿಸೆಯಲ್ಲಿ ಇಟ್ಟು ಕೊಂಡು ಹೋಗುತ್ತಿದ್ದನು, ಸಮಯ ಸಿಕ್ಕಾಗ ಓದುತ್ತಿದ್ದನು. ಕನ್ನಡ ಕವಿತೆಯೆಂದರೆ ಕಾಲೇಜಿನಲ್ಲಿ ಇದ್ದಾಗಿನಿಂದ ಅವನಿಗೆ ಬಹಳ ಸೇರಿಕೆ. ಇಂಗ್ಲಿಶ್ ಆನರ್ಸಿನ ಕೂಡ ಕನ್ನಡ ವಿಷಯವನ್ನು ತೆಗೆದುಕೊಂಡೆ ಅವನು ಬಿ.ಎ. ಆಗಿದ್ದನು. ಆದರಿಂದ ಕನ್ನಡ ಕಾವ್ಯದ ಸಂಪ್ರದಾಯವನ್ನು ಸಾಕಷ್ಟು ಅರಿತಿದ್ದನು. ಕನ್ನಡ ಸಂಘದ ವಾರ್ಷಿಕ ಸಂಮೇಳನದಲ್ಲಿ 'ಕನ್ನಡಕೋಗಿಲೆ' ಗಳೆಂಬ ಕವಿಗಳ ಹೆಸರನ್ನೂ ಅವರ ಕವನವೊಂದನ್ನೂ ಕೇಳಿದಂದಿನಿಂದ ಅವರ ಬಗ್ಗೆ ಹೆಚ್ಚಿನ ಆಸ್ಥೆಯು ಅವನಲ್ಲಿ ಅಂಕುರಿಸಿತ್ತು. ಅವರು ಧಾರವಾಡದಿಂದ ಒಂದೆರಡು ಮೈಲು ದೂರದ ಒಂದು ತೋಟದ ಗುಡಿಸಲದಲ್ಲಿ ಏಕಾಂತ ವಾಗಿ ಇರುವರೆಂದು ಮಿತ್ರರಿಂದ ಅವನು ತಿಳಿದುಕೊಂಡಿದ್ದನು. ಒಮ್ಮೆ ಅವರಿಗೆ ಭೆಟ್ಟಿಯಾಗಬೇಕೆಂದು ಬಹಳ ಹಾತೊರೆಯುತ್ತಲೂ ಇದ್ದನು. ಇಷ್ಟರಲ್ಲಿ ಅವರ ಕವಿತೆಗಳ ಸಂಗ್ರಹವೊಂದು ಹೊರಬಿದ್ದಿದೆಯೆಂದು ತಿಳಿ ಯಿತು. 'ತಳಿರ-ತೋರಣ' ಎಂದು ಅದರ ಹೆಸರಿತ್ತು. ಅದನ್ನು ಬೇಗನೆ ಕೊಂಡು ಓದಿದನು, ತಿರುತಿರುಗಿ ಓದಿದನು. ಸಾಲುಸಾಲಿನಲ್ಲಿ ಜೀವನದ ಆಶೆಯೂ ಆನಂದವೂ ಚಿಮ್ಮುವಂತೆ ಕಂಡಿತು. ಇಂಥ ಆಶಾವಾದಿಯಾದ

ಕಪಿಗಳನ್ನು ಕಂಡು ಅವರ ಪರಿಚಯವನ್ನು ಬೆಳಸಬೇಕೆಂದು ಮನವಾರೆ ಬಯಸಿದನು. ಆದರೆ ತನಗೆ ಸ್ವಲ್ಪವೂ ಗುರುತಿಲ್ಲದಾಗ ಒಬ್ಬನೆ ಹೋಗುವುದು ಸರಿಯಲ್ಲವೆಂದು ತೋರಿತು. ಯಾರೊಡನೆ ಹೋದರೆ ಒಳಿತು ಎಂಬ ಯೋಚನೆಯಲ್ಲಿ ಕೆಲವು ದಿವಸಗಳು ಸಂದುವು.

ಮಾಮಲೆದಾರರ ಅಳಿಯನೆಂದ ಮೇಲೆ ಮನೆಯಲ್ಲಿ ರಾಮಣ್ಣನಿಗೆ ಎಲ್ಲ ವ್ಯವಸ್ಥೆಯೂ ಸರಿಯಾಗಿತ್ತು. ಆದರೆ ಸೂಕ್ಷ್ಮಸ್ವಭಾವದ ಜನರಿಗೆ ಒಂದಿಲ್ಲೊಂದು ಚಿಂತೆ ಹೇಗೆ ತಪ್ಪೀತು? ತಾನು ಗಳಿಸದೆ ಇದ್ದು ಮಾವನ ಮನೆಯ ಉಂಡಾಡಿಯಾಗುತ್ತಿರುವೆನಲ್ಲ ಎಂಬ ಕೊರತೆಯು ಅವನ ಊಟದ ರುಚಿಯನ್ನು ಕಸಿಯುತ್ತಿತ್ತು. ಬೇಕಾದ ಹೊತ್ತಿನಲ್ಲಿ ಬೇಕಾದ ವಸ್ತುವನ್ನು ಒದಗಿಸಿಕೊಡುವ ಅತ್ತೆ-ಮಾವಂದಿರು ಇದ್ದಾರೆ, ಆಳು-ಹೋಳುಗಳಿದ್ದಾರೆ. ಆದರೆ ಅವನಿಗೆ ಹೆಜ್ಜೆಹೆಜ್ಜೆಗೆ ಸಂಕೋಚ, ಮನಸ್ಸಿಗೊಂದು ಭಾರ, ಇನ್ನೊಬ್ಬರ ಹಂಗಿನ ಭಾವನೆ. ಇದರೊಡನೆ ತನ್ನ ದಾಂಪತ್ಯ-ಜೀವನವು ಆದರ್ಶವಾಗಬೇಕೆಂಬ ಹಿರಿಯಾಸೆ ಬೇರೆ. ಪ್ರತಿದಿವಸದ ರಾತ್ರಿಯ ಭೆಟ್ಟಿಯಲ್ಲಿ ಅವನು ಪದ್ಮಕ್ಕನೊಡನೆ ಬೇಸರಿಲ್ಲದೆ ಮಾತನಾಡಿ ಹತ್ತುಮಾತಿಗೆ ಅವಳು ಒಂದಾದರೂ ಆಡುವಂತೆ ಮಾಡಿದ್ದನು. ತನ್ನ ಸುಖ-ದುಃಖಗಳನ್ನೂ ಆಶೆ-ಆಕಾಂಕ್ಷೆಗಳನ್ನೂ ಅವಳ ಇದಿರಲ್ಲಿ ತೋಡಿಕೊಂಡಿದ್ದನು. ಅವಳಿಗೆ ಅದರಲ್ಲಿ ತಿಳಿದದ್ದು ಸಾವಿರಕ್ಕೆ ಒಂದು ಪಾಲು. ಆದರೆ ಯಾವುದೋ ಒಂದು ಕರ್ತವ್ಯಬುದ್ಧಿಯಿಂದ ರಾಮಣ್ಣನ ಆದರ್ಶ-ಪುರಾಣವನ್ನು ಅವಳು ಸುಮ್ಮನೆ ಕುಳಿತು ಕೇಳುತ್ತಿದ್ದಳು. ಒಮ್ಮೆ ಆ ಈ ಮಾತು ತೆಗೆದು, ಹೊಂದಿಕೊಂಡು ಕುಳಿತು ಮೈದಡವುತ್ತ ರಾಮಣ್ಣ ಕೇಳಿದನು :

'ಅಲ್ಲ, ಪದ್ಮ, ನಾನು ನೀನು ಹೊರಗಿನವರೇನು?'

'ಅಂದರ?'

'ಅಲ್ಲ, ಹೇಳು, ಹೊರಗಿನವರೆಂದು ನಿನಗೆ ಅನಸತದೇನು?

'ಇದೇನು ಕೇಳೂದು, ಛಂದಲ್ಲ, ಚಾರಲ್ಲ!'

'ಹೌದಲ್ಲೊ, ಹೊರಗಿನವರಲ್ಲ. ಒಬ್ಬರಿಗೊಬ್ಬರ ಗುರುತು ಅದೆ, ಅಲ್ಲವೆ?'

ಪದ್ಮಕ್ಕ ಕೆಳಮೋರೆ ಮಾಡಿ ಸುಮ್ಮನೆ ಕುಳಿತಳು. ಏನೋ ವಿಚಿತ್ರ

ಪ್ರಶ್ನೆ ಕೇಳುತ್ತಿರುವರೆಂದು ಅವಳ ಮನಸ್ಸು ಅದರಲ್ಲಿ ಹೊಗಲಿಲ್ಲ. ವಾಮಣ್ಣಾ ಮುಂದರಿದನು.

'ಹೊರಗಿನವರಲ್ಲ, ಗುರುತು ಇದ್ದವರು; ಸರಿ, ನಮ್ಮಿಬ್ಬರಿಗೂ ಹೆಸರು ದಶಿ ಅವನೋ ಇಲ್ಲೋ? ಅಸ. ಅಂದ ಮೇಲೆ ನಮಗೇನಾದರೂ ಬೇಕಾದರೆ ಹೆಸರುಗೊಂಡು ಮಾತಾಡಬಾರದೇನು?' ಈಗ ಗಂಡನ ಮಾತಿನ ದಿಕ್ಕು ಅವಳಿಗೆ ತಿಳಿಯಿತು. ಅವಳು ಉತ್ತರ ಕೊಡದೆ ಮೋರೆ ತಿರುವಿದಳು. 'ಅಲ್ಲ ಹೇಳು, ಪದ್ಮಾ, ನಾವು ಇಲ್ಲೇ ಈ ರಾತ್ರಿಯ ಸೆರೆಮನೆಯೊಳಗೆ ಇಷ್ಟೇ ಯಾಕೆ ಮಾತಾಡಬೇಕು? ಹೊರಗೂ ಯಾಕೆ ಮಾತಾಡಬಾರದು? ಇಬ್ಬರೂ ಯಾಕೆ ಹೆಸರುಗೊಂಡು ಕರೆಯಬಾರದು? ನಾವೇನು ಪಾಪ ಬಿಟ್ಟವರೇ? ಹೋದ ಜನ್ಮದ ವೈರಿಗಳೇ? ಈ ಜನ್ಮದ ಭಾಗಾದಿಗಳೇ?' ವಾಮಣ್ಣಾನು ಹೆಚ್ಚಿನ ಕಳಕಳಿಯಿಂದ ಕೇಳಿದನು. ಬಹಳ ಹೊತ್ತು ಪದ್ಮಕ್ಕನು ಏನೂ ಆಡಲಿಲ್ಲ. ಕಡೆಗೆ ನಿರ್ವಾಹವಿಲ್ಲದೆ ಅಂದಳು:

'ಹಂಗೆಲ್ಲ ಮಾಡೂದುಲ್ಲ ಮಂದಿ.'

'ಮಂದಿ ಮಾಡದಿದ್ದರೇನು? ಖರೆ ಅನಿಸಿದ್ದು ನಾವು ಮಾಡಬಾರದೇನು?'

'ಮಾಡಿದರ ಮಂದಿ ನಗತಾರ'

'ಸಾಕು ಈ ಮಂದಿ ಮಂದಿ ಅಂತ ಹಗಲೆಲ್ಲ ಅಂಜೋದು! ವಾದ ಹಾಕುತ್ತ ವಾಮಣ್ಣಾನು ಸಿಟ್ಟಿನ ಸೀಮೆಯಲ್ಲಿ ಹೊಕ್ಕುಬಿಟ್ಟನು. ನಾಲ್ಕು ಕಿಡಿನುಡಿಗಳನ್ನಾಡಿ ಕೆಲವು ನಿಮಿಷಗಳವರೆಗೆ ತಣ್ಣಗೆ ಕುಳಿತನು. ಆಮೇಲೆ ಅನಿಸಿತು—ಈಗ ಯಾಕೆ ಒಲಿಪಡಿಸುವುದು, ತನ್ನ ಹೆಂಡತಿಯು ನಾಲ್ಕು ಪುಸ್ತಕಗಳನ್ನು ಓದಿಕೊಂಡರೆ ಅವಳ ಅಧ್ಯೈರ್ಯವು ಅಡಗಿ ವಿಚಾರ ಪದ್ಧತಿಯೆ ಬದಲಿಸಬಹುದು. ಆದರೆ ಅವಳಿಗೆ ಹಾಗೂ ಹೀಗೂ ಬರುವುದೆಂದರೆ ನಾಲ್ಕು ಇಯತ್ತೆ ಕನ್ನಡ. ಕನ್ಯಾಪರೀಕ್ಷೆಯ ಹೊತ್ತಿಗೆ ಪುಸ್ತಕವನ್ನೊ ವರ್ತಮಾನಪತ್ರವನ್ನೊ ಅರ್ಥ ತಿಳಿಯದೆ ಓದುವಷ್ಟು ಅವಳ ಕನ್ನಡಜ್ಞಾನ ಇತ್ತು. ಆದರೂ ಅವನು ಎದೆಗುಂದಲಿಲ್ಲ. ಹೆಚ್ಚು ಕಡಿಮೆ ಅಧಿಕಾರವಾಣಿಯಿಂದ ಹೇಳಿದನು: 'ಪದ್ಮಾ, ನಾ ಹೇಳತೀನಿ ಕೇಳು. ದಿನಾ ಹೊತ್ತುಸಿಕ್ಕಾಗ ಕನ್ನಡಪುಸ್ತಕ ಓದು. ನಾ ಕೊಡತೀನಿ. ಇನ್ನೊಂದು ಸ್ವಲ್ಪ ದಿವಸ ಆಗಲಿ,

ನಾ ನಿನಗೆ ಇಂಗ್ಲೀಷು ಕಲಿಸತೀನಿ.' ಇದನ್ನು ಬೆಳೆಯಿಸಿ ಬಹಳ ವಿವರವಾಗಿ ಹೇಳಿದ್ದಕ್ಕೆ ಅವಳು ಹಾಸೂ ಅನ್ನಲಿಲ್ಲ, ಹೂನೂ ಅನ್ನಲಿಲ್ಲ. ಅಪರಾತ್ರಿ ಯಾಗುತ್ತ ಬಂತು, ತೂಕಡಿಸಹತ್ತಿದಳು. 'ಆತು ಮಲಗಿಕೋ, ನಾಳಿನಿಂದ ಇದರಂತೆ ಮಾಡು' ಎಂದು ವಾಮಣ್ಣನು ಅಪ್ಪಣೆಕೊಟ್ಟನು. ಎಚ್ಚರ ದಲ್ಲಿಯೆ ಅವರಿಬ್ಬರ ನಡುವೆ ಇದ್ದ ಪರದೆಯನ್ನು ನಿದ್ರೆಯು ಇನ್ನಿಷ್ಟು ದಪ್ಪ ನಾಗಿ ಮಾಡಿತು.

ಒಂದೆರಡು ತಿಂಗಳು ಹೋದವು. ಒಂದು ದಿನ ಬೆಳಿಗ್ಗೆ ಮಾಮಲೇ ದಾರರ ಮನೆಯಲ್ಲಿ ಹೊಸ ಸಂನಿವೇಶವೊಂದು ಉಂಟಾಯಿತು. ಮೊದಲೇ ತುಂಬಿದ ಮನೆ, ೭-೮ ಜನ ಹಿರಿಯರು, ೭-೮ ಗಂಡು ಮಕ್ಕಳು. ಇತ್ತೀಚೆ ಮಗಳು ಅಳಿಯ ಮನೆಯಲ್ಲಿಯೇ ಇರುತ್ತಿದ್ದಾರೆ. ಇಂಥದರಲ್ಲಿ ಮುಂಜಾ ವಿನ ಗಾಡಿಯಿಂದ ಒಂದು ಸ್ತ್ರೀವ್ಯಕ್ತಿಯು ತನ್ನ ಟ್ರಂಕು ಹಾಸಿಗೆ ತೆಗೆದು ಕೊಂಡು ಬಂದು ಟಾಂಗೆಯಿಂದ ಇಳಿದಳು. ಆದೇ ಹಾಸಿಗೆಯಿಂದ ಎದ್ದು ವಾಮಣ್ಣನು ಅಟ್ಟದ ಗ್ಯಾಲರಿಯಲ್ಲಿ ನಿಂತಿದ್ದನು. ಅದು ಯಾರು ಬಂದರೆಂದು ಹಣಿಕಿಕ್ಕಿ ನೋಡಿದನು. ಅವನಿಗೆ ಪರಿಚಯವು ಸಿಕ್ಕಲೇ ಇಲ್ಲ. ತಾನೇ ಈ ಮನೆತನಕ್ಕೆ ಅಪರಿಚಿತನೆಂದ ಮೇಲೆ ಅದೇನು ಆಶ್ಚರ್ಯವಲ್ಲವೆಂದು ಕೊಂಡನು. ಆದರೆ ಆ ವ್ಯಕ್ತಿಯ ಚಿತ್ರವು ಮಾತ್ರ ಅವನ ಕಣ್ಣಾಲಿಗಳಲ್ಲಿ ನಟ್ಟು ನಿಂತಿತು. ತರುಣಳಾದರೂ ತಲೆಯ ಮೇಲೆ ಕೂದಲಿಲ್ಲ. ಕೆಂಪುಬಟ್ಟೆಯನ್ನು ಉಟ್ಟಿರುವಳು. ಕೈಯಲ್ಲಿ ಬಂಗಾರದ ಒಡವೆಗಳಿವೆ. ಮೈಯಲ್ಲಿ ಬಳಿ ಕುಬಸ ವಿದೆ. ಬಡಕಲಾದ ಮೈ, ಬೆಳ್ಳಗಿನ ಬಣ್ಣ. ಮುಖದಲ್ಲಿ ಒಂದು ಚೆಲುವಿನ ರೂಪವಿದೆ,ಆದರೆ ಮಂಜು ಮುಸುಕಿದ ಹೂವಿನಂತೆ ಅದೇಕೊ ಸಪ್ಪೆಯಾಗಿದೆ. ಜೊತೆಗೆ ಒಬ್ಬ ಆಳುಮನುಷ್ಯನನ್ನು ಕರಕೊಂಡು ಬಂದಿರುವಳು. ಹುಡುಗರು ಹಿರಿಯರು ಎಲ್ಲರೂ ಅವಳನ್ನು ಮಿಕಿಮಿಕಿ ನೋಡಹತ್ತಿದರು. ಅವರ್ಯಾರಿಗೂ ಅವಳ ಗುರುತಿಲ್ಲವೆಂದು ತೋರಿತು. ತನ್ನ ಸಾಮಾನು ಇಳಿಸಿಕೊಂಡು ದೊಪ್ಪೆಂದು ಬಂಕದಲ್ಲಿ ಕುಳಿತು 'ಭೀಮುಕಾಕಾ ಊರಾಗಿಲ್ಲೇನು ?' ಎಂದು ವಮ್ಮಕ್ಕನನ್ನು ಕೇಳಿದಳು. ಅವಳ ದನಿ ಕೇಳಿ ಹೆಂಗಸರಿಗೆ ಅವಳ ನೆನವು ಮಸ ಮಸಕಾಗಿ ಆಗುತ್ತಿತ್ತು, ಆದರೂ ಸರಿಯಾಗಿ ಗುರುತಿಸದಾದರು. ಪದ್ದಕ್ಕನು ಹೋಗಿ ಭೀಮರಾಯರನ್ನು ಕರೆದುಕೊಂಡು ಬಂದಳು. ಅವರು ಬಂದ

ಕೂಡಲೆ ಅವಳು ಎದ್ದು ಬಾಗಿ ನಮಸ್ಕಾರ ಮಾಡಿದಳು. ಭೀಮರಾಯರಿಗೆ ಒಮ್ಮೆಲೇ ಗುರುತು ಹತ್ತಿದರೂ ದಿಗಿಲು ಬಡಿದಂತಾಗಿ ಅವಳನ್ನು ಕಾಲಿಂದ ತಲೆಯವರೆಗೆ ನೋಡಿ ಅತಿಶಯ ಕಳವಳದಿಂದ ‘ ಇದೇನು ಸುಗುಣಿ, ಹಿಂಗ ಯಾವಾಗಾತು ನಿನಗೆ ? ’ ಎಂದು ಅವಳ ಹತ್ತಿರ ಕುಳಿತು ಅಳಲಿಕ್ಕೆ ಆರಂಭ ಮಾಡಿದರು. ಅವಳ ಹೆಸರು ಕೇಳಿ ಭೀಮರಾಯರ ಹೆಂಡತಿ ಅತ್ತೆಮೊದಲಾದವರಿಗೆ ಅವಳು ಯಾರೆಂಬುದು ನಿಚ್ಚಳವಾಗಿ ತಿಳಿಯಿತು. ಅವಳ ಸುತ್ತು ನೆರೆದು ‘ ಸುಗುಣಾಬಾಯಿ, ಇದೆಂಥ ನಶೀಬಾತ ನಿಂದು ? ’ ಎಂದು ಕೂಗುತ್ತ ಭೋ ಎಂದು ದನಿ ತೆಗೆದು ಅಳಹತ್ತಿದರು. ಅಟ್ಟದ ಮೇಲಿದ್ದ ವಾಮಣ್ಣನು ಕೆಳಗೆ ಓಡಿ ಬಂದು ನಡೆದ ಪ್ರಕಾರವನ್ನೆಲ್ಲ ಕಂಡು ಹಳಹಳಿಬಡುತ್ತ ಅಲ್ಲೇ ನಿಂತನು. ಒಂದು ಸಹಜವಾದ ಸಹಾನುಭೂತಿಯಿಂದ ಎಳೆಮಕ್ಕಳು ತಾವೂ ಅಳತೊಡಗಿದವು. ಶಾಂತವಾಗಿದ್ದ ಮನೆ ಒಮ್ಮೆಲೆ ಅಳುವಿನ ಅಪಸ್ವರಗಳಿಂದ ತುಂಬಿ ಹೋಯಿತು. ಸುಗುಣಾಬಾಯಿಯು ತನ್ನ ಕಥೆಯನ್ನು ನೆನಿಸಿ ಇನ್ನಿಷ್ಟು ಗೋಳಿಟ್ಟಳು. ಕೊನೆಗೆ ದುಃಖವು ಪರಮಾವಧಿಗೆ ಹೋಗಿ ಎಚ್ಚರದಪ್ಪಿ ನೆಲಕ್ಕೆ ಬಿದ್ದಳು. ಭೀಮರಾಯರು ಎಲ್ಲರನ್ನೂ ಬಲಾತ್ಕಾರದಿಂದ ಒಳಗೆ ಕಳಿಸಿ ನೆತ್ತಿಗೆ ನೀರು ಬಡಿದು ಎಚ್ಚರ ಬರುವಂತೆ ಮಾಡಿದರು. ಆಗ ಹೆಚ್ಚಿನ ವಿಷಯಗಳನ್ನೇನೂ ಕೇಳಲಿಲ್ಲ. ಅವಳಿಗಾಗಿ ಒಂದು ಕೆಳಗಿನ ಕೋಣೆಯನ್ನು ತೆರವು ಮಾಡಿಸಿ ಅಲ್ಲಿ ಮಲಗಲಿಕ್ಕೆ ಹೇಳಿದರು. ಬೇರೆ ಯಾರೂ ಅಲ್ಲಿಗೆ ಹೋಗಕೂಡದೆಂದೂ ಕಟ್ಟಪ್ಪಣೆಯನ್ನೂ ವಿಧಿಸಿದರು.

ದಿವಸೆರಡುದಿವಸಗಳಾದವು. ಸುಗುಣಾಬಾಯಿಯ ಜೀವನದ ಘೋರ ಘಟನೆಗಳು ಅಷ್ಟರಲ್ಲಿ ಎಲ್ಲರಿಗೆ ತಿಳಿದವು. ಎಲ್ಲರೂ ಮರಮರ ಮರುಗಿದರು. ಪದ್ದಕ್ಕನಿಂದ ವಾಮಣ್ಣನಿಗೂ ಮುಖ್ಯ ಸಂಗತಿಗಳು ತಿಳಿದವು. ಸುಗುಣಾಬಾಯಿಯು ಭೀಮರಾಯರ ಕಕ್ಕನ ಮಗ ಕೇಶವರಾಯರ ಒಬ್ಬಳೆ ಮಗಳು. ಅವಳನ್ನು ಬಹಳ ಪ್ರೇಮದಿಂದ ಬೆಳಸಿ ಕೇಶವರಾಯರು ಒಂದು ಭಾರೀ ಶ್ರೀಮಂತ ಮನೆತನಕ್ಕೆ ಆರು ಸಾವಿರ ವರದಕ್ಷಿಣೆ ಕೊಟ್ಟು ಮದುವೆ ಮಾಡಿದರು. ಮುಂದೆ ಅವರು ನಾಲ್ಕೈದು ವರ್ಷಗಳಲ್ಲಿ ತೀರಿದರು. ಅವರ ಬೆನ್ನ ಹಿಂದೆ ಗಂಡುಮಕ್ಕಳಿಲ್ಲದ್ದರಿಂದ ಅವರ ತುಸು ಆಸ್ತಿಯು ಮಗಳಿಗೇ ಹೋಯಿತು. ಅವರ ಹೆಂಡತಿಯಂತೂ ಸುಗುಣೆಯು ಎಂಟುಹತ್ತು ವರುಷ

ದವಳಿದ್ದಾಗ ಬೇನೆಕೊಳಕಳಾಗಿ ತೀರಿದ್ದಳು. ಭೀಮರಾಯರು ಸುಗುಣಿಯನ್ನು ಈ ಹಿಂದೆ ನೋಡಿದ್ದು ಅವಳ ಮದುವೆಯಲ್ಲಿ, ಹದಿಮೂರು ವರ್ಷದ ಎಳಹುಡುಗಿಯಿದ್ದಾಗ. ತಿರುಗಿ ಏಳು ವರ್ಷಗಳಾಗಿದ್ದವು. ಅವಳ ಅತ್ತೆಮನೆ ರೇಲ್ವೆಯ ಸೋಂಕಿಲ್ಲದ ಒಂದು ದೂರದ ಹಳ್ಳಿ—ಕನಕಪುರ ಎಂದು. ಅಲ್ಲಿಯ ದೊಡ್ಡ ಜಾಗಿರದಾರರು ಅವರು. ಸುಗುಣಿಯ ಗಂಡನಾದ ಅನಂತರಾಯನಿಗೆ ಇಬ್ಬರು ಅಣ್ಣತಮ್ಮಂದಿರು ಇದ್ದರು. ಈಗ ಎರಡು ತಿಂಗಳ ಹಿಂದೆ ಗಂಟು ಬೇನೆಯು ಅಕಲ್ಪಿತವಾಗಿ ಅಡರಿ ಬಂದು ನಾಲ್ಕೈದು ದಿನಗಳಲ್ಲಿ ಅನಂತರಾಯನನ್ನು ನುಂಗಿಬಿಟ್ಟಿತು. ತಂದೆತಾಯಿಗಳನ್ನು ಮೊದಲೇ ಕಳೆದುಕೊಂಡ ಸುಗುಣಿಯು ಗಂಡನನ್ನೂ ಅಗಲಿ ನಿಜವಾಗಿ ಅನಾಥೆಯಾಗಿಬಿಟ್ಟಳು. ಮೊದಲೇ ಮದುವೆಯಾದ ಕಾಲದಿಂದ ಆರೇಳು ವರುಷ ಅತ್ತೆಮನೆಯ ಕಾಟದ ಭೋಗವನ್ನು ಉಂಡುಂಡು ತನ್ನ ವೈರಗುತವನ್ನೆಲ್ಲ ಅದಕ್ಕೆ ಹೋಮಮಾಡಿದ್ದಳು. ಗಂಡ ತೀರಿದಮೇಲಂತೂ ಅವಳ ಬಗ್ಗೆ ಅನಾದರ ಜುಗುಪ್ಸೆಗಳು ಇನ್ನಷ್ಟು ಹೆಚ್ಚಿದವು. ಎಂದಿಲ್ಲದೆ ಹುಟ್ಟಿದ ಹೆಣ್ಣುಕೂಸೊಂದು ಒಂದು ವರ್ಷ ಬದುಕಿ ಬೇನೆಯಿಂದ ಒದ್ದಾಡಿ ಹೋಗಿಬಿಟ್ಟಿತ್ತು. ಈಗ ಒಬ್ಬಳೇ ಒಬ್ಬಳಾದಳು. ಒಂದು ನಾಲ್ಕುದಿನ ಉಸ್ಸೆಂದು ಇರಹೋಗಬೇಕೆಂದರೆ ಅವಳಿಗೆ ಎಡೆಯಿಲ್ಲ. ಯಾರಲ್ಲಿ ಹೋಗಬೇಕು ಎಂದು ವಿಚಾರಿಸುತ್ತಿರುವಾಗ ಕಕ್ಕ ಭೀಮರಾಯನ ನೆನಪಾಯಿತು. ಅವನಿಗೂ ತನ್ನ ತಂದೆಗೂ ಉದಾಸೀನಸಬಂಧವೇ ಹೆಚ್ಚೆಂದು ತಂದೆಯ ಮಾತಿನಿಂದ ಅವಳಿಗೆ ತೋರಿತ್ತು. ಆದರೂ ಈ ಸ್ಥಿತಿಯಲ್ಲಿ ಕಕ್ಕನಿಗೆ ತನ್ನ ಬಗ್ಗೆ ಮರುಕ ಹುಟ್ಟಬಹುದೆಂಬ ನಂಬಿಗೆಯಿಂದ ಧಾರವಾಡಕ್ಕೆ ಹೊರಟು ಬಂದಳು. ಈ ಕರುಣ ಕಥೆಯನ್ನು ಕೇಳಿ ವಾಮಣ್ಣನ ಎದೆ ಕರಗಿ ನೀರಾಯಿತು. 'ಅಯ್ಯೋ! ದುರ್ವಿಧಿಯೇ!' ಎಂದು ಕಣ್ಣೀರು ತಂದನು. ಹಿಂದೆ ಕನ್ನಡ ಸಂಘದ ಸಂಮೇಲನದ ಭಾಷಣದಲ್ಲಿ ಕನ್ನಡತಾಯಿಗೆ ಕೊಟ್ಟ ತಿರಸ್ಕೃತವಿಧವೆಯ ಹೋಲಿಕೆಯು ಈಗ ನೆನಪಿನಲ್ಲಿ ಸುಳಿಯಿತು. ಸುಗುಣಾಬಾಯರ ಬಗ್ಗೆಯೂ ಕನ್ನಡ ತಾಯಿಯ ಬಗ್ಗೆಯೂ ಅಷ್ಟೇ ಕನಿಕರವು ಉಕ್ಕಿತು. ಮೈ ಜುಮ್ಮೆಂದು ಕೂದಲು ಹೊದರೆದ್ದವು. ಬಾಳುವೆಯಲ್ಲಿ ಒಂದು ಗೊತ್ತುಗುರಿಯನ್ನು ಇಟ್ಟುಕೊಂಡು ಧೈರ್ಯದಿಂದ ಹೊರಟರೆ ನಮ್ಮ ಸೌಖ್ಯವು ನಮ್ಮ ಕೈ

ಯಲ್ಲಿಯೇ ಇದೆ ಎಂದು ಭಾವಿಸಿದಾತನು ಅವನು. ಆದರೆ ಈ ಕಿಡಿಗೇಡಿ ದೈವದ ಅಣಕಾಟವನ್ನು ನೆನೆದೊಡನೆ ಅವನಿಗೆ ದಿಕ್ಕು ತಪ್ಪಿದಂತಾಯ್ತು. ತನ್ನ ಹಣೆಯಲ್ಲಿ ಏನೇನು ಬರೆದಿದೆಯೊ ಎಂಬ ಘೋರವಿಚಾರವು ಅವನ ತಲೆ ಮುಸುಕಿ ಮೈ ಬೆವರುವಂತೆ ಮಾಡಿತು.

ಸುಗುಣಿಯು ಬಂದು ಎಂಟು ದಿನಗಳಾದವು. ಅವಳಿಗೆ ಯಾವ ಕೊರತೆಯೂ ಅನಿಸದಂತೆ ಭೀಮರಾಯರು ಆರೈಕೆ ಮಾಡಿದರು. ಏನೋ ದುಃಖವು ತುಸು ಆರಿದಂತಾಯಿತು ಮನೆಯಲ್ಲಿ ಎಲ್ಲರೊಡನೆ ಆಗೀಗ ಮಾತಾಡುವದಕ್ಕೆ ಹತ್ತಿದಳು. ಆದರೆ ಎಷ್ಟಾದರೂ ತಾನು ಕನಕಾಪುರಕ್ಕೆ ತಿರುಗಿ ಹೋಗಲೇಬೇಕೆಂಬ ನಿಶ್ಚಯದಿಂದ ಇಲ್ಲಿಗೆ ಬಂದವಳು. ಆ ನಿಶ್ಚಯವು ಒಮ್ಮೆ ಜೋರಾಗಿ ನುಗ್ಗಿಬರಲು ತನ್ನ ಕೋಣೆಯಿಂದ ಭೀಮರಾಯರು ಕುಳಿತ ಪಡಸಾಲೆಗೆ ಅವಳು ಬಂದಳು. ವಾಮಣ್ಣನೂ ಅಲ್ಲಿಯೇ ಇದ್ದನು. 'ಕಕ್ಕ, ನಾ ಇವತ್ತ ಹೊರಡತೀನಿ ಊರಿಗೆ' ಎಂದಳು. 'ಹಿಂಗೇನು?' ಎಂದು ತಮ್ಮ ಕೆಲಸದ ಭರದಲ್ಲಿ ಅದಕ್ಕೆ ಬಹಳ ಮಹತ್ವ ಕೊಡದೆ ಭೀಮರಾಯರು ಕೇಳಿದರು. 'ಇಲ್ಲ, ಕಕ್ಕ, ನನ್ನ ಇವತ್ತ ಕಳಿಸಿಬಿಡು. ನನ್ನ ಜೋಡೀ ಬಂದ ಆಳು ಎಷ್ಟು ದಿನ ಇರಬೇಕು? ನಾನೂ ಕಡತನಕ ಇಲ್ಲೇ ಇದ್ದರ ಹೆಂಗ ನಡದೀತು? ನನ್ನ ನರಕಕ್ಕ ನಾ ಹೋಗತೀನಿ' ಈಗ ಮಾತ್ರ ಭೀಮರಾಯರು ಗಂಭೀರರಾಗಿ ಕೈಯೊಳಗಿನ ಕೆಲಸ ಬಿಟ್ಟು ಅವಳನ್ನು ನೋಡಿದರು. ಮೋರೆಯಲ್ಲಿ ಬಿರುಸಾದ ನಿಶ್ಚಯವು ಮೂಡಿತ್ತು. ಕೂಡಲೇ ತಮ್ಮ ಸಮಾಧಾನದ ಶಬ್ದಶಸ್ತ್ರಗಳನ್ನು ಹೊರದೆಗೆದರು: 'ಏನು ಹುಚ್ಚಿ, ಸುಗುಣಿ, ನೀನು ನನ್ನ ಮಾತು ಕೇಳತೀ ಹೌದಲ್ಲೊ? ನಾ ನಿಮ್ಮ ಅಪ್ಪ ಇದ್ದಂಗ ಅಂತ ನನ್ನ ಕಡೆ ಬಂದೀದಿ. ಇಲ್ಲೇ ಇದ್ದುಬಿಡು. ಅತ್ತೀಮನಿಗೆ ಹೋಗಿ ಕಾಣಾಕಾಣಾ ಮತ್ತ ಆ ಭವಣಿ ಅನುಭವಿಸಬೇಕಂತೀದೇನು? ಆ ನಿನ್ನ ಆಳುಮನುಷ್ಯನ್ನ ಇವತ್ತು ಕಳಿಸಿಬಿಡು. ನೀ ಎಲ್ಲೆಲ್ಲೂ ಹೋಗಬ್ಯಾಡ. ಇಲ್ಲೇನಾರ ನಿನಗ ಕಡಿಮೆ ಆಗೇದೇನು?'

'ಅದೇನಿಲ್ಲ ಕಕ್ಕ, ಅಲ್ಲೀ ಕಥಿಯೆಲ್ಲಾ ನಿನಗ ಹೇಳೀನಿ. ನಾ ಇಲ್ಲೇ ಇದ್ದುಬಿಟ್ಟರ ಎಲ್ಲಾ ಗೊತ್ತಿಗೆ ಹಚ್ಚತಾರ. ನನಗೇನೂ ಹತ್ತಿಗೊಡೂದುಲ್ಲ.'

'ಸುಗುಣೆ, ಅದರ ಕಾಳಜಿ ಬಿಡು. ನಿನಗ ಸಿಗೂದೆಲ್ಲಾ ಸಿಗೂಹಂಗ ನಾ ವ್ಯವಸ್ಥಾ ಮಾಡತೀನಿ. ನೀ ಈಗ ಬರುದುಲ್ಲಾಂತ ಅವರಿಗೆ ಇವತ್ತ ಪತ್ರ ಬರಕೊಟ್ಟು ಮನುಷ್ಯಾನ್ನ ಕಳಿಸಿಕೊಡೂಣ. ಮುಂದಿನದೆಲ್ಲಾ ನಾ ನೋಡಿಕೋತೀನಿ. ನೀ ರಾಮ-ಕೃಷ್ಣ ಅಂತ ಇಲ್ಲೆ ಇದ್ದುಬಿಡು. ನಿನ್ನ ದಸಿಂದ ಮನ್ಯಾಗ ಪುರಾಣ ಹೇಳಸತೀನಿ, ಪುಸ್ತಕ ಕೊಡಸತೀನಿ ' ಈ ಬಗೆ ಯಿಂದ ಭೀಮರಾಯರು ಅದ್ಭುತ ಮಮತೆಯನ್ನು ವ್ಯಕ್ತಮಾಡಿ ಸುಗು ಣೆಯ ಮನವೊಲಿಸಿಬಿಟ್ಟರು. 'ಅವಶ್ಯ ಕಂಡಾಗ ನಾವಿಬ್ಬರೂ ಕೂಡಿಯೆ ಒಮ್ಮೆ ಹೋಗೋಣ' ಎಂಬ ಆಶ್ವಾಸನವನ್ನೂ ಕೊಟ್ಟರು. ಅದನ್ನು ನಂಬಿ ಅವಳು ತನ್ನ ನಿಶ್ಚಯವನ್ನು ಬಹುಮಟ್ಟಿಗೆ ತಿರುಗಿಸಿದಳು. ಆಳುಮನುಷ್ಯನು ಭೀಮರಾಯರ ಪತ್ರ ತಕ್ಕೊಂಡು ಕನಕಾಪುರಕ್ಕೆ ಹೊರಟುಹೋದನು. ಇದನ್ನೆಲ್ಲ ನೋಡಿ ಕೇಳಿದ ವಾಮಣ್ಣನು ಭೀಮರಾಯರ ಉದಾರಹೃದಯದ ಬಗ್ಗೆ ಬೆರಗುಬಟ್ಟು ಹೆಚ್ಚೆಚ್ಚು ಆದರವುಳ್ಳವನಾದನು. ಇವರು ತನ್ನ ಸಂಶಯಗಳನ್ನೆಲ್ಲ ಹೊಡೆದು ಹಾಕಿ ತನಗೆ ಮನೆಯಲ್ಲಿ ಇಟ್ಟುಕೊಂಡರು. ಈಗ ಸುಗುಣಾಬಾಯಿಯ ವಿಷಯದಲ್ಲಿಯೂ ಹಾಗೇ ಮಾಡಿದರು. ಹೊರ ಗಿನ ಜಗತ್ತಿನಲ್ಲಿ ಅತ್ಯಂತ ವ್ಯವಹಾರನಿಷ್ಠುರರಾದ ಮಾವಂದಿರು ಮನೆಯಲ್ಲಿ ತೋರುವ ಈ ಶುದ್ಧ ಉಪಕಾರಬುದ್ಧಿಯು ಅದೆಷ್ಟು ಸೋಜಿಗವೆಂಬೊಂದು ದಿಗಿಲು ಅವನ ತಲೆಯ ಮೂಲೆಯಲ್ಲಿ ಉಳಿಯಿತು. ಆದರೆ ಅವನ ಹೃದಯವು ಅವರಿಗೆ ಮೂಕ ಅಭಿವಂದನೆಗಳನ್ನು ತುಂಬ ನೀಡದೆ ಇರಲಿಲ್ಲ.

ಬರಬರುತ್ತ ಸುಗುಣಾಬಾಯಿಯು ತನ್ನ ಕೊರಗನ್ನು ಒತ್ತಿಕ್ಕಿ ಹೆಚ್ಚೆ ಚ್ಚಾಗಿ ಎಲ್ಲರ ಜೊತೆಗೆ ಮಾತುಕತೆಯಾಡುತ್ತ ಕೂಡಹತ್ತಿದಳು. ಪದ್ದಕ್ಕ ನಿಗೂ ಅವಳಿಗೂ ಬಹಳ ಸಲಿಗೆ ಬೆಳೆಯಿತು. ವಾಮಣ್ಣನ ವಿಚಾರವಾಗಿ ಅವನ ಅತ್ತೆಯ ಬಾಯಿಂದಲೂ ಪದ್ದಕ್ಕನ ಅರ್ಧಮರ್ಧ ಮಾತುಗಳಿಂದಲೂ ಎಷ್ಟೋ ಸಂಗತಿಗಳನ್ನೂ ಅವಳು ತಿಳಿದುಕೊಂಡಳು. ದೂರಿಂದಲೇ ಅವನ ದಿನದ ನಡತೆಯನ್ನೂ ನೋಡಿದಳು. ಅಳಿಯನ ಬಿಮ್ಮುಸೊಮ್ಮಿಲ್ಲದೆ ಅವ ನೆಷ್ಟು ತಿಳಿವಳಿಕೆಯಿಂದ ನಡೆಯುವನೆಂದು ಮನಸ್ಸಿನಲ್ಲಿಯೆ ಅವನನ್ನು ಹೊಗಳುತ್ತಿದ್ದಳು. ಅವನೊಡನೆ ಇನ್ನೂ ಮಾತಾಡುವ ಪ್ರಸಂಗವು ಬಂದಿರ ಲಿಲ್ಲ. ಮಾತನಾಡಿದರೆ ಏನೆಂದು ಭಾವಿಸಬಹುದೋ ಎಂಬ ಮನೆತನಸ್ತ

ಹೆಂಗಸಿನ ಹೆದರಿಕೆಯು ಮುಖ್ಯ ಕಾರಣವಾಗಿತ್ತು. ಮುಂದೆ ಹೊತ್ತು ಕಳೆಯಲಿಕ್ಕೆ ಅವಳಿಗೆ ಕತೆಪುಸ್ತಕಗಳು ಬೇಕಾದವು. ಅವಳಿಗೆ ಬೇಕಾದ ಪುಸ್ತಕವನ್ನು ಕೊಡಬೇಕೆಂದು ಭೀಮರಾಯರು ರಾಮಣ್ಣನಿಗೆ ತಿಳಿಸಿದ್ದರು. ಅವನು ಆ ಪ್ರಕಾರ ಪದ್ದಕ್ಕನ ಕೂಡ ಪುಸ್ತಕ ಕಳಿಸಿ ಓದಿಯಾದ ಮೇಲೆ ಅವಳಿಂದಲೆ ತಿರುಗಿ ತರಿಸುತ್ತಿದ್ದನು. ಅವನು ತಾನಾಗಿ ಅವಳೊಡನೆ ಮಾತಿತ್ತಲಿಲ್ಲ. ಆದರೆ ಒಂದೇ ಮನೆಯಲ್ಲಿ ಎಷ್ಟೇ ದೂರದ ಆಪ್ತೇಷ್ಟರು ಇರಲಿ, ಕೂಡಿಕೊಂಡು ಬಹಳ ದಿನ ಇರುತ್ತಿದರೆ ಮಾತಿನ ನಿರ್ಬಂಧವು ತೀರ ಸಣ್ಣ ಪ್ರಸಂಗದಲ್ಲಿ ಬಯಲಾಗುತ್ತದೆ. ಒಮ್ಮೆ ಪದ್ದಕ್ಕ ಮುಂಚ್ಯಾಗಿ ಹೊರಗೆ ಕುಳಿತಿದ್ದಳು. ತನ್ನೊಂದು ಪುಸ್ತಕವನ್ನು ರಾಮಣ್ಣನು ಮಾಡದಿಂದ ಮಾಡಕ್ಕೆ ತಿರುಗಾಡಿ ಹುಡುಕುತ್ತಿದ್ದನು. ಒಬ್ಬ ಗೆಳೆಯನಿಗೆ ಆಗಲೆ ಕೊಡಬೇಕಾಗಿತ್ತು. ಪದ್ದಕ್ಕನು ತಿಳಿಯದೆ ಒಯ್ದು ಅದನ್ನು ಸುಗುಣಾಬಾಯಿಯ ಕೋಣೆಯಲ್ಲಿ ಇಟ್ಟಿದ್ದಳು. ಅವನು ಅದನ್ನು ಹುಡುಕುತ್ತಿರುವನೆಂದು ಅವಳಿಗೆ ಗೊತ್ತಾಗಲು 'ಇಲ್ಲಿದ ನಿಮ್ಮ ಪುಸ್ತಕ' ಎಂದು ಕೋಣೆಯಿಂದ ಹೊರಬಂದು ದೂರ ನೆಲದ ಮೇಲಿಟ್ಟು ಹೋದಳು. ಹೀಗೆ ಅವರ ನಡುವಿನ ಸಂಕೋಚವು ಕ್ರಮೇಣ ದೂರಾಯಿತು. ಅಕ್ಕ-ತಮ್ಮನಂತೆ ಅವರು ಒಬ್ಬರನ್ನೊಬ್ಬರು ತಿಳಿದರು. ಸುಗುಣಾಬಾಯಿಯರನ್ನೂ ಪದ್ದಕ್ಕನನ್ನೂ ಕೂಡಿಸಿಕೊಂಡು ಎಷ್ಟೋ ಹೊಸ ಹಾಡುಗಳನ್ನು ರಾಮಣ್ಣನು ಹಾಡಿ ತೋರಿಸುತ್ತಿದ್ದನು, ಅಲ್ಲಲ್ಲಿ ಅರ್ಥ ಹೇಳುತ್ತಿದ್ದನು. ಬಾಗಿಲ ಮರೆಗೆ ನಿಂತು ಅತ್ತೆಯವರೂ ನಡುನಡುವೆ ಕೇಳುತ್ತಿದ್ದರು. ಸುಗುಣಾಬಾಯಿಗೆ ಓದುವ ಲವಲವಿಕೆಯಿದ್ದಷ್ಟು ಪದ್ದಕ್ಕನಿಗೆ ಇರಲಿಲ್ಲ. ರಾಮಣ್ಣನ ಒಲುಮೆಯಿಂದ ಯಾವುದಾದರೂ ಪುಸ್ತಕ ತಂದು ಹಿಟ್ಟಿನ ಡಬ್ಬಿಯಲ್ಲಾಗಲಿ ಎಣ್ಣೆಯ ಮಾಡದಲ್ಲಾಗಲಿ ಅರ್ಧಗಿರ್ಧ ಓದಿ ಒಗೆದುಬಿಡುವುದು ಅವಳ ಸ್ವಭಾವವಾಗಿತ್ತು. ಹಾಗೆ ಮಾಡಕೂಡದೆಂದೂ ಸುಗುಣಾಬಾಯಿಯಂತೆ ಓದನ್ನು ಕಲಿಯಬೇಕೆಂದೂ ರಾಮಣ್ಣನು ಅವಳಿಗೆ ಅದೆಷ್ಟೋ ಬಾರಿ ಹೇಳುತ್ತಿದ್ದನು. ಅವಳು ತಾನಿದ್ದಂತೆ ಇದ್ದುಬಿಡುತ್ತಿದ್ದಳು.

ಒಂದು ರಾತ್ರಿ ಪದ್ದಕ್ಕನಿಗೆ ಇಂಗ್ಲಿಶ್ ಪಾಠದ ಪ್ರಾರಂಭ ಮಾಡಬೇಕೆಂದು ಪುಸ್ತಕ-ವಹಿ-ಪೆನ್ಸಿಲ್ಲುಗಳನ್ನು ಸಜ್ಜುಗೊಳಿಸಿ ಊಟವಾದ ಗಳಿಗ್ಗೆ

ಎಂದು ವಾಮಣ್ಣನು ಕುಲುಕುಲು ನಗೆಯಿಂದ ಕೇಳಿದನು. ಅವಳ ಧೋರಣವು ಬೇರೆಯಾಗಿತ್ತು.

'ಭಾಳ ದಿವಸಾತು. ನನ್ನ ಕೊರಳೊಳಗ ಬೋರಮಾಳಾ ಇಲ್ಲ, ಕೈಯೊಳಗ ಬಿಲವಾರ ಇಲ್ಲ!' ಆಯ್ತು, ವಾಮಣ್ಣನ ಎದೆಯಲ್ಲಿ ಚುಚ್ಚಿದಂತಾಯ್ತು. ತನ್ನ ಹಂಬಲಕ್ಕೂ ಅವಳದಕ್ಕೂ ಅದೆಷ್ಟು ಅಂತರವೆಂದು ಮರುಗಿದನು. ಅವಳು ಕೇಳಿದ್ದಕ್ಕೆ ನೇಟಾಗಿ ಉತ್ತರ ಕೊಡಲಾರದೆ ಮನಸ್ತಾಪದಿಂದ ಮಂಚದಿಂದ ಇಳಿದು ಅಡ್ಡಾಡಹತ್ತಿದನು. ಮನಸ್ಸು ಹಿಡಿತಕ್ಕೆ ಸಿಕ್ಕಲೊಲ್ಲದು, ಅಶಾಂತಿಯು ಹಬ್ಬುತ್ತಿದೆ. 'ನನ್ನ ಸುಖದುಃಖಗಳೇನು ನಿನಗೆ ತಿಳಿಯೋದಿಲ್ಲ ಅಂದ ಹಾಗಾತು. ನಾ ಎಷ್ಟು ನುಂಗಿಕೊಂಡು ಇಲ್ಲಿದ್ದೀನಿ, ಕಚೇರಿಯೊಳಗೆ ಎಷ್ಟು ತಾಳಿಕೊಂಡು ಕೆಲಸ ಮಾಡತೀನಿ! ಅದು ಈ ಬೆಂದೆದೆಗೆ ಒಂದೇ ಗೊತ್ತು. ನೀನು ನಿನ್ನ ವಸ್ತ್ರ-ಒಡವೆ, ಸಡಗರ-ಸಂಭ್ರಮ ಅನಕೋತ ಇದ್ದುಬಿಡು. ಲಗೂನೆ ಪಗಾರ ಸುರುವಾತು ನೆಟ್ಟಗಾತು, ಇಲ್ಲಂದರೆ ನಾನೇ ಎಲ್ಲಿಯಾದರೂ ದೇಶಾಂತರಕ್ಕೆ ಹೋಗಿಬಿಡತೀನಿ!'

ತಾನು ಕೇಳಿದ್ದು ಈ ಪಲ್ಲವಿಗೆ ಒಯ್ಯುವುದೆಂದು ಪದ್ದಕ್ಕನಿಗೆ ಎಷ್ಟೂ ಅನಿಸಿರಲಿಲ್ಲ. ಈಗ ಅವನ ಮಾತು ಕೇಳಿ ಅವಳು ಹೌಹಾರಿ ಕಣ್ತುಂಬ ನೀರು ತಂದಳು. ಮುಖವೆತ್ತಿ ವಾಮಣ್ಣ ನೋಡಿದನು. ಮತ್ತೆ ಮಂಚಕ್ಕೆ ಹೋಗಿ ಅವಳೊಡನೆ ಕೆಲ ನಿಮಿಷಗಳ ತನಕ ಸ್ತಬ್ಧವಾಗಿ ಕುಳಿತು 'ಹಾಂಗೆಲ್ಲಾ ಅಳಬಾರದು' ಎಂದು ಮುಖಕ್ಕೆ ಮುದ್ದಿಟ್ಟನು. ಮೋಹವು ಸೆಳೆಯಿತು, ಇಬ್ಬರೂ ಜೊತೆಯಾಗಿ ಹಾಸಿಗೆಯ ಆಸರು ಹೊಂದಿದರು.

ಮರುದಿನ ಸಂಜೆ ವಾಮಣ್ಣನು ಕಚೇರಿಯಿಂದ ತಿರುಗಿ ಬಂದನು. ರೂಢಿಯಂತೆ ಪದ್ದಕ್ಕನು ಚಹಮಾಡಿ ಕೊಟ್ಟಳು. ಅದನ್ನು ಕುಡಿಯದೆ ಬಾಗಿಲಲ್ಲಿ ಇಟ್ಟುಬಿಟ್ಟನು. ಭೀಮರಾಯರು ಅದೇ ತಮ್ಮ ಕಚೇರಿ ಮುಗಿಸಿಕೊಂಡು ಮನೆಗೆ ಬಂದಿದ್ದರು. ಪಡಸಾಲೆಯಲ್ಲಿ ಲೋಡಿಗೆ ಆತು ಕುಳಿತು ವಾಮಣ್ಣನ ಕಡೆ ನೋಡಿದರು. ಮುಖವು ಕಪ್ಪಿಟ್ಟಿತ್ತು. ಕೈಯಲ್ಲಿ ಟೊಪ್ಪಿಗೆ ಹಿಡಿದು ದೀರ್ಘವಿಚಾರದಲ್ಲಿ ಮುಳುಗಿದಂತೆ ಕಂಡಿತು. ಭೀಮರಾಯರು ಕೂಡಲೇ 'ಏನು ವಾಮನರಾವ, ಕಚೇರಿಯ ಸುದ್ದಿಯೇನು? ಇಲ್ಲಿ ಕೂಡ ಬರ್ರಿ' ಎಂದು ಕರೆದರು. ವಾಮಣ್ಣನು ಒಲ್ಲದಾಗಿ ಬಂದು ದೊಪ್ಪೆಂದು

ಗಾದಿಯಲ್ಲಿ ಬಿದ್ದುಕೊಂಡು 'ಏನು ಸುದ್ದಿ! ನಮ್ಮದೆಲ್ಲಾ ಮಂಗಳಾರತಿ ಆತು' ಎಂದನು. ಭೀಮರಾಯರು ಲೋಡಿಗೆ ಹಿಂಬಾಗಿ ಬಿದ್ದವರು ನೆಟ್ಟಗೆದ್ದು 'ಅಂದರೇನು ಅರ್ಥ?' ಎಂದು ಕೇಳಿದರು. "ಏನು ಅರ್ಥ? ಅದೇ. ಈ ಕೆಲಸದೊಳಗೆ ಅರ್ಥವಿಲ್ಲ ಎಂದು ತಿಳಿದುಹೋಯ್ತು. ಮೊದಲೇ ಬುದ್ಧಿ ಬಂದಿದ್ದರೆ ಎಲ್ಲಿಯಾದರೂ ಸಾಲೀ ಮಾಸ್ತರಾದರೂ ಆಗುತ್ತಿದ್ದೆ.... ಈವತ್ತು ಕಲೆಕ್ಟರರ ಕಡೆ ಹೋಗಿದ್ದೆ. 'ಈಗ ಸಮೀಪದೊಳಗೆ ನಿಮಗೆ ಪಗಾರೀ ಕೆಲಸ ಸಿಗುವದು ಶಕ್ಯವಿಲ್ಲ. ಕೆಳಗಿನ ವರ್ಗದ ಜನರ ನಂಬರಿದೆ. ನಡುವೆ ಯಾವಾಗಾದರೊಮ್ಮೆ ಬದಲೀ ಕೆಲಸ ಕೊಡಬಹುದು.' ಎಂದರು. ನಾನು ಬೇಕಾದಷ್ಟು ಹೇಳಿಕೊಂಡೆ. ಆದರಿಂದ ರೇಗಿ 'ನಿಮಗೆ ಯಾವದೂ ವಚನ ಕೊಡೋದು ಶಕ್ಯವಿಲ್ಲ' ಎಂದುಬಿಟ್ಟರು." ಭೀಮರಾಯರಿಗೆ ಇವನ್ನು ಕೇಳಿ ಬಹಳೇ ವ್ಯಥೆಯಾಯಿತು. ಆದರೂ ತಮ್ಮ ಸ್ವಭಾವಸಿದ್ಧವಾದ ಪದ್ಧತಿಯಲ್ಲಿ ಸಮಾಧಾನ ಹೇಳಿದರು. 'ನಾ ಎಲ್ಲಾ ಭೆಟ್ಟಿ ಆಗಿ ಕೇಳಿಕೋತೀನಿ. ನೀವು ಇಲ್ಲದ್ದೊಂದು ಕಲ್ಪನಾ ಮಾಡಿ ನಿರಾಶ ಆಗಬ್ಯಾಡರಿ.' ವಾಮಣ್ಣನಿಗೆ ಅದರಿಂದ ತೃಪ್ತಿ ಆಗಲಿಲ್ಲ. 'ಉಮೇದವಾರಿ ನಡೆದು ವರ್ಷದ ಮೇಲಾಯಿತು. ಇನ್ನೂ ಹಾದಿಗೆ ಹತ್ತಲಿಲ್ಲ. ವಯಸ್ಸಿನ ಅವಧಿ ಮುಗಿಯಲಿಕ್ಕೆ ಬಂತು. ಇತ್ತಲಾಗ ನೀವು ಹೇಳಿದ ಪ್ರಬೇಶನರಿಯೂ ಸಾಧಿಸಲಿಲ್ಲ. ಇನ್ನು ಯಾಕೆ ಈ ಬಿಸಿಲುಗುದುರೆಯ ಬೆನ್ನು ಹತ್ತಬೇಕು?' ಎಂದು ಕಲೆಕ್ಟರ ಕಚೇರಿಯಿಂದ ಪ್ರತ್ಯಕ್ಷವಾಗಿ ಹೊರಹೊರಟಂತೆ ಅವನು ಅಲ್ಲಿಂದ ಎದ್ದು ತನ್ನ ಅಟ್ಟವನ್ನು ಏರತೊಡಗಿದನು.

ಭೀಮರಾಯರು ಅವನ ದಪ್ಪನಾದ ಕಾಲುಹೆಜ್ಜೆಗಳನ್ನು ಕೇಳುತ್ತ ದೊಡ್ಡದಾಗಿ ಉಸಿರುಬಿಟ್ಟರು. ವಾಮಣ್ಣನು ಮೇಲೆ ಏರುತ್ತ, ಹೋದ ರಾತ್ರಿ ತನ್ನ ಹೆಂಡತಿಯ ಮುಂದೆ ಬಾಯಿತಪ್ಪಿ ಆಡಿದ ದೇಶಾಂತರದ ಕಲ್ಪನೆಯು ನೆನಪಾಗಿ, ಒಂದು ಕ್ಷಣ ಭೂಕಂಪನವಾದಂತೆ ಗಡಗಡ ನಡುಗಿದನು.

## ಪ್ರಕರಣ ೩.

ಯಾವೊಂದು ಊರು ಒಂದೆರಡು ಹರಿದಾರಿಯಲ್ಲಿಯೇ ಇರುವುದೆಂದು ಕೇಳಿ ಹೊಸ ದಾರಿಗುಂಟ ದಾರಿಕಾರನೊಬ್ಬನು ಹೊರುಡುತ್ತಾನೆ. ಬಹಳ ಹುರುಪಿನಿಂದ ಅಷ್ಟು ದಾರಿ ನಡೆದು ಕೇಳಲಾಗಿ ಆ ಊರು ಇನ್ನೂ ದೂರವೆಂದು ತಿಳಿಯುತ್ತದೆ. ಅಲ್ಲಿಂದ ಮೊದಲಿನ ಹುರುಪು ಕುಗ್ಗಿ, ಹೇಗೋ ಕಾಲೆಳೆಯುತ್ತ ಹಿಂದೆ ಮುಂದೆ ನೋಡುತ್ತ ಅವನು ಹೊರಡುವನು. ವಾಮಣ್ಣನ ಉಮೇದವಾರಿಯು ಇಂಥ ಮುಗಿಯದ ದಾರಿಯಾಯಿತು. ಮೊನ್ನೆಯ ದಿನದಿಂದ ಕೆಲಸದಲ್ಲಿ ಅವನ ಆಸ್ಥೆಯು ಕಡಿಮೆಯಾಗಿದೆ. ಸೆಟ್ಟಿಗೆ ನಿದ್ದೆಯಿಲ್ಲದೆ ನೂರಾರು ಬಗೆಯ ಲೆಕ್ಕವನ್ನು ಹಾಕುತ್ತಿರುವನು. ಯಾವುದೂ ಬಗೆಹರಿಯದೆ ನಿತ್ಯವಿಧಿಯಂತೆ ಕಚೇರಿಗೆ ಹೋಗಿ ಬರುವನು. ಕಚೇರಿಯ ಕೆಲಸ ಮಾಡುವವರಿಗೂ ನಿರ್ಜೀವಯಂತ್ರಕ್ಕೂ ಹೋಲಿಸುವುದೆಂದರೇನು ಎಂಬುದರ ಅರ್ಥವು ಈಗ ಅವನಿಗೆ ಮನದಟ್ಟಾಯಿತು. ಭೀಮರಾಯರು ಇದನ್ನರಿತು ಸಂಧಿ ಸಾಧಿಸಿ ತಮ್ಮ ವಿಶೇಷ ಸತ್ತೆಯುಳ್ಳ ಕಲೆಕ್ಟರ ಸಾಹೇಬರನ್ನು ಕಂಡು ಬಂದರು. ಅದರಿಂದ ಆಶೆಯ ಹೊಸ ಕಿರಣವೇನೂ ಮೂಡಲಿಲ್ಲ. ಪರಿಸ್ಥಿತಿಯೇ ಹಾಗಿತ್ತು. ಬ್ರಾಹ್ಮಣರಲ್ಲದವರಿಗೆ ಮೊದಲು ಆರಿಸಬೇಕೆಂದು ಸರಕಾರದಲ್ಲಿ ನಿಷ್ಕರ್ಷೆಯೆಮವೇ ಆಗಿತ್ತು. ಭೀಮರಾಯರು ತೀರ ನಿರುಪಾಯರಾದರು. ಆದರೂ ವಾಮಣ್ಣನು ಬಹಳ ಮನಸ್ಸಿಗೆ ಹಚ್ಚಿಕೊಂಡು ಹುಚ್ಚು ನಿರ್ಣಯ ಮಾಡಿಯಾನೆಂಬ ಭಯ ಹುಟ್ಟಿ ತಮ್ಮ ಸಮಾಧಾನದ ತುಷಾರಗಳಿಂದ ಆಗಾಗ ಅವನ ಮನಸ್ಸನ್ನು ಸಿಂಪಡಿಸುತ್ತಿದ್ದರು. ಆದರ ಪ್ರಯೋಜನವು ಆಗುವಷ್ಟು ಆಗಲಿಲ್ಲೆಂದು ಅವರಿಗೆ ತಿಳಿಯದೆ ಉಳಿಯಿತು. ವಾಮಣ್ಣನು ಸಾವಕಾಶವಾಗಿ ಹೊಸ ನಿಶ್ಚಯದ ರಾಜ್ಯದಲ್ಲಿ ಹೋಗುತ್ತಲಿದ್ದನು.

ಮಳೆಗಾಲದ ಒಂದು ಸಂಜೆಯ ಹೊತ್ತು. ಮುಗಿಲಲ್ಲಿ ಕಪ್ಪು ಮೋಡಗಳು ಕೂಡಿ ರಪರಪ ಎಂದು ಬಿರುಮಳೆ ಬಿದ್ದಿತು. ಇದೇನು ಇನ್ನೆಷ್ಟು ತಾಸು ಸುರಿಯುವುದೊ ಎಂದು ಕಚೇರಿಯಿಂದ ಹೊರಬೀಳದೆ ವಾಮಣ್ಣನು ಅಲ್ಲೇ ಉಳಿದಿದ್ದನು.ಒಂದರ್ಧ ತಾಸಿನಲ್ಲಿ ಮಳೆ ನಿಂತು ಎಲ್ಲ ಹೊರವಾಯಿತು. ತೆಳ್ಳಗಿನ ಬಿಳಿಮೋಡದ ತೆರೆಯೊಳಗಿಂದ ಪಶ್ಚಿಮದ ಸೂರ್ಯನು ಹೂಬಿಸಿಲು

ನೂಸುತ್ತ ಹೊರಬಿದ್ದನು. ಬೀದಿಗಳಲ್ಲೆಲ್ಲ ನೀರುನೀರಾಗಿದೆ. ಕಾಲುವೆಗಳು ಕೆಂಪು-ಕೆಂಪಾಗಿ ಹರಿಯುತ್ತವೆ. ಹುಲ್ಲಿನ ಮೇಲೂ ಮರದ ಮೇಲೂ ಮಳೆ ಹನಿಗಳು ವಜ್ರದಂತೆ ಹೊಳೆಯುತ್ತಿರುವವು. ನೆಲಗನ್ನಿಕೆಯು ಹಸನಾಗಿ ಮೈತೊಳೆದು ಮುತ್ತು-ರತ್ನಗಳನ್ನು ಮೈಮೇಲೆ ಇಟ್ಟುಕೊಂಡಂತೆ ಹುಚ್ಚೆದ್ದ ಕಲ್ಪನೆಗೆ ತೋರುವುದು. ಎಂಥ ಅಳಿಮನಸನ್ನೂ ಬೆಂದ ಹೃದಯವೂ ಹೊಸ ಪರಿಯಾಗುವಂಥ ದೃಶ್ಯ. ಇದನ್ನು ಅನೇಕ ಸಾರೆ ನೋಡಿ ವಾಮಣ್ಣನು ತನ್ನ ಬಾಳಿನಲ್ಲಿ ಹೊಸ ಉತ್ಸಾಹವನ್ನು ತುಂಬಿಕೊಂಡಿದ್ದನು. ಇಂದಿನ ತನ್ನ ನಿರಾಶೆ-ನಿರ್ವಿಣ್ಣತೆಯಲ್ಲಿಯೂ ಸೃಷ್ಟಿಯ ಈ ಹೂಬಿಸಿಲಾಟವು ಹೃದಯವನ್ನು ಅರಳಿಸಿತು. 'ಸೃಷ್ಟಿಯಲ್ಲಿ ಮಬ್ಬಿದೆ, ಬೆಳಕಿದೆ; ಎರಡರಲ್ಲಿಯೂ ಒಂದು ಆಟ ಗಾರಿಕೆಯ ಸೊಗಸಿದೆ; ಹಾಗೆ ಮನುಷ್ಯನ ಬಾಳುವೆ. ಆದರೆ ನಾನಿನ್ನೂ ಆಟ ಗಾರನಂತೆ ಆಗಿಲ್ಲ, ಹಾಗೆ ಆಗಬೇಕು; ಇಲ್ಲದಿದ್ದರೆ ಈ ಇರುವಿಕೆಯ ಬಳಲಿಕೆಗೆ ಕೊನೆಯಿಲ್ಲ,' ಎಂದು ಮೊದಲಾಗಿ ತನ್ನ ತಾನೆ ಹುರಿದುಂಬಿಸುತ್ತ ಮನೆಯ ಕಡೆ ಹೊರಟನು. 'ಕನ್ನಡ ಕೋಗಿಲೆ'ಗಳ ಹಿಗ್ಗು-ಹಾಡೊಂದು ಅವನ ಬಾಯಲ್ಲಿ ಗುಣುಗುಡುತ್ತಿತ್ತು.

ವಾಮಣ್ಣನು ಕಚೇರಿಯ ಒಳದಾರಿಯನ್ನು ದಾಟಿ ದೊಡ್ಡ ಬೀದಿಗೆ ಬಂದನು. ಕೆಲವು ಹೆಜ್ಜೆ ನಡೆದ ಮೇಲೆ ನಿವಡುನಿವಡಾಗಿ ಬೀದಿಯ ತುದಿ ಗಳಲ್ಲಿ ಕಾಲೇಜಿನ ಹುಡುಗರು ನಿಂತಿರುವುದನ್ನು ಕಂಡನು. ಏನೋ ಚಮ ತ್ಕಾರದ ಸುದ್ದಿಯು ಹರಡುತ್ತಿರಬೇಕು ಎಂದು ಅವನಿಗೆ ಭಾಸವಾಯಿತು. ಕೆಲವರು ಗಂಭೀರವಾಗಿ ಮೆಲ್ಲಗೆ ಮಾತಾಡುತ್ತಿರುವರು. ಕೆಲವರು ಬಿದ್ದು ಬಿದ್ದು ನಗುತ್ತಿರುವರು. ಇಬ್ಬರು ಟಾಂಗೆ ಹೊಡೆಯುವವರು ಸಹ ಕೆಳ ಗಿಳಿದು ಬಹಳ ಕುತೂಹಲದಿಂದ ಅದೇ ವಿಷಯವನ್ನು ಕುರಿತು ಪ್ರಶ್ನೋತ್ತರ ಮಾಡುವಂತೆ ತೋರಿತು. 'ಮೈ ದೇಖ್ಯಾ' (ನಾ ನೋಡಿದೆ.) ಎಂದೊಬ್ಬ ಗಟ್ಟಿಯಾಗಿ ಹೇಳಿದನು. 'ಪಕಡಗಯೆ ಕ್ಯಾ?' (ಹಿಡಕೊಂಡು ಹೋದರೇನು?) ಇನ್ನೊಬ್ಬ ಕೇಳಿದನು. ಈ ಸಂವಾದದ ಮೇಲಿಂದ ಯಾರನ್ನೋ ಪೋಲಿ ಸರು ಹಿಡಿದುಕೊಂಡು ಹೋಗಿರಬಹುದೆಂದು ವಾಮಣ್ಣನು ಬಹಳಷ್ಟು ಅತ್ತ ಲಕ್ಷ್ಯಕೊಡಲಿಲ್ಲ. ಅವು ೧೯೩೦ರ ರಾಜಕೀಯ ಚಳವಳಿಯ ದಿವಸ ಗಳಾದ್ದರಿಂದ ಯಾರನ್ನಾದರೂ ದೇಶಭಕ್ತರನ್ನು ಕೈಸೆರೆಮಾಡಿರಬಹುದು

ಎಂದುಕೊಂಡನು. ಆದರೆ ಮುಂದೆ ಹೋಗುವುದರಲ್ಲಿ 'ಕಾಲೇಜಸ್ಟೂಡಂಟ್ ಹಿಂಗ ಮಾಡಬಾರದರೆಪ' ಎಂಬ ಏರುದನಿಯ ಮಾತು ಒಂದು ಬೀದಿ-ಗುಂಪಿನಿಂದ ಹೊರಟು ಕೇಳಿಸಿತು. ಅದ್ಯಾವ ಕಾಲೇಜ ವಿದ್ಯಾರ್ಥಿಯು ಚಳವಳಿಯಲ್ಲಿ ಸೇರಿದನೆಂದು ತಿಳಿಯುವ ಉತ್ಸುಕತೆಯಿಂದ ಆ ಗುಂಪಿಗೆ ತುಸು ಹತ್ತಿರ ಹೊಂದಿಕೊಂಡು ಅವನು ಮೆಲ್ಲನೆ ಸಾಗಿದನು. ಅಷ್ಟರಲ್ಲಿ ಒಬ್ಬನು 'ಹಂಗಾರ ಎಂ. ಆರ್. ಜೇಲು ಕಂಡ' ಎಂದನು. 'ಛಲೋ ಫಜೀತಿ ಆತು ಬಿಚರಿ' ಎಂದನು ಇನ್ನೊಬ್ಬ. ಈ ಎಂ. ಆರ್. ಎಂಬವನು ಯಾರಿರಬಹುದು? ಚಳವಳಿಯ ದೆಸೆಯಿಂದ ಜೇಲು ಕಂಡಿದ್ದರೆ ಅವನಿಗೆ ಫಜೀತಿ ಆಯಿತೆಂದು ಯಾಕೆ ಆಡುತ್ತಿರುವರು? ಈ ತರ್ಕ-ವಿತರ್ಕದಲ್ಲಿ ಅವನು ಊರೊಳಗಿನ ಗದ್ದಲದ ಬೀದಿಗೆ ಬಂದನು. ಬಳಿಯಲ್ಲಿಯೇ ಪೋಲೀಸಸ್ಟೇಶನ್ನು ಕಂಡಿತು. ಅಲ್ಲಿ ವಿಪರೀತವಾಗಿ ಜನಸಂದಣಿ ಕೂಡಿತ್ತು. ಅದೇನು ನೋಡಬೇಕು ಎಂದು ಒಮ್ಮೆ ಅನಿಸಿತು. ಸರಕಾರದ ಸೇವಕನಾಗಬೇಕೆಂದು ದೀಕ್ಷೆ ಹೊಂದುತ್ತಿರುವ ತನಗೆ ಈ ಗೊಡವೆ ಯಾಕೆಂದು ಹಿಂಜರಿದನು. ಅಷ್ಟರಲ್ಲಿ ಅವನ ಕಾಲೇಜ ಮಿತ್ರನೊಬ್ಬನು ಭೆಟ್ಟಿಯಾಗಿ ನಡೆದ ಸಂಗತಿಯನ್ನೆಲ್ಲ ಹೇಳಿದನು. 'ಏನು ಅಸಹ್ಯ ನೋಡಿರಿ. ನಿಮ್ಮ ಪ್ರೀತಿಯ ಗೆಳೆಯ ಎಂ. ಆರ್. ಕುಲಕರ್ಣಿನ್ನ ಲಾಕಪ್ಪಿನೊಳಗೆ ಕೂಡಿಸಿರತಾರೆ. ಆ ಮಿಸ್ ಜೇನ್ ಪಿಂಟೋ ಅಂತ ಕಾಲೇಜದೊಳಗೆ ಇಲ್ಲs, ಆ ಕ್ರಿಶ್ಚನ್ ಹುಡುಗಿಯ ಮಾನಭಂಗ ಮಾಡಿದನಂತೆ.'

'ಹೀಗೇನು! ನಮ್ಮ ಮುರಲಿಯೇ!' ಎಂದು ವಾಮಣ್ಣನು ಅಚ್ಚರಿ-ಗಾಬರಿಗಳಿಂದ ಕೂಡಿದ ದನಿಯಲ್ಲಿ ಕೇಳಿದನು. ಅವನ ಕಾಲು ಮುಂದೆ ಏಳಲೊಲ್ಲವು. ಅತ್ತತ್ತ ಹೋಗಿ ನೋಡಿ ಬರಬೇಕೆಂದು ಮೈಜಗ್ಗಿದಂತಾಗಿ ಜನದಟ್ಟಣೆಯ ವರೆಗೆ ಹೋದನು. ಪೋಲೀಸರು ಜನರನ್ನು ಚೆದರಿಸಹತ್ತಿದರು. ಆ ಗದ್ದಲದಲ್ಲಿ ಕಣ್ಣೆತ್ತಿ ನೋಡಿದನು. ಕಟ್ಟೆಯ ಮೇಲಿನ ಲಾಕಪ್ಪಿನಲ್ಲಿ ಕುಳಿತವನು ಮುರಲಿಯೇ ಎಂದು ಖಾತ್ರಿಯಾಯಿತು. ಗೆಳೆತನದ ಉದ್ರೇಕವು ಉಕ್ಕಿಬಂದಿತು. ಬೇರೆ ದಾರಿಯಿಂದ ಕಟ್ಟೆಯೇರಿ ಪೋಲೀಸ ಸಬ್ ಇನಸ್ಪೆಕ್ಟರರು ಕುಳಿತಲ್ಲಿ ನಡೆದನು. ವಾಮಣ್ಣನು ಮಾಮಲೇದಾರರ ಅಳಿಯನೆಂದು ಅವರಿಗೆ ನಾಕಷ್ಟು ಪರಿಚಯವಿತ್ತು. ಕುರ್ಚಿಕೊಟ್ಟು ಕೂಡಿಸಿದರು. 'ನೋಡಿರಿ ನಿಮ್ಮ ಕಾಲೇಜ ಹುಡುಗರು ಹೇಗಿರತಾರೆ!' ಎಂದು ಆದ ಸಂಗತಿ

ಯನ್ನೆಲ್ಲ ಅವರು ಹೇಳಿದರು. 'ವಿದ್ಯಾರ್ಥಿಯನ್ನು ನಾನು ಕಾಣಬಹುದೇ?' ಎಂದು ವಾಮಣ್ಣ ಕೇಳಿದನು. 'ಏನೂ ಅಡ್ಡಿಯಿಲ್ಲ, ಈ ಗದ್ದಲವು ಸ್ವಲ್ಪ ಕರಗಲಿ' ಎಂದು ಕೆಲಹೊತ್ತು ತಡೆದರು. ಆ ಮೇಲೆ ಒಬ್ಬ ಪೋಲೀಸನ ಕೂಡ ಲಾಕಪ್ಪಿನ ಹತ್ತಿರ ಹೋದನು. ಬಾಗಿಲು ತೆರೆಯುವಾಗ ಸಲಾಕೆಯೊಳಗಿಂದ ನೋಡುತ್ತಾನೆ. ಮುರಲಿಯ ಮೂರ್ತಿಯು ನೆಲದ ಮೇಲೆ ಕಾಲು ಚಾಚಿ ಗೋಡೆಗೆ ಆತುಕೊಂಡು ಕುಳಿತಿದೆ. ಮೈಯಲ್ಲಿ ಒಂದು ಬಿಳೀ ಸಡಿಲು-ಚಣ್ಣ, ಪೋಲೋ ಶರ್ಟ, ಲಂಡ ಕೋಟು, ತಲೆಯಲ್ಲಿ ಕೆದರಿದ ಕ್ರಾಪು. ಸಿಗರೇಟು ಸೇದುತ್ತ ಗೋಣೆತ್ತಿ ಮೇಲಕ್ಕೆ ಹೊಗೆಬಿಡುತ್ತಿದ್ದವನು. ಅವನನ್ನು ಹೇಗೆ ಕಾಣಬೇಕು, ಏನು ಮಾತಾಡಿಸಬೇಕು, ಎಂಬ ಚಿಂತೆಯಿಂದ ವಾಮಣ್ಣನು ಒಳಗೆ ಕಾಲಿಟ್ಟನು. ಅವನನ್ನು ನೋಡಿದ ಕೂಡಲೆ ಮುರಲಿಯು ಎದ್ದು ನಿಂತು 'ಹಲೋ, ವಾಮಣ್ಣಾ! ಈ ಸ್ವರಾಜ್ಯಾಶ್ರಮಕ್ಕ ನೀನೂ ನನ್ನ ಜೋಡಾ ಗಲಿಕ್ಕೆ ಬಂದಿಯೇನು? ಒಳ್ಳೇದಾತು,' ಎಂದು ನಕ್ಕನು. ಅವನ ನಗೆಚಾಟಿ ಕೆಯ ಸ್ವಭಾವವು ಇಲ್ಲಿಯೂ ಬಿಟ್ಟಿಲ್ಲವೆಂದು ವಾಮಣ್ಣನಿಗೆ ಸೋಜಿಗ ವೆನಿಸಿತು. ಆದರೂ ಅವನೊಡನೆ ಮಾತಾಡಲಿಕ್ಕೆ ಅದು ಒಂದು ಬಗೆಯ ಧೈರ್ಯಕೊಟ್ಟಿತು. 'ಇಲ್ಲ ಮಾರಾಯ. ನಿನ್ನ ಜೋಡಾಗಲಿಕ್ಕೆ ಬಂದಿಲ್ಲ. ಏನಿದು ಅನಾಹುತ ಎಂದು ಕೇಳಲಿಕ್ಕೆ ಬಂದೀನಿ.' ಮುರಲಿಯು ಸಿಗರೇಟು ನೆಲಕ್ಕೊತ್ತುತ್ತ ಹೇಳಿದನು. 'ಏನೂ ವಿಶೇಷ ಇಲ್ಲ. ವಾಮಣ್ಣಾ, ನನ್ನ ಕೆಟ್ಟ ನಸೀಬ ಅಷ್ಟೆ. ಆ ಮಿಸ್ ಜೇನ್ ನನ್ನ ಕೂಡ ಟೆನಿಸ್ ಆಡಲಿಕ್ಕೆ ಬರತಿದ್ದಳು. ಹೀಗೇ ಗುರುತಾತು. ನನ್ನ ಖೋಲಿಗೆ ಚಹಾ ಕುಡೀಲಿಕ್ಕೆ ಬರತಿದ್ದಳು, ನಾ ಅವಳ ಮನೀಗೆ ಹೋಗತಿದ್ದೆ. ಒಮ್ಮೆ ಸಿನೇಮಾಕ್ಕ ಕೂಡಿ ಹೋಗಿದ್ದೆವು. ಇಷ್ಟೇ, ಕಾಲೇಜ-ಫ್ರೆಂಡ್‌ಸಿಪ್ಪು.' ಇದಿಷ್ಟೆ ಅಲ್ಲವೆಂದೂ ಬೇರೆ ಕೆಲವು ಸಂಗತಿ ಗಳಿರುವವೆಂದೂ ವಾಮಣ್ಣನಿಗೆ ಗೊತ್ತಿತ್ತು. ಸಿನೇಮಾಕ್ಕೆ ಹೋದಾಗ ಮುರಲಿಯು ಆ ಹುಡುಗಿಯ ಹೆಗಲ ಮೇಲೆ ಕೈಹಾಕಿದನೆಂದೂ ಒಮ್ಮೆ ತನ್ನ ಕೋಣೆಗೆ ಕರೆತಂದು ಮಾನಭಂಗ ಮಾಡಲೆಳಸಿದನೆಂದೂ ಸುದ್ದಿಯಿತ್ತು. ಆದರೆ ಅದನ್ನು ಅವನೊಡನೆ ಚರ್ಚಿಸುವ ಹೊತ್ತು ಇದಲ್ಲವೆಂದು ಸುಮ್ಮ ಗಾದನು. 'ಅದೇನೆ ಇರಲಿ, ಮುರಲಿ, ನಿನಗೆ ಈ ಪ್ರಸಂಗ ಬಂದದ್ದಕ್ಕೆ ಕೆಟ್ಟ ಅನಿಸುವದಿಲ್ಲವೇ?' 'ಅನಿಸತದೆ. ಆದರೇನು? ಅನುಸೂದುಲ್ಲ. ಎರಡೂ ಖರೆ

ಅನ್ನು,' ಎಂದು ನಕ್ಕುಬಿಟ್ಟನು. 'ಹೋಗಲಿ, ನಿನಗೆ ಈ ಸ್ಥಿತಿಯು ಬರ
ಬಾರದಿತ್ತು, ಮುರಲಿ. ನನಗೆ ಬಹಳ ಕಳವಳ ಆಗತದೆ. ಇದರಿಂದ ಗದ್ದಲ
ವಾಗದಂತೆ ಪಾರಾಗಲಿಕ್ಕೆ ಏನಾದರೂ ಮಾಡಬೇಕಲ್ಲವೇ?' 'ಹೌದು,
ವಾಮಣ್ಣಾ. ನೀ ಮಾಮಲೇದಾರರ ಅಳೇದೇವರು. ಏನಾರೆ ಮಾಡು, ಪುಣ್ಯ
ಕಟ್ಕೋ. ಚಹಾ ಇಲ್ಲ, ಸಿಗರೇಟಿಲ್ಲ, ಇಲ್ಲಿ ಯಾವ ಕೊಳೀಬೇಕು! ಇದು
ನೋಡು ಈ ಡಬ್ಬಿಯೊಳಗೆ ಎರಡೇ ಎರಡು ಸಿಗರೇಟು ಉಳಿದಾವ!'

ವಾಮಣ್ಣನಿಗೆ ನಗೆ ಬಂದಿತು, ನೋವೂ ಆಯಿತು. 'ಒಳ್ಳೇದು
ನೋಡೋಣ' ಎಂದು ಎದ್ದು ಮನೆಯ ಕಡೆಗೆ ಸರಸರನೆ ಹೊರಟನು. ಆದ
ಕತ್ತಲಾಗಿತ್ತು; ಲಗುಬಗೆಯಿಂದ ನಡೆದು ಮನೆ ಮುಟ್ಟಿದನು. ಭೀಮ
ರಾಯರು ಮನೆಯಲ್ಲಿದ್ದರು. ಅವರಿಗೆ ಅಂಜಂಜುತ್ತ ತನ್ನ ಸ್ನೇಹಿತನ ವಿಚಿತ್ರ
ಕಥೆಯನ್ನು ತಿಳಿಸಿದನು. 'ಈ ಮುರಲಿಯೆಂದರೆ ಯಾರು?' ಎಂದವರು ಕೇಳಿ
ದರು. ಸ್ವಲ್ಪ ವಿಸ್ತಾರವಾಗಿಯೇ ವಾಮಣ್ಣನು ಹೇಳಬೇಕಾಯಿತು.
'ಇವನು ಒಬ್ಬ ಹಳ್ಳಿಯೂರ ಕುಲಕರ್ಣಿಯ ಮಗ. ನನ್ನ ಜೋಡಿ ಶಾಲೆ
ಯಲ್ಲಿದ್ದ. ಆಗ ಬಹಳ ಮುಗ್ಧನಾಗಿದ್ದು ಒಬ್ಬರ ಕೂಡ ಹೆಚ್ಚು ಮಾತಾಡು
ತ್ತಿದ್ದಿಲ್ಲ. ನನ್ನ ಕೂಡ ಮ್ಯಾಟ್ರಿಕ್ ಪಾಸಾಗಿ ಮುಂದೆ ಎರಡು ವರ್ಷ
ಮೇಲೆ ಕಾಲೇಜು ಸೇರಿದನು. ಮೊದಲನೆಯ ವರ್ಷ ಹೆಚ್ಚಿನ ಉಸಾಬರಿ
ಇಲ್ಲದೆ ಅಭ್ಯಾಸಮಾಡುತ್ತಿದ್ದು ಸರಿಯಾಗಿ ಪಾಸಾದನು. ಇಂಟರದಲ್ಲಿ
ಚಂಡಾಳಚೌಕಡಿಯೊಂದು ಗಂಟುಬಿದ್ದಿತು, ಫ್ಯಾಶನ್ನಿನ ಪಿಡುಗು ಬಡಿ
ಕೊಂಡಿತು. ತಂದೆ ಈಗ ಸಾಲದಲ್ಲಿ ಮುಳುಗಿ ಏಳುತ್ತಿದ್ದರೂ ಅದರ ಪರಿ
ಇಲ್ಲದೆ ಇಲ್ಲಿ ಸಂಸ್ಥಾನೀ ರೀತಿಯನ್ನು ಇಟ್ಟಿರುವನು. ಇಂಟರು ಮೂರ
ನೆಯ ವರುಷ ಪಾಸಾಗಿ ಈಗ ಜ್ಯೂನಿಯರಕ್ಕೆ ಬಂದಿರುವನು. ಇದು ಪರೀಕ್ಷೆ
ಯಿಲ್ಲದ ವರ್ಷವೆಂದು ಆಟ ನೋಟದಲ್ಲಿಯೂ ಈಗ ಮಾಡಿದಂಥ ಕೆಲ
ದಲ್ಲಿಯೂ ಹೊತ್ತುಹಾಕುತ್ತಿರುವನು.'

'ಇಂಥವನಿಗೆ ಈ ಪಂಜರವೇ ನೆಟ್ಟಗಲ್ಲವೇ?' ಎಂದು ಭೀಮರಾಯರು
ಕೇಳಿದರು.

'ಹಾಗಲ್ಲ, ಇವನ ಬಡ ತಂದೆಯ ದೆಸೆಯಿಂದಾದರೂ ನೀವು ಇವನನ್ನು
ಇದರಿಂದ ಬಿಡಿಸಬೇಕು,' ಎಂದು ವಾಮಣ್ಣನು ಬಹಳ ಕಳಕಳಿಯಿಂದ

ಹೇಳಿದನು. ಭೀಮರಾಯರು ಒಪ್ಪಿಕೊಂಡು ಆಗಿಂದಾಗ ಒಂದು ಟಾಂಗೆ ತರಿಸಿ ಪೋಲೀಸ ಕಚೇರಿಗೆ ವಾಮಣ್ಣನ ಕೂಡ ಹೋದರು. ಸಬ್ ಇನಸ್ಪೆಕ್ಟರರ ಕೂಡ ಕೆಲಹೊತ್ತು ಮಾತಾಡಿ ವಾಮಣ್ಣನಿಂದ ಒಬ್ಬ ಪ್ರತಿಷ್ಠಿತ ವಕೀಲರನ್ನು ಕರೆಯಿಸಿದರು. ಅವರಿಂದ ಜಾಮೀನು ಕೊಡಿಸಿ ಮುರಲಿಯನ್ನು ಬಿಡಿಸಿ ಕಳಿಸಿದರು. ಮರುದಿವಸ ಆ ಕ್ರಿಶ್ಚನ್ ಹುಡುಗಿಯ ತಂದೆಯನ್ನು ಕಂಡು ಮುರಲಿಯಿಂದ ಕ್ಷಮಾಪಣೆ ಕೊಡಿಸಿ ಆ ಪ್ರಕರಣವನ್ನು ಅಲ್ಲಿಗೇ ಥಮ್ಮಾಣಿ ಮಾಡಿದರು. ವಾಮಣ್ಣನು ಮುರಲಿಯ ಜೊತೆಗೆ ಅವನ ಕೋಣೆಗೆ ಹೋಗಿ ಇನ್ನು ಮುಂದೆ ಹೊಸ ಮನುಷ್ಯನಾಗಿ ಅಭ್ಯಾಸವೊಂದರಲ್ಲಿಯೇ ತೊಡಗಿ ಹೇಗೆ ಇರಬೇಕೆಂಬುದನ್ನು ತನಗೆ ತೋರಿದ ನಾಲ್ಕು ಮಾತುಗಳಲ್ಲಿ ಮನ ಮುಟ್ಟಿ ತಿಳಿಹೇಳಿದನು. ಮುರಲಿಯು ಸಿಗರೇಟಿನ ಹೊಗೆಯನ್ನು ಬಿಡುತ್ತ 'ಹೂ' ಎನ್ನುತ್ತಿದ್ದನು. ಕೊನೆಗೆ ಹೊರಡುವಾಗ ವಾಮಣ್ಣನು 'ಮುರಲಿ, ಈ ಸಿಗರೇಟೊಂದು ಬಿಟ್ಟುಬಿಡಬಾರದೇ?' ಎಂದನು. 'ನೋ, ನೋ ವಾಮಣ್ಣ. ಇದನ್ನು ಬಿಟ್ಟರೆ ನಮ್ಮ ಪ್ರಾಣಾನೇ ಬಿಡಬೇಕಾದೀತು,' ಎಂದು ಮುರಲಿಯು ಅವನ ಮೇಲೆ ಕಡೆಯ ಹೊಗೆಸುರುಳಿಯನ್ನು ಹಾಯಿಸಿ ಕಳಿಸಿಕೊಟ್ಟನು. 'ಇವನೇನು ಸುಧಾರಿಸುವ ಲಕ್ಷಣವಿಲ್ಲ' ಎನ್ನುತ್ತ ವಾಮಣ್ಣ ಮನೆ ಕಂಡನು. ಕೆಲವು ದಿನಗಳು ಸರಿದವು. ತನ್ನ ಉದ್ಯೋಗವೇ ದೊಡ್ಡ ಸಮಸ್ಯೆಯಾಗಿದ್ದರಿಂದ ಅದರ ಜಡಪಡಿಕೆಯಲ್ಲಿ ಮುರಲಿಯನ್ನು ಅವನು ಕಾಣಲಾಗಲಿಲ್ಲ. ಆದರೂ ಆ ತನ್ನ ಹಳೆಯ ಗೆಳೆಯನು ಹೊಸದೃಷ್ಟಿಯಿಂದ ತನ್ನ ಹೊಣೆಯನ್ನರಿತು ಇರಹತ್ತಿದರೆ ತನಗೆ ಸ್ಥಿರವಾದ ಕೆಲಸವೊಂದು ಸಿಕ್ಕಷ್ಟು ಸಂತೋಷವಾಗುವುದು ಎಂದುಕೊಂಡಿದ್ದನು. ಒಮ್ಮೆ ಅವನನ್ನು ಮತ್ತೆ ಕಾಣಬೇಕೆಂದು ಕಚೇರಿ ಬಿಟ್ಟ ಮೇಲೆ ಕಾಲೇಜ ಹಾಸ್ಟೆಲ್ಲಿನ ಕಡೆ ಹೋದನು. ಮುರಲಿಯ ಖೋಲಿಗೆ ಹೋಗಿ ನೋಡಲಾಗಿ ಕೀಲಿ ಬಿದ್ದಿತ್ತು. ಎಲ್ಲಿಯಾದರೂ ಹೊರಗೆ ಹೋಗಿರಬಹುದೆಂದು ತಿಳಿದು ಸಹಜವಾಗಿ ಬಾಗಿಲದ ಕಾಜಿನಲ್ಲಿ ಹಣಿಕಿನೋಡಿದನು. ವರ್ತಮಾನಪತ್ರದ ಹರಕು ಚೂರುಗಳು, ಸಿಗರೇಟ ತುಣುಕುಗಳಲ್ಲದೆ ಬೇರೇನೂ ಕಾಣಲಿಲ್ಲ. ಇದೇನೊ ಆಗಿದೆ ಎಂದು ಸಂಶಯ ಬಂದಿತು. ಮಗ್ಗಲಿನ ಕೋಣೆಯಲ್ಲಿ ವಿಚಾರಿಸಿದನು. ಅವರೆಲ್ಲ ಕಥೆಮಾಡಿ ಹೇಳಿದರು. ಸಿಗರೇಟಿನ ಅಂಗಡಿಯವನಿಂದ

ಕ್ಲಬ್ಬಿನ ಊಟದ ಬಿಲ್ಲಿನವರೆಗೆ ಬಹಳ ಬಾಕೀ ಕೊಡುವುದುಳಿಸಿ ಮುನ್ನಾದಿನ ರಾತ್ರಿ ಯಾರಿಗೂ ತಿಳಿಸದೆ ಸಾಮಾನು ಕಟ್ಟಿಕೊಂಡು ಮುರಲಿಯು ಊರಿಗೆ ಓಡಿಹೋಗಿರುವನು. ಈ ಒಂದು ದಿವಸದಲ್ಲಿ ಹಜಾಮ, ಅಗಸ, ಸಿಂಪಿ ಮೊದಲಾಗಿ ೫-೬ ಜನ 'ಸಾವುಕಾರ'ರು ಈ ಸಾಲಗಾರನ ಕೋಣೆಗೆ ಎಡ ತಾಕಿ ಗೋಳುಹುಯ್ದು ಹೋದರು. ರಾಮಣ್ಣನ ಹೊಟ್ಟೆಯಲ್ಲಿ ಕೆಟ್ಟ ಸಂಕಟವಾಯ್ತು. ಅಲ್ಲಿಂದ ಎದ್ದು ಮೂಕನಾಗಿ ಎದೆಗುದಿಯಿಂದ ಮನೆಯತ್ತ ತೆರಳಿದನು.

ನವರಾತ್ರಿಯು ಬಂದಿತು. ರಾಮಣ್ಣನಿಗೆ ಅದು ಹೆಚ್ಚಾಗಿ ಕಾಳ ರಾತ್ರಿಯೇ ಆಯಿತು. ಪ್ರತಿದಿನದ ಮಿಷ್ಟಾನ್ನದ ಊಟದಲ್ಲಿ ಅವನಿಗೆ ಸುಖ ವಿರಲಿಲ್ಲ. ಊಟನೆಷ್ಟು ರುಚಿಯೊ ಅಷ್ಟು ಅವನ ಮಿಡುಕು. ತಾನು ಹಂಗಿನ ಊಟ ಉಣ್ಣುತ್ತ ಕಾಲಹಾಕುತ್ತಿರುವೆನೆಂದು ಒಳಒಳಗೆ ಕೊರಗುತ್ತಿದ್ದನು. ಮೇಲಿನ ಅವನ ನಡೆವಳಿಯನ್ನು ನೋಡಿದರೆ ಯಾರಿಗೂ ಅದರ ಸುಳಿವು ಹತ್ತದು. ಅವನ ತೀರ ಹತ್ತಿರದ ಪದ್ದಕ್ಕನಿಗೂ ಅವನ ಹೃದಯದ ಯಾತನೆ ಬಹಳ ದೂರ. ಇತ್ತೀಚೆ ಅವಳಿಗೆ ತನ್ನ ಅಂತರಂಗದ ಬೇಕು-ಬೇಡಗಳನ್ನು ಹೇಳುವುದೇ ಕಡಿಮೆಯಾಗಿತ್ತು. ಅದು ಒಂದು ವರ್ಷದ ದಾರುಣ ಅನುಭವ ದಿಂದ ಹುಟ್ಟಿದ ಮನೋವೃತ್ತಿಯೆನ್ನಬೇಕು. ಇಂಗ್ಲಿಶ್ ಕಲಿಸಲಿಕ್ಕೆ ಮೊದಲು ಮಾಡಿದ ಆ ಹಿಂದಿನ ರಾತ್ರಿಯು ಈ ಅನುಭವಮಾಲಿಕೆಯಲ್ಲಿಯ ಒಂದು ಬಾಡಿದ ಹೂವು. ಅದಾದ ಮೇಲೆ ಕೆಲಸದ ಅನಾಸ್ಥೆಯು ತಲೆ ತಿನ್ನತೊಡ ಗಿತು. ಆದರೂ ಮನಸ್ಸನ್ನು ಸಮತೂಕಕ್ಕೆ ತಂದು ಇಂಗ್ಲಿಶ್ ಕಲಿಕೆಯ ಪ್ರಯೋಗವನ್ನು ಮುಂದರಿಸಿದನು, ಅದು ಸರಿಯಾಗಿ ನಡೆಯಲಿಲ್ಲ. ಅವ ಳಾಗಿ ಎಂದೂ ಅಲ್ಪರಿದು ಕಲಿಯಬೇಕೆನ್ನುತ್ತಿರಲಿಲ್ಲ. ಅದು ಅವಳಿಗೆ ತೀರ ಸ್ವಾಭಾವಿಕ. ಅವಳ ಸುತ್ತುಮುತ್ತಿನ ವಾತಾವರಣವು ಹುಟ್ಟಿದಂದಿನಿಂದ ಈ ವರೆಗೆ ಅಂಥ ಆಶೆಯನ್ನು ಉಂಟುಮಾಡಿರಲಿಲ್ಲ. ಅವಳ ಎಳೆತ-ಸೆಳೆತಗಳೇ ಬೇರೆ. ಇದನ್ನು ಅರಿತರೂ ಇದು ಹೀಗೇ ಯಾಕೆ ಉಳಿಯಬೇಕು ಎಂಬ ಹುಚ್ಚು ಹವ್ಯಾಸವು ರಾಮಣ್ಣನ ದಾಂಪತ್ಯಜೀವನದ ತೊಡಕಿಗೆ ಮುಖ್ಯ ಕಾರಣವಾಗಿತ್ತು. ಇದರಲ್ಲಿ ನಿಜವಾಗಿ ಇದ್ದ ಕಲಹವು ಹಳೆಯ ಮತ್ತು ಹೊಸ ಸಂಸ್ಕಾರಗಳ ನಡುವಿನದು. ಆದರೆ ಕಲಹದ ಬೀಜವು ಏನೇ ಇರಲಿ,

ಅದು ಕೂಡಬೇಕೆನ್ನುವ ಹೃದಯಗಳನ್ನು ಅಗಲಿಸಿಬಿಡುವುದು. ರಾಮಣ್ಣ ನಂಥ ಭಾವನಾಜೀವಿಗೆ ಆಗುವ ಮೂಕದುಃಖವನ್ನು ಹೇಳಬರದು. ಅದ ರಿಂದ ಎಷ್ಟೋ ಸಲ ಅವನ ತಿಳಿವಳಿಕೆಯು ಕಣ್ಣಿಗೆ ಪರಿ ಬರುತ್ತಿತ್ತು. ತನ್ನ ಹೆಂಡತಿ ತನ್ನನ್ನು ಪ್ರೀತಿಸುವುದೇ ಇಲ್ಲವೆಂದೂ ತಾನವಳಿಗೆ ಬೇಡಾದವ ನೆಂದೂ ಗಟ್ಟಿಗಟ್ಟಿಯಾಗಿ ಭಾವಿಸುತ್ತಿದ್ದನು. ಇಂಥವಳ ಕೂಡ ಬಾಳುವೆಯ ನೂರಾರು ಹಗಲಿರುಳುಗಳನ್ನು ಹೇಗೆ ಕಳೆಯುವುದು ಎಂಬ ಯೋಚನೆ ಬೆನ್ನುಹತ್ತಿ ಬಂದರಂತೂ ಎದೆಯುರಿದುರಿದು ಸವೆಯುತ್ತಿದ್ದನು.

ನವರಾತ್ರಿ ಹೋಯಿತು, ದೀವಳಿಗೆ ಸಮೀಪದಲ್ಲಿ ಬಂದಿತು. ನರಕಚತು ರ್ದಶಿಯ ನಸುಕಿನಲ್ಲಿ ಆರತಿಯ ಉತ್ಸವ ನಡೆಯಿತು. ಮದುವೆಯಾದ ಮೇಲೆ ಇದೇ ಮೊದಲನೆಯ ದೀವಳಿಗೆಯೆಂದು ಭೀಮರಾಯರು ಅಳಿಯತನವನ್ನು ಹೂಡಿ ರಾಮಣ್ಣನ ಅಕ್ಕನನ್ನು ಕರಸಿಕೊಂಡಿದ್ದರು. ಅವನಿಗೆ ಅದು ಯಾವುದೂ ಬೇಕಾಗಿರಲಿಲ್ಲ. ಆದರೆ ಶಿಷ್ಟಾಚಾರವು ಸಾಗಲೇಬೇಕಲ್ಲವೇ ? ಆಯ್ತು, ಆರತಿಗಾಗಿ ಬಂದು ಕುಳಿತನು. ಪದ್ದಕ್ಕ ಹೊಸಸೀರೆಯುಟ್ಟು ಕೊಂಡು ಉತ್ಸಾಹದಿಂದ ತಂಗಿಯ ಕೈಯಿಂದ ಆರತಿಹಿಡಿಸಿಕೊಂಡು ಬಂದಳು. ಭೀಮರಾಯರು ತಮ್ಮ ರೂಪಾಯಿಯನ್ನು ತಾಟಿನಲ್ಲಿ ಹಾಕಿದರು. ರಾಮ ಣ್ಣನ ಇದಿರು ಆರತಿ ಬಂದಿತು. ಅವನು ಅಡಕೆಯ ಬೆಟ್ಟವೊಂದನ್ನೇ ಹಾಕಿದನು. ರೂಪಾಯಿ ಹಾಕೆಂದು ಅವನ ಅಕ್ಕ ಹೇಳಿಕೊಟ್ಟಳು. ಅವನೆಲ್ಲಿಂದ ಹಾಕು ವನು ? ಭೀಮರಾಯರೇ ಅವನ ಕೈಯಲ್ಲಿ ಹಾಕಲು ಕೊಟ್ಟರು. ಅವನು ಬೇಡವೆಂದು ಅಲ್ಲಿಯೇ ಇಟ್ಟು ಎದ್ದುಹೋದನು. ಎಲ್ಲರೂ ಸಣ್ಣಮೋರೆ ಮಾಡಿದರು. ಕೋಣೆಗೆ ಹೋಗಿ ಮುಸುಗು ಹಾಕಿಕೊಂಡು ಚಾದರವನ್ನು ತೊಯ್ಸುತ್ತ ಮಲಗಿದನು. ಅಂದಿನಿಂದ ತನ್ನ ಕಂಗಾಲತನದ ಅರಿವು ಅವನಿಗೆ ಇಮ್ಮಡಿಯಾಗಿ ಮನಸ್ಸನ್ನು ಕೊರೆಯಹತ್ತಿತು.

ದೀವಳಿಗೆಯ ಪಾಡ್ಯ. ಅಂದು ಕಚೇರಿಗೆ ಸೂಟಿ. ಊಟಮಾಡಿಕೊಂಡು ರಾಮಣ್ಣನು ತುಸು ನಿದ್ದೆಹೋದನು. ಆದರೆ ಊಟದ ಭಾರದಿಂದ ಅದು ದೊಡ್ಡ ನಿದ್ರೆಯೆ ಆಯಿತು. ಎಚ್ಚರಾಗುವ ಮೊದಮೊದಲು ಒಂದು ಕನಸು ಬಿದ್ದಿತು. ಒಂದು ತೋಟದ ನೋಟ. ಅಲ್ಲಿ ಚಪ್ಪರದ ಮನೆ. ಅದರೊಳಹೊಕ್ಕು ನೋಡಿದನು. ಯಾರೋ ಒಬ್ಬರು ಕುಳಿತಿದ್ದರು. ಬಹಳ ಮಮತೆಯಿಂದ

ಇವನನ್ನು ಬರಮಾಡಿ ಎಷ್ಟೋ ಮಾತುಗಳನ್ನಾಡಿದರು. ಹೊರಡುವಾಗ 'ನೀವು ಯಾರು?' ಎಂದು ಕೇಳಿದನು. 'ನಾನೇ ನಿಮ್ಮ ಕನ್ನಡಕೋಗಿಲೆ' ಎಂದು ಹೇಳಿದಂತಾಯಿತು. ಕನಸು ತೀರಿತು. ಎಚ್ಚತ್ತು ನೋಡುವಲ್ಲಿ ಅದು ಬರೀ ಕನಸೆಂದು ಗೊತ್ತಾಯಿತು; ಬಹಳ ಮರುಗಿದನು. ಈ ಹೊತ್ತು ಅವರನ್ನು ಕಾಣಲೇಬೇಕೆಂಬ ನಿರ್ಧಾರದಿಂದ ಹಾಸಿಗೆಯಿಂದ ಎದ್ದನು. ಕಾಲೇಜಿನ ಕನ್ನಡ ಸಂಘದ ಕಾರ್ಯದರ್ಶಿಯಾದ ಮೋಹನನು ಅವರು ಇರುವ ಸ್ಥಳವನ್ನು ನೋಡಿರುವನೆಂದು ಗೊತ್ತಿತ್ತು. ಅವನ ಮನೆಗೆ ಹೋಗಿ ಅವನ ಕೂಡ ನಪ್ಪಾಪುರದ ದಾರಿಗುಂಟ ನಡೆದನು. ಅಲ್ಲಿಯ ಇಳಿಜಾರಿನಲ್ಲಿ ಒಂದು ಉದ್ದನ್ನ ಪಟ್ಟಿಯಂತಿದ್ದ ತೋಟ. ದಡ್ಡಿಯ ಬಾಗಿಲು ತೆರೆದು ಕಾಲುದಾರಿಗುಂಟ ಇಬ್ಬರೂ ಹೋದರು. ತೋಟದ ಆಚೆಯ ತುದಿಗೆ ಎತ್ತರದ ನೆಲವಿತ್ತು. ಅದರ ಮೇಲೆ ಒಂದು ಕಡೆ ಬಾವಿ, ಇನ್ನೊಂದು ಕಡೆ ಹುಲ್ಲುಚಪ್ಪರದ ಗುಡಿಸಲೊಂದು. ಸೂರ್ಯನು ಕೆಳಕೆಳಗೆ ಇಳಿಯುವ ಹೊತ್ತು. ಗುಡಿಸಲಲ್ಲಿ ಹೊಕ್ಕು ಕೇಳಿದರು. ಕವಿಗಳು ಇರಲಿಲ್ಲ; ಮನೆಯವರು ಅವರಿಗೆ ಕೂಡಲು ಹೇಳಿ ಕರೆಕಳುಹಿದರು. ತೋಟದ ಯಾವುದೊ ಒಂದು ಬದಿಯಲ್ಲಿ ಕಾಲುವೆಯ ನೀರನ್ನು ಮಡಿಗಳಿಗೆ ಅವರು ಬಿಡುತ್ತಲಿದ್ದರು. ಆ ನಿಮಿಷದಲ್ಲಿ ಗುಡಿಸಲಕ್ಕೆ ಬಂದರು. ವಾಮಣ್ಣನೂ ಮೋಹನನೂ ಒಳಗೆ ಕೂಡದೆ ಹೊರಗಿನ ಅಂದವನ್ನು ನೋಡುತ್ತಲಿದ್ದರು. ಅವರನ್ನು ಕಂಡೊಡನೆ ವಾಮಣ್ಣನು ಚಕ್ಕಾದನು. ತೆಳ್ಳನಾದರೂ ಸೊಬಗಿನ ಮೈ, ಆರೋಗ್ಯದಿಂದ ಉಕ್ಕುವ ಮೋಗೆ, ಹೊಳೆಯುವ ಕಣ್ಣು. ಒಂದು ಖಾದೀ ಧೋತರವನ್ನುಟ್ಟಿರುವರು, ಒಂದು ಖಾದಿಯದೇ ಲಂಡಂಗಿಯನ್ನು ತೊಟ್ಟಿರುವರು. ಅವರು ಸಮೀಪಕ್ಕೆ ಬರಲು 'ಮೂರ್ತಿಗಳೇ, ಕೋಗಿಲೆಯ ಗುರುತು ಮಾಡಿಕೊಳ್ಳಲಿಕ್ಕೆ ಒಂದು ಹಕ್ಕಿ ಬಂದಿದೆ.' ಎಂದು ಮೋಹನನು ವಾಮಣ್ಣನನ್ನು ತೋರಿಸಿ ಸರಸವಾಡಿದನು. ಕನ್ನಡಕೋಗಿಲೆಗಳ ರೂಢಿಯ ಹೆಸರು ಆನಂದಮೂರ್ತಿಗಳೆಂದು. ಅವರು ಮುಗುಳ್ನಗುತ್ತ 'ಹೀಗೇನು? ಕೋಗಿಲೆಯ ಹಾಡನ್ನಿಷ್ಟೆ ಕೇಳಬೇಕು. ಅದು ಯಾರಿಗೂ ಕಾಣಬೇಕಾಗಿಲ್ಲ' ಎಂದು ಮರುಮಾತನಾಡುವ ಹಾಸ್ಯದಲ್ಲಿ ತಮ್ಮ ಬಾಳಿನ ಗುಟ್ಟನ್ನೇ ಅರುಹಿದರು. ಅವರಿಬ್ಬರನ್ನೂ ಮೂರ್ತಿಗಳು ಒಳಗೆ ಕರೆದೊಯ್ದು ಹುಲ್ಲಿನ ಚಾಪೆಯ ಮೇಲೆ ಕೂಡಿಸಿ ತಾವೂ ಅಲ್ಲೇ ಕೂತರು.

ಪರಸ್ಪರ ಪರಿಚಯವಾಯಿತು. ಮೋಹನ ಹೇಳಿದನು: 'ನಿಮ್ಮ 'ಕಾರಣಪುರುಷ' ಎಂಬ ಕವಿತೆ ಕೇಳಿ ಹುಚ್ಚಾದವರಲ್ಲಿ ಇವನೊಬ್ಬ. ನಮ್ಮ ಸಂಘದ ಹೋದ ವರುಷದ ಉತ್ಸವದಲ್ಲಿ ಅದನ್ನು ಕೇಳಿ ಅಂದಿನಿಂದ ನಿಮ್ಮನ್ನು ಕಾಣಬೇಕೆಂದು ಬಹಳ ಆತುರನಾದವನು. ನಿಮ್ಮ 'ತಳಿರ ತೋರಣ' ದಲ್ಲಿಯ ಹಾಡುಗಳನ್ನು ಅದೆಷ್ಟೋ ಸಾರೆ ಇವನು ಅಂದುಕೊಂಡಿರಬೇಕು. .!' ಹೀಗೆ ಮಾತುಕತೆ ಆರಂಭವಾಯಿತು. ಮೂರ್ತಿಗಳು ವಾಮಣ್ಣನ ಇತಿಹಾಸವನ್ನೆಲ್ಲ ಅವ ಬಾಯಿಂದ ಕೇಳಿಕೊಂಡರು. ಇಂಥ ತರುಣರಿಗೆ ನೆಲಕ್ಕೆ ಕಾಲೂರಿ ನಿಲ್ಲಲ ನೆಲೆಯಿಲ್ಲವಲ್ಲ ಎಂದು ಮರುಗಿದರು. ಆದರೂ ನಡುನಡುವೆ ತಮ್ಮ ಜೀವನ ಅನುಭವಗಳನ್ನು ಉದಾಹರಿಸುತ್ತ ಎಂಥ ನಿರಾಶೆಯಲ್ಲಿಯೂ ನಿಜವಾದ ಆ ಆನಂದಗಳನ್ನು ತಾವು ಹೇಗೆ ಹುಡುಕುತ್ತಿರುವರೆಂಬುದನ್ನು ತಿಳಿಹೇಳಿದರ ಅವರ ಹಾಡು ಕೇಳಿದಾಗಿನ ಹುಮ್ಮಸು ಈಗ ಅವರ ಮಾತು ಕೇಳಿ ಮುಮ್ಮ ಯಾಯಿತು. ಒಂದು ಅರ್ಧ ತಾಸಿನಲ್ಲಿ ಅವರು ತನಗೊಬ್ಬ ಅಪ್ಪ ಹಿರಿ ರೆಂದು ವಾಮಣ್ಣನು ಭಾವಿಸಿಬಿಟ್ಟನು. ತಮ್ಮ ತೋಟದ ಹಣ್ಣುಗಳನ ಬೇರೆ ತಿನಸುಗಳನ್ನೂ ಅವರು ತಂದು ಕೊಟ್ಟರು. ಸಲಿಗೆಯ ಮಿತ್ರರ ಮುಕ್ತರೀತಿಯ ಮಾತು ನಡೆದವು. ಯಾವ ಸಂಕೋಚವೂ ಉಳಿಯಲಿ ತಿಂದು ಆದ ಮೇಲೆ 'ನಿಮ್ಮ 'ಕಾರಣಪುರುಷ' ಹಾಡನ್ನು ನಿಮ್ಮ ಬಾಯಿ ಕೇಳಬೇಕೆಂದು ಬಹಳ ಅಪೇಕ್ಷೆಯಿದೆ,' ಎಂದು ವಾಮಣ್ಣ ಕೇಳಿಕೊಂಡ 'ಒಳ್ಳೇದು' ಎಂದು ಮೂರ್ತಿಗಳು ತಮ್ಮ 'ತಳಿರತೋರಣ'ದ ಯೊಂದನ್ನು ತಂದು 'ಕಾರಣಪುರುಷ'ದ ಕೆಳಗಿನ ಸಾಲುಗಳನ್ನು ತ ಸವಿಯಾದ ದನಿಯಿಂದ ಹಾಡಿದರು.

**ಕಾರಣಪುರುಷ**

ಬರುತಲಿಹನು ಬರುತಲಿಹನು
ನಿನ್ನಯ ಕಾರಣಪುರುಷನು.

ಕಂಗೆಡದಿರು ಕನ್ನಡವೇ!
ಇನಿಜೇನಿನ ಹೊಂಗೊಡವೇ!
ನಿನ್ನ ಸವಿಯ ಸವಿ ಬೀರುವ
ಅರಸುದುಂಬಿ ಬಳಿಸಾರುವ.

ಹೂವ ಮೊಗಕೆ ಮುತ್ತನಿರಿಸಿ
ಹಕ್ಕಿಬಾಯ್ಗೆ ಹಾಡು ಕಲಿಸಿ
ಬೆಳಗು ಚಿಮ್ಮಿ ಕಳುಹಿ ಮುಂತೆ
ರವಿ ತಾನೆಯೆ ಬರುವಸಂತೆ. ೨

ಕವಿವ ಮಬ್ಬು ಕಳೆದು ಸೂಸಿ
ಬೆಳುದಿಂಗಳ ಮಾಯೆ ಬೀಸಿ
ಚಿಕ್ಕೆ ಮಸುಳೆ ತೇಲಿ ಮೇಗೆ
ಚಂದ್ರ ಚೆಲುವ ಬರುವ ಹಾಗೆ ೩

ನೆಲದ ಒಡಲ ಸುಡಿಸಿ ಕೀಳ
ಕಾಡು ಕುದಿದ ಕಂಬನಿಗಳ
ಮೇಲೆ ಮೂಡಿದವನ ಇಸಿದು
ಅಡಿವಜ್ಜೆಯು ಮಡಗಿರುವುದು. ೪

ನಿನ್ನ ಸಾವು ನೋವದೆನಿತು
ಅಳವು ಮೀರುತಿಹುದು ಅನಿತು
ಬೇಗ ಬೇಗ ಸಾಗಿ ಬರುವ
ನಿನ್ನ ಜನಕೆ ಸುಗ್ಗಿ ತರುವ ೫

ವಾಮಣ್ಣನ ಮೈಯಲ್ಲಿ ಹೊಸ ಶಕ್ತಿ ಸಂಚಾರವಾದಂತೆ ಆಯ್ತು. ಅದರ ಮುಂದೆ ಅವನ ಸುಖದುಃಖಗಳು ಕ್ಷುಲ್ಲಕವಾಗಿ ತೋರಿದವು. ಅದರ ಬೆಲೆ-ನೆಲೆಯನ್ನು ಅವನು ತಿಳಿಯನು. ಆದರೆ ಉತ್ಸಾಹಪೂರ್ಣವಾದ ಅದರ ಆಶಾವಾದದಿಂದ ತನ್ನ ಆಯುಷ್ಯದಲ್ಲಿ ಹೊಸದೊಂದು ರಸನಿಮಿಷ ವನ್ನು ಅನುಭವಿಸಿದಂತೆ ಆಯಿತೆಂದು ಅವನು ತನ್ನೊಳಗೆ ಹಿಗ್ಗಿದನು. ಬಾಯಿಂದ ಹೆಚ್ಚಾಗಿ ಆಡಿ ತೋರಿಸಲಿಲ್ಲ. 'ಇದನ್ನು ನೂರು ಸಾರೆ ಅನಕೊಳ್ಳಬೇಕು ಅನಿಸುತ್ತದೆ,' ಎಂದು ಒಂದು ವಾಕ್ಯದಲ್ಲಿ ಮಾತ್ರ ಮೂರ್ತಿಗಳಿಗೆ ತನ್ನ ಮೆಚ್ಚಿಗೆ ತಿಳಿಸಿದನು. 'ನೀನೊಬ್ಬನೇ ಹೀಗನ್ನುವವ ವಾಮಣ್ಣ. ಒಂದು ಸಾರೆ ಸಹ—ಯಾರದೇ ಇರಲಿ—ಇಂಥ ಹಾಡನ್ನು ಕೇಳುವವರು ಈ ನಮ್ಮ ನಾಡಿನಲ್ಲಿ ದುರ್ಲಭರಾಗಿರುವರು,' ಎಂದು

ಮೂರ್ತಿಗಳು ಆಡಿದರು. ಮಾತು ಮುಂದರಿಸುತ್ತ ಮುಂದೆ ಹೇಳಿದರು. 'ಆದರೂ ನನ್ನ ಆಶೆ ಹಿಮಾಲಯದಷ್ಟು ಹಿರಿದಾಗಿದೆ. ಈ ನಾಡು ಹಿಂದೆ ಉಜ್ವಲವಾಗಿ ಬೆಳೆದಿದೆ, ಮುಂದೂ ಬೆಳೆಯುತ್ತದೆ. ಇದನ್ನು ಒಮ್ಮೆ ಬೆಳಗಿಸಿದ ಮಹಸೀಯರು ಇದನ್ನು ಮರೆತಿರಲಾರರು. ಅವರು ಮತ್ತೆ ಅವತರಿಸುವರು. ಈಗಿನ ನಿರಾಶೆಯಿಂದ ನಾವು ಹತಾಶರಾಗಕೂಡದು.'

ನಡುವೇ ವಾಮಣ್ಣನು ಪ್ರಶ್ನೆ ಕೇಳಿದನು : 'ಮೂರ್ತಿಗಳೇ, ಕಾರಣಪುರುಷನೆಂದರೆ ಸರಿಯಾಗಿ ಯಾರು ?'

'ನಾನೂ ಅದನ್ನೇ ನಿಮ್ಮಿಂದ ತಿಳಿದುಕೊಳ್ಳಬೇಕಾಗಿದೆ' ಎಂದು ಮೋಹನನೂ ದನಿಗೂಡಿಸಿದನು.

'ಕಾರಣಪುರುಷ ಎಂದರೆ ಸ್ವಲ್ಪದರಲ್ಲಿ ಯುಗಪುರುಷ ಅಥವಾ ಅವತಾರಪುರುಷ ಎನ್ನಬಹುದು. ಆಯಾ ಯುಗದ ಹಾಗೂ ಆಯಾ ನಾಡಿನ ಸಮಸ್ಯೆಗಳು ಸಾಮಾನ್ಯರ ಕೈಮೀರಿದಾಗ ಅಸಾಮಾನ್ಯಪುರುಷನೊಬ್ಬನು ಹುಟ್ಟುವನು. ತನ್ನ ಅಸಾಮಾನ್ಯಶಕ್ತಿಯಿಂದಲೂ ಕಾರ್ಯದಿಂದಲೂ ಜನಜೀವನದ ತೇರನ್ನು ಮುಂದೆಳೆಯುವನು. ಅವನು ಪುರಾಣಕಾಲದ ದಿವ್ಯ ಅವತಾರಿಯೇ ಇರಬೇಕೆಂದು ಅಲ್ಲ. ಆದರೆ ಅವನಲ್ಲಿ ಮಾನವಸಾಧ್ಯವಾದ ಅದ್ಭುತಶಕ್ತಿಯು ವ್ಯಕ್ತಿರೂಪವನ್ನು ತಾಳುವುದೆಂಬವದರಲ್ಲಿ ಸಂಶಯವು ಇಲ್ಲ. ಅವನು ತನ್ನ ಮಾಟದ ಕೋಲು ಬೀಸಿದರೆ ನಾಡಿಗೆ ನಾಡೇ ಏಳುವುದು. ಹೊಸ ಬಗೆಯಲ್ಲಿ ವಿಚಾರ ಮಾಡುವುದು, ಹೊಸ ಕೆಲಸವನ್ನು ಮಾಡುವುದು. ಎಂಥ ತೊಡಕಿನ ಪ್ರಶ್ನೆಗಳೂ ಬಿಟ್ಟುಹೋಗುವವು. ನಮ್ಮ ಭಾರತದ ಬೇರೆ ಪ್ರಾಂತಗಳಿಗೆ ಅಂಥ ಕೆಲವರು ದೊರೆತಿದ್ದಾರೆ. ನಮ್ಮ ಕನ್ನಡನಾಡಿಗೆ ಅಂಥ ಒಬ್ಬ ಮಹಾವ್ಯಕ್ತಿಯು ಬೇಕಾಗಿದ್ದಾನೆ. ಅವನು ಬರುತ್ತಿದ್ದಾನೆ ಎಂದೇ ನನ್ನ ಶ್ರದ್ಧೆಯಿದೆ.'

'ಆದರೆ ಅವನೊಬ್ಬನಿಂದಲೇ ಎಲ್ಲ ಕೆಲಸವಾದೀತೇ ?' ವಾಮಣ್ಣ ಕೇಳಿದನು.

'ಹಾಗಲ್ಲ. ಜನರನ್ನು ಅದ್ಭುತವಾಗಿ ಬಡಿದೆಬ್ಬಿಸಿ ಹೊಸಕಣ್ಣು ತೆರೆಯಿಸುವ ಮುಖ್ಯ ಕೆಲಸವು ಅವನಿಂದ ಆಗುವುದು. ಹೀಗೆಂದು ಕಾರಣಪುರುಷ ಎಂದರೆ ಬರೀ ಒಬ್ಬ ವ್ಯಕ್ತಿಯೆಂದು ತಿಳಿಯದಿರು ವಾಮಣ್ಣಾ. ಕಾರಣ

ಪುರುಷ ಎಂದರೆ ಶಕ್ತಿ, ವ್ಯಕ್ತಿ ಎರಡೂ. ಕನ್ನಡದಲ್ಲಿ ಅವನ ಶಕ್ತಿ ಇದೀಗ ಮೈದೋರಿದೆ. ಆ ಶಕ್ತಿಸೂರ್ಯನ ಅರುಣೋದಯವಾಗಿದೆಯೆನ್ನು, ಆ ಸೂರ್ಯನೇ ಇನ್ನೂ ಬರಬೇಕು. ಎಷ್ಟೋ ವ್ಯಕ್ತಿಗಳಲ್ಲಿ ಅವನ ಕಿರಣಾಂಶವು ಕುಣಿಯುತ್ತಿದೆ, ಅವರಿಂದ ಬೆಳಗು ಹರಡುತ್ತಿದೆ. ಅವನು ಬಂದಾಗಲೇ ಮಹಾಬೆಳಗು ಅಲ್ಲವೇ ? ಆ ಶಕ್ತಿಯು ಅವನಲ್ಲಿಯೇ ಹೆಚ್ಚು ಕೇಂದ್ರೀಕೃತ ವಾಗಲು ಅವನು ಕಾರಣಪುರುಷನಾಗುವನು.'

ಕೆಲವು ನಿಮಿಷಗಳವರೆಗೆ ಏನೋ ನೆನೆಯುತ್ತ ಆಳವಾಗಿ ಜಗೆಯುವಂತೆ ನೆಲ ನೋಡುತ್ತ ಮೂರ್ತಿಗಳು ಕುಳಿತರು. ಕೊನೆಗೆ ಉಸುರ್ಗರೆದು 'ಅದಾವ ದುರ್ವಿಧಿಯೋ ಕಾಣೆ, ಮಹಾ ವ್ಯಕ್ತಿಗಳಾಗುವರೆಂದು ತೋರಿದ ಜೀವಿಗಳು ಬಿದ್ದ ಚಿಕ್ಕೆಯಂತೆ ಅಡಗಿಹೋಗುತ್ತಿವೆ, ' ಎಂದು ಇಳಿದನಿಯಲ್ಲಿ ಹೇಳಿದರು.

'ಅಂಥದರು ಯಾರು ಯಾರು ?'

'ಎಲ್ಲರನ್ನೂ ಕುರಿತು ಹೇಳಲಾರೆ. ಒಂದು ವ್ಯಕ್ತಿಯ ಕರುಣ ಕಥೆಯು ಮಾತ್ರ ಯಾವಾಗಲೂ ನನ್ನ ಕಣ್ಣೆದಿರು ಕಟ್ಟಿರುತ್ತದೆ; ಅವರನ್ನು ನೆನಸಿ ದಾಗೆಲ್ಲ ನನ್ನ ಎದೆ ಹೊಯ್ದಾಡಹತ್ತುತ್ತದೆ.'

'ಯಾರು ಅವರು ಹೇಳಬಹುದೇ ?'

'ಅವರು ' ಆದರ್ಶವಿದ್ಯಾಲಯ 'ದ ವಿಜ್ಞಾನದ ಪ್ರೊಫೆಸರಾಗಿ ಎರಡು ವರ್ಷ ಇದ್ದ ಶ್ರೀಯುತ ವೈಶಂಪಾಯನರು.'

ವಾಮಣ್ಣನು ಅದನ್ನು ಕೇಳಿ ಚಕಿತನಾದನು. 'ನನಗೆ ಅವರು ಕೇವಲ ಗುರುಗಳು. ಅವರ ಮನೆಯಲ್ಲಿಯೇ ಇದ್ದು ನಾನು ಕಾಲೇಜಿನ ಮೊದಲಿನ ಎರಡು ವರ್ಷಗಳನ್ನು ಕಳೆದೆ.'

'ಹೀಗೋ ? ಓ ! ವಾಮಣ್ಣಾ. ಅವರೆಂಥ ಉಜ್ವಲ ಬುದ್ಧಿವಂತರು ! ಎಷ್ಟು ಉದಾತ್ತ ಹೃದಯದವರು ! ಅಂಥವರು ಈ ನಾಡು ಬಿಟ್ಟು ಹೋಗಿ ಮುಂಬೈ ಸೇರಬೇಕಾಯಿತು. ಕನ್ನಡ ತಾಯಿಯ ಒಳ್ಳೆಯ ಮಕ್ಕಳು ಪರ-ದೇಶಿಗಳಾಗುತ್ತಿರುವರು. !'

'ಅದು ನಿಜ, ಮೂರ್ತಿಗಳೇ. ಅವರ ಮುಂಬೈ ವಿಳಾಸವು ಗೊತ್ತಿರುವದೇ ?'

'ಅಯ್ಯೋ ! ವಿಳಾಸವು ಗೊತ್ತಾಗದಂತೆ ಇರುವುದೇ ಈಗಿನ ಅವರ

ಜೀವನ. ಈಗ ಅವರು ತಮ್ಮ ಮೊದಲಿನ ಹೆಸರು ಸಹ ಬದಲಿಸಿಕೊಂಡಿರುವ ರೆಂದು ಮೊನ್ನೆ ಕೇಳಿದೆ. ಅದೆಷ್ಟು ನಿಜವೊ ಕಾಣೆ.'

ಮುಂದೆ ಬೇರೆ ಮಾತುಗಳು ತಲೆಯೆತ್ತಿದವು. ತಾವು ಆ ತೋಟ ಹಾಗೂ ಒಂದೆರಡು ಗದ್ದೆಗಳಲ್ಲಿ ಆಳುಗಳೊಡನೆ ಆಳಾಗಿ ದುಡಿದು ಹೊಟ್ಟೆ ಹೊರೆ ಯುತ್ತಿರುವ ಸಾಹಸವನ್ನೂ ಬಣ್ಣಿಸಿದರು. ಗುಡಿಸಲಿನಿಂದ ತೋಟದೊಳಗೆ ಕರಕೊಂಡು ಹೋಗಿ ತಮ್ಮ ಸಾಹಸ-ಫಲಗಳನ್ನು ತೋರಿಸಿದರು. ತಾವು 'ಬಿಎಜಿ' ಡಿಗ್ರಿಯನ್ನು ಪಡೆದು ೧-೨ವರುಷ ಕೆಲಸಮಾಡಿ ಆದರಿಂದ ಬೇಸತ್ತು ಸ್ವಾವಲಂಬಿಯಾದ ಬೇಸಾಯಕ್ಕೆ ನಿಂತ ವಿಷಯವನ್ನೂ ತಿಳಿಸಿದರು. 'ನನ್ನ ಕಾವ್ಯಕ್ಕೆ ಚೈತನ್ಯವನ್ನು ಕೊಡುವವಳು ಈ ಸೃಷ್ಟಿತಾಯಿ. ಅವಳ ಲೀಲೆ ಯನ್ನು ಕಂಡವರಿಗೆ ಈ ಜಗತ್ತಿನಲ್ಲಿ ದುಃಖವೇ ಇಲ್ಲ' ಎಂದು ಆತ್ಮ ವಿಶ್ವಾಸ ದಿಂದ ಸಾರಿದರು. ಎಲ್ಲವೂ ವಾಮಣ್ಣನ ಮೈಯಲ್ಲಿ ಹೊಸ ರಕುತದ ತಳಿ ಹಾಕುವಂತೆ ಆಗುತ್ತಿತ್ತು. 'ಮೂರ್ತಿಗಳೇ, ನನ್ನ ಈಗಿನ ಕೆಲಸ ಕುಂಟುತ್ತ ಕೂರುತ್ತ ಸಾಗಿದೆ. ನಾನೇನು ಮಾಡಬೇಕು?' ತನ್ನ ತೀರ ಅಂತರಂಗದ ಪ್ರಶ್ನೆಯನ್ನು ಕೇವಲ ಆಪ್ತರಿಗೆ ಕೇಳುವಂತೆ ವಾಮಣ್ಣನು ಕೇಳಿದನು. 'ಹೇಳಲಿಯಾ, ವಾಮಣ್ಣ? ನಾವು ಸಾಹಸ ಮಾಡಬೇಕು. ಬಿದ್ದ ಕೊಳಚೆ ಯಲ್ಲಿ ಬೀಳಬಾರದು. ಹತ್ತೂ ದಿಕ್ಕಿಗೆ ಹರಿದಾಡಿ ಆತ್ಮಶಕ್ತಿಯನ್ನು ಗಳಿಸಬೇಕು.'

'ಆದರೆ ಪರಿಸ್ಥಿತಿಯು ತೀರ ಅಡ್ಡಬಂದರೆ ಹೇಗೆ ಸಾಹಸವನ್ನು ಮಾಡುವುದು?'

'ಅಂದರೆ? ಪರಿಸ್ಥಿತಿಯು ಅನುಕೂಲವಿರುವಾಗ ಮಾಡುವುದು ಸಾಹಸವೇ?'

ಈ ಯುಕ್ತಿ ವೈಚಿತ್ರ್ಯವು ವಾಮಣ್ಣನ ಬುದ್ಧಿಯನ್ನು ಸೆರೆಹಿಡಿಯಿತು. ಸಂಜೆಯಾಗುತ್ತ ಬಂದಿದ್ದರೂ ಮೂರ್ತಿಗಳೊಡನೆ ಹಾಗೇ ಮಾತಾಡುತ್ತ ಕೂಡಬೇಕೆಂದು ಹಾತೊರೆದನು. ಆದರೆ ತನ್ನ ಸ್ನೇಹಿತನಿಗೆ ತೊಂದರೆ ಯಾದೀತೆಂದು ಮೂರ್ತಿಗಳನ್ನು ಬೀಳ್ಕೊಂಡು ಕೂಡಲೆ ಹೊರಟನು. ಹೊರಡುವಾಗ ಬಹಳ ಕಕ್ಕುಲತೆಯಿಂದ 'ಮೂರ್ತಿಗಳೇ, ನನಗೆ ತಂದೆತಾಯಿ ಗಳಿಲ್ಲ. ನೀವೇ ನನಗೆ ಹಿರಿಯರು. ಆಗಾಗ ನನಗೆ ಸ್ಫೂರ್ತಿಕೊಟ್ಟು ಆದರ್ಶದ

ದಾರಿಯಲ್ಲಿ ಹೋಗುವಂತೆ ಪ್ರೇರಿಸಬೇಕು. ನಿಮ್ಮ ಇಂದಿನ ಮಾತು ನನ್ನ ಹೊಸ ಮನುಷ್ಯನನ್ನು ಮಾಡಿದವು.'

'ಅದೇನೊ, ರಾಮಣ್ಣಾ. ನಾವಿಬ್ಬರೂ ಇನ್ನು ಗೆಳೆಯರೆಂದು ತಿಳಿ. ಆಯಿತೇ?'

ರಾಮಣ್ಣನು ಮಿತ್ರನೊಡನೆ ಕುಣಿಕುಣಿಯುವ ಹೃದಯದಿಂದ ಊರು ಕಂಡನು. ಮೂರ್ತಿಗಳ ಸಹವಾಸದಲ್ಲಿ ಮರೆಯಾದ ತನ್ನ ಬಾಳುವೆಯ ಜಂಜಾಟವು ಮತ್ತೆ ಕಣ್ಣುಕಟ್ಟಿದಂತಾಯ್ತು.

ರಾಮಣ್ಣನ ಉಮೇದವಾರಿಯ ಯಾತ್ರೆ ಸಫಲವಾಗುವುದೋ ಎನ್ನುವಂತೆ ದೈವವು ಸ್ವಲ್ಪ ಕಣ್ಣು ತೆರೆಯಿತು. ಭೀಮರಾಯರೂ ತಮ್ಮ ಕೈ ಮೀರಿ ಪ್ರಯತ್ನ ಮಾಡಿದರು. ಅದರಿಂದ ಒಂದೆರಡು ತಿಂಗಳ ಬದಲೀ ಕೆಲಸವು ಯಾರೋ ಒಬ್ಬರು ರಜೆಯ ಮೇಲೆ ಹೋದದ್ದರಿಂದ ರಾಮಣ್ಣನಿಗೆ ಸಿಕ್ಕಿತು. ತಿಂಗಳಿಗೆ ೪೦ ರೂಪಾಯಿ ಅದಕ್ಕೆ ಸಂಬಳವಿತ್ತು. ಮನೆಯಲ್ಲಿ ಪದ್ಮಕ್ಕ ಸುಗುಣಾಬಾಯಿ ಮೊದಲಾಗಿ ಎಲ್ಲರೂ ಹಿಗ್ಗಿದರು. ರಾಮಣ್ಣನೂ ಎಷ್ಟೋ ಸಮಾಧಾನ ಹೊಂದಿದನು. ಮೊದಲೇ ತನ್ನ ಬಯಕೆಗಳ ಬಲೆಯನ್ನು ಬೀಸುತ್ತಿದ್ದ ಪದ್ಮಕ್ಕನು ಈಗ ಇನ್ನಿಷ್ಟು ಹುರುಪಾದಳು. ಅದು ಬೇಕು ಇದು ಬೇಕು ಎಂದು ಪ್ರತಿನಿತ್ಯದಲ್ಲಿ ಚಿಟಗುಮುಳ್ಳಾಡಿಸುತ್ತಿದ್ದಳು. ಪಗಾರವಂತೂ ಕೈಗೆ ಬರಲಿ ಎಂದು ರಾಮಣ್ಣನು ಆ ವಿಷಯವನ್ನೇ ಮುಂದೂಡುತ್ತಿದ್ದನು. ಒಂದು ತಿಂಗಳಾಯ್ತು. ಪಗಾರವು ಕೈಯಲ್ಲಿ ಬಿದ್ದೊಡನೆ ಅದೇನೊ ಒಂದು ಸಹಜಸಂತೋಷವು ರಾಮಣ್ಣನ ಮೈಹೊಕ್ಕಿತು. ಅದರ ಜೋಡಿ ಒಂದು ವಿಚಿತ್ರ ನೋವೂ ಆಯಿತು. 'ಇಷ್ಟೊಂದು ಹಣದ ಮೋರೆ ನೋಡುವುದಕ್ಕೆ ಇಡೀ ಆಯುಷ್ಯವೇ ಹೋಮವಾಗುತ್ತಿರುವುದಲ್ಲ!' ಎಂಬ ಭಾವನೆಯಿಂದ ಇರಬಹುದು. ಆ ಪಗಾರವನ್ನೆಲ್ಲ ಒಯ್ದು ಹೆಂಡತಿಗೆ ಕೊಟ್ಟುಬಿಟ್ಟನು. 'ಪದ್ಮ, ತೆಗೆದುಕೊ, ನಿನಗೆ ಬೇಕಾದ್ದು ಮಾಡು' ಎಂದನು. ಅವಳ ಹಿಗ್ಗಿಗೆ ಪಾರವೇ ಇಲ್ಲ. ತನಗೆ ಆಪ್ತೇಷ್ಟರು ಕೊಟ್ಟ ಬೇರೆ ಹತ್ತಿಪ್ಪತ್ತು ರೂಪಾಯಿಗಳನ್ನು ಅವಳು ಕೂಡುಹಾಕಿದ್ದಳು. ಎಲ್ಲವನ್ನೂ ಬೆರಸಿ ಒಂದು ಬೋರಮಾಳಿಯನ್ನು ಮಾಡಿಸಿಕೊಂಡು, ಯಜಮಾನರು ಮಾಡಿಸಿದ್ದೆಂದು ಕಾಣುವದೆಂಬ ಗೆಳತಿಯರ ಚೇಷ್ಟೆಗೆ ಹಿಗ್ಗುತ್ತ ಓಡಾಡಿದಳು. ಈ ಕೆಲವು ದಿನಗಳಲ್ಲಿ

ಅವಳ ಇಂಗ್ಲಿಶ್ ಕಲಿಯುವ ಆವೇಶವೂ ಮಿಕ್ಕಿತು. ಆಗಲಿ ಎಂದು ವಾಮಣ್ಣನು ಕೆಲವು ಹೆಚ್ಚು ಪಾಠಗಳನ್ನು ಹೇಳಿಕೊಟ್ಟನು. ಅವೆಷ್ಟು ನೆನಪುಳಿದವೊ ಬೋರಮ್ಮಳಿಗೇ ಗೊತ್ತು!

ಮತ್ತೊಂದು ತಿಂಗಳಾಯಿತು. ಅದು ಪಗಾರ ಕೊಟ್ಟಿತು, ಕೆಲಸವನ್ನು ಕಸಿದುಕೊಂಡಿತು. ಹೊಸ ಕಲೆಕ್ಟರ ಸಾಹೇಬರು ವರ್ಗವಾಗಿ ಬಂದರು. ಈ ಪ್ರಾಂತಕ್ಕೇ ಅವರು ಹೊಸಬರು. ವಾಮಣ್ಣನು ಮುಂದೆ ತನ್ನ ಸ್ಥಿತಿಯೇನೆಂದು ಕೇಳಲಿಕ್ಕೆ ಅವರ ಹತ್ತಿರ ಹೋಗಿ ಬಿನ್ನವಿಸಿದನು. 'ಸ್ಪಷ್ಟವಾಗಿ ಹೇಳಬೇಕೆಂದರೆ ನಿಮಗೆ ಯಾವ ಆಶೆಯೂ ಇಲ್ಲ.' ಎಂದು ಕಟ್ಟುನಿಟ್ಟಾದ ಉತ್ತರ ಬಂದಿತು. ಹೋದ ತಿಂಗಳ ಕೊನೆಯ ಹಿಗ್ಗು ಈ ತಿಂಗಳ ಕೊನೆಗೆ ಕರಗಿ ಹೋಯ್ತು. ಮುಂದೆ ಒಂದೆರಡು ತಿಂಗಳುಗಳಲ್ಲಿ ವಯಸ್ಸಿನ ಪರಮಾವಧಿಯು ಹತ್ತಿರ ಬಂದು ಹಲವು ಉಮೇದವಾರರೊಡನೆ ತನ್ನನ್ನು ಕಚೇರಿಯಿಂದ ಹೊರದೂಡುವುದೆಂಬ ನಿಜವಾದ ಭಯವು ಅವನನ್ನು ಮುಸುಕಿತು. ವಾಮಣ್ಣನು ಮಿಡುಕಿದನಾದರೂ ಅಷ್ಟು ಗೋಳಿಡಲಿಲ್ಲ. ಆನಂದಮೂರ್ತಿಗಳು ಆಗಾಗ ಭೆಟ್ಟಿ ಆಗುತ್ತಿದ್ದುದರಿಂದ ಅವರ ಸಂಪರ್ಕದಿಂದ ಸತ್ಯವನ್ನು ಇದಿರಿಸುವ ಸಾಹಸಗುಣವು ಅವನಲ್ಲಿ ಸುಸುಳುತ್ತಿತ್ತು. ಮನೆಗೆ ಹೋಗಿ ತನ್ನಷ್ಟಕ್ಕೆ ಕುಳಿತು ಎಲ್ಲಾ ದೃಷ್ಟಿಯಿಂದ ತನ್ನ ಭವಿಷ್ಯದ ಬಗ್ಗೆ ಯೋಚಿಸಿದನು. 'ಈ ಊರು-ಉದ್ಯಾನದ ಬಂಧನವು ಸಾಕು. ಸಾಹಸದಲ್ಲಿಯೇ ಸೌಖ್ಯವಿದೆ.' ಎಂದು ಹೊಸ ನಿರ್ಣಯಕ್ಕೆ ಒಂದು ಭೀಮರಾಯರ ಹತ್ತಿರ ಹೋಗಿ ಎಲ್ಲಾ ಮನಸ್ಸು ಬಿಚ್ಚಿ ಹೇಳಿದನು. ಅವರು ತಮ್ಮ ರೀತಿಯಲ್ಲಿ ಅವನ ನಿರ್ಣಯವನ್ನು ಕಟುವಾಗಿ ವಿರೋಧಿಸಿ ಎಲ್ಲಿಯೂ ಹೋಗಕೂಡದೆಂದೂ ಬೇರೆ ಕಡೆ ತಾವು ಪ್ರಯತ್ನ ಮಾಡಬಹುದೆಂದೂ ಒತ್ತಿ ಹೇಳಿದರು. ವಾಮಣ್ಣನಿಗೆ ಅದು ಒಗ್ಗಲಿಲ್ಲ. ಅಳಿಯ-ಮಾವಂದಿರ ನಡುವೆ ತೆರೆಯೊಂದು ಸರಿಯತೊಡಗಿತು.

ಅಂದೇ ರಾತ್ರಿ. ಪಗಾರವು ದೊರೆತಿರುವುದೆಂದು ಕೇಳಿ ಪದ್ದಕ್ಕ ಉಬ್ಬಿನಿಂದ ಆಟ್ಟಕ್ಕೆ ಬಂದಳು. ಆದರೆ ಈ ಸಾರೆಯು ಹಣದ ಬಗ್ಗೆ ಅವಳು ಅಪಹಾರದ ಯೋಜನೆ ಮಾಡಿರಲಿಲ್ಲ ಆದರಲ್ಲಿ ಒಬ್ಬ ಗೃಹಿಣಿಯ ಧೂರ್ತತನವಿತ್ತು.

ಈ ಸಾರೆ ಪಗಾರೆಲಾ ಬ್ಯಾಂಕಿನಾಗ ಇಟ್ಟುಬಿಡಿರಿ. ಕೈಯಾಗ ಇದ್ದರ

ಖರ್ಚಾಗಿ ಹೋಗತಾವ. ಅನುವು-ಆಪತ್ತು ಬಂದಾಗ ತಗೋಳಿಕ್ಕೆ ಬರೋದಿಲ್ಲೇನು ?' ಎಂದಳು. ವಾಮಣ್ಣನಿಗೆ ಅವಳ ವ್ಯವಹಾರ ವಿವೇಕದ ಬಗ್ಗೆ ಆಶ್ಚರ್ಯವೇ ಆಯಿತು. ಅದಕ್ಕೆ ನಗೆಮಾತಿನಿಂದ ಹೇಳಿದನು; ' ಛೇ, ಅದೆಲ್ಲಾ ಬ್ಯಾಡ. ನಾನೇ ಒಂದು ಬ್ಯಾಂಕ ತೆಗೀಬೇಕಂತೀನಿ, ಈ ನಾಲ್ವತ್ತು ರೂಪಾಯಿ ಮ್ಯಾಲೆ!' ' ಎಲ್ಲಿ ?' ಎಂದು ಸಹಜವಾಗಿ ಪದ್ದಕ್ಕ ಕೇಳಿದಳು. ' ಮುಂಬೈಯೊಳಗೆ.' ' ಏನಾರ ಹುಚ್ಚುಚ್ಚಾರ ! ' ಎಂದು ಅವಳು ನಕ್ಕು ಬಿಟ್ಟಳು. ಆದರೆ ಅದರಲ್ಲಿ ಅವನ ಸತ್ಯವಾದ ನಿರ್ಣಯದ ಅಂಶವು ಇತ್ತೆಂದು ಅವನ ಮುಂದಿನ ಮಾತುಗಳಿಂದ ತಿಳಿಯಿತು. ಅವಳ ಉಬ್ಬೆಲ್ಲ ನರ್ರೆಂದು ಇಳಿದು ಹೋಯಿತು. ಹೌಹಾರಿ ಕುಳಿತಳು. 'ಬೇಕಾದ್ದು ಆಗಲಿ, ನೀವೆಲ್ಲಿಗೂ ಹೋಗಬ್ಯಾಡಿರಿ. ನನ್ನ ಕೊರಳಾಣೆ' ಎಂದು ಆಡುತ್ತಾಡುತ್ತಾ ದುಃಖದ ಕೊನೆಯ ಮೆಟ್ಟಲಿಳಿದು ಅಳುವಿನ ಕೊಳದಲ್ಲೇ ಹೊಕ್ಕಳು. ಅವಳ ಅಳುವಿನಿಂದ ದಿಟ್ಟವಾಗಿ ವಾಮಣ್ಣನ ಎದೆ ಬಿರಿಯಿತು, ಧೈರ್ಯವು ಸಡಿಲಿತು. ' ಅಯ್ಯೋ ಸಾಹಸಕ್ಕೆಂದು ಮೀಳ್ಯವೆತ್ತಿದ ವೀರ!' ಎಂದು ತನ್ನ ತಾನ ಹಳಿದುಕೊಂಡನು. ರಾತ್ರಿ ಇಬ್ಬರಿಗೂ ನಿದ್ದೆಯಿಲ್ಲ. ಅವಳಿಗೆ ಸಮಾಧಾನ ಮಾಡಬೇಕೆಂದು ಹಲವು ತರದಿಂದ ಆಡಿದನು. ' ನಾ ಅಲ್ಲೆ ಹೋಗಿ ಕೆಲಸ ಮಾಡಲಿಕ್ಕೆ ಹತ್ತಿದೆನೆಂದರೆ ನಿನ್ನ ಕರಕೊಂಡು ಹೋಗತೀನಿ, ಪದ್ಮ. ಆಗ ಇಬ್ಬರೂ ಆರಾಮಾಗಿ ಇರೋಣ ' ಎಂದು ಗೊಂಬೆಯಾಟದಲ್ಲಿ ಎಳಮಕ್ಕಳು ಗೊಂಬೆಗೆ ಹೇಳುವಂತೆ ರಮಿಸಿ ಹೇಳಿದನು. ಆದರೆ ಅವಳು ಗೊಂಬೆಯಲ್ಲವೆಂದು ತೋರಿಸಿಕೊಟ್ಟಳು. ಅವಳ ಶೋಕದಲ್ಲಿಯೂ ಪ್ರೇಮದ ನಿರ್ಭರತೆಯನ್ನು ಅರಿತು ವಾಮಣ್ಣನು ತನ್ನೊಳಗೆ ನಲಿದನು, ಅವಳ ವಿಷಯವಾದ ತನ್ನ ಅಭಿಪ್ರಾಯವನ್ನು ತುಸು ತಿದ್ದಿಕೊಂಡನು. ಕೊನೆಗೆ ನಿದ್ದೆಯು ಕೇಳಲಾರದೆ ಬಂದು ತನ್ನ ರೆಕ್ಕೆ ಬೀಸಿ ಆ ಎರಡೂ ಜೀವಗಳನ್ನು ತೆಕ್ಕೆಯಲ್ಲಿ ಸೇರಿಸಿಕೊಂಡಿತು. ಮರುದಿನ ವಾಮಣ್ಣನು ಹೊಯ್ದಾಡುತ್ತ ಕೊನೆಗೆ ನಿಶ್ಚಯಮಾಡಿಯೇ ಬಿಟ್ಟನು. ಅಲ್ಲಿ ಏನೂ ಸಾಧ್ಯವಾಗದಿದ್ದರೆ ನಾಲ್ಕೈದು ದಿನವಿದ್ದು ಊರು ನೋಡಿ ತಿರುಗುವೆನೆಂದು ಎಲ್ಲರಿಗೆ ಆಶ್ವಾಸನ ಕೊಟ್ಟನು. ಹೊರಡುವ ಸಿದ್ಧತೆಯಾಯ್ತು, ಹಾದಿಯ ಉಪಾಹಾರವನ್ನು ಮಾಡಿಕೊಟ್ಟರು. ಪದ್ದಕ್ಕನು ತೀರ ಸಣ್ಣಮೋರೆ ಮಾಡಿದಳು. ಸುಗುಣಾಬಾಯಿಯು ಸಮಾಧಾನಮಾಡಲಿಕ್ಕೆ ಇಂದಿದ್ದರೆ ಅವಳು

ಆಳುತ್ತ ಕೂಡುವವಳೇ. ವಾಮಣ್ಣನು ತನ್ನ ಅಜ್ಜನು ಕಳಸಿದ ಸ್ವಲ್ಪ ಹಣವನ್ನೂ ಹೋದ ತಿಂಗಳ ಸಂಬಳವನ್ನೂ ಕೂಡಿ ತಕ್ಕೊಂಡು ಮಧ್ಯಾಹ್ನದ ಮೇಲುಗಾಡಿಗೆ ಮುಂಬೈಗೆ ಹೊರಟುಬಿಟ್ಟನು.

ಕೊನೆಯುವರೆಗೆ ಭೀಮರಾಯರು ಬೇಡೆಂದರು, ಅತ್ತೆಯವರು ಅಡ್ಡ ಗಟ್ಟಿದರು. ಆದರೆ ಅವನ ದಾರುಣ-ನಿಶ್ಚಯವು ಕದಲಲಿಲ್ಲ.

---

## ಪ್ರಕರಣ ೪.

ಕಾಲವೆಂಬ ವೈದ್ಯನು ಎಂಥ ದುಃಖದ ಬರೆಯನ್ನೂ ಮಾಯಿಸುವನ್ನು ವಾಮಣ್ಣನು ಮುಂಬೈಗೆ ಹೋದದ್ದಂತೂ ಸಣ್ಣ ಚುರುಕಿದ್ದಂತೆ; ಒಂದೆರಡು ದಿನದಲ್ಲಿ ತಾನಾಗಿ ಅದು ಮಾದುಹೋಯಿತು. ಆಗೀಗ ಅವನನ್ನು ನೆನೆದ. ಉಸಿರೆಳೆಯುವವಳೆಂದರೆ ಪದ್ಮಕ್ಕ ಒಬ್ಬಳು. ಅವನು ಬೇಗನೆ ತಿರುಗುವನೆಂಬ ಆಶೆಯು ಅವಳಿಗೆ ಅದೆಷ್ಟೋ ಸಮಾಧಾನವನ್ನು ಕೇರುತ್ತಿತ್ತು. ಭೀಮ ರಾಯರು ಹೊರಗೆ ತೋರಲಿಕ್ಕೆ ಅಷ್ಟೇನು ಮನಸ್ಸಿಗೆ ಹಚ್ಚಿಕೊಂಡಿರಲಿಲ್ಲ. ಮನೆಯಲ್ಲಿಯೂ ಕಚೇರಿಯಲ್ಲಿಯೂ ದಿನಂಪ್ರತಿ ನಡೆಯುವ ನೂರಾರು ಘಟನೆಗಳಲ್ಲಿ ಅದೊಂದು ಎಂಬಂತೆ ಅವರು ತಮ್ಮ ಕೆಲಸದಲ್ಲಿ ತೊಡಗಿದರು. ಬಹಳಷ್ಟು ಭಾವನೆಗೆ ಬಲೆ-ಬೀಳುವ ಜಾತಿಯೇ ಅಲ್ಲ ಅವರದು. ಆದರೆ ವಾಮಣ್ಣನು ಹೋದ ತೊಟ್ಟು ಅವರ ವಿಚಾರಚಕ್ರವು ಮಾತ್ರ ತರತರದ ವೇಗದಿಂದ ತಿರುಗತೊಡಗಿತು. “ ಹುಡುಗನು ಹುಶಾರನೆಂದೂ ಒಳ್ಳೆಯವ ನೆಂದೂ ಕೆಲಸಕ್ಕೆ ಹಚ್ಚಿ ಆಳಿಯನನ್ನು ಮಾಡಿಕೊಂಡದ್ದಾಯಿತು. ಕೆಲಸ ಹೋಯಿತು, ಆಳಿಯ ಉಳಿದನು; ತಮ್ಮ ಮಾತು ಮೀರಿ ಹುಚ್ಚುಚ್ಚು ಸಾಹಸಮಾಡುವದನ್ನು ಬೇರೆ ನಡೆಸಿರುವನು. ಮೊದಲು ನಮ್ರನೆಂದು ತೋರಿದವನು ಈಗ ಸ್ವತಂತ್ರನಾಗುತ್ತಿರುವನು. ಇದಕ್ಕೆ ಯಾರ ಬೋಧವು ಕಾರಣವಾಗಿರಬೇಕು?” ತಮ್ಮ ಕಾಗದಪತ್ರಗಳ ಫಾಯಿಲನ್ನು ತಿರುವಿ ಹಾಕುತ್ತಲೇ ಹಣೆಗೆ ಚಾಳೀಸೇರಿಸಿ ಭೀಮರಾಯರು ತುಸುಹೊತ್ತು ವಿಚಾ ರದಲ್ಲಿ ಬೀಳುತ್ತಿದ್ದರು. ಮರುಕ್ಷಣದಲ್ಲಿ ಅವರ ಹೆಚ್ಚಿನ ಅನುಭವವು ಸಹಾ ಯಕ್ಕೆ ಬಂದು ಚಿಂತೆಯನ್ನು ಕರಗಿಸುತ್ತಿತ್ತು. ‘ಹೋಗಲಿ, ಎಷ್ಟು ದಿನ

ಹೋಗತಾನೆ ಹುಡುಗ? ಮುಂಬೈಯಂಥ ದೆವ್ವನಂಥ ಊರಲ್ಲಿ ಇವನನ್ನು ಯಾರು ಕೇಳತಾರೆ? ಕೈಯೊಳಗಿನ ರೊಕ್ಕ ತೀರಿದ ಗಳಿಗ್ಗೆ ಸಣ್ಣಮೋರೆ ಮಾಡಿಕೊಂಡು ತಾನೇ ತಿರುಗಿ ಬರತಾನೆ.' ಈ ಯೋಚನೆಯು ಬಂದು ವಿಚಿತ್ರ ಸಂತುಷ್ಟಿಯನ್ನು ಕೊಡುತ್ತಿರಲು ಹಲ್ಲಿಯು ಚಿಪ್‌ಚಿಪ್ಪೆಂದಿತು, ಭೀಮರಾಯರು 'ಕೃಷ್ಣ ಕೃಷ್ಣ' ಎಂದರು.

ಕೆಲವು ದಿನಗಳಾದವು. ಒಮ್ಮೆ ಮುಂಜಾನೆ ಬಹಳ ಮಹತ್ವದ ಕೆಲವು ಕಾಗದಪತ್ರಗಳ ಢೀಗನ್ನು ನೋಡುತ್ತ ಭೀಮರಾಯರು ಕುಳಿತಿದ್ದರು. ನಾಲ್ಕೈದು ತಿಂಗಳಿಂದ ಅವರ ಮುಂದೆ ನಡೆದಿರುವ ಫೌಜದಾರೀ ಖಟ್ಲೆಯ ವಿಷಯವದು. ಸುಮ್ಮನೆ ಹನುಮನ ಬಾಲದಂತೆ ಅದು ಬೆಳೆಯುತ್ತ ಹೊರ ಟಿತ್ತು. ತಾನೂ ಸುಡಲೊಲ್ಲದು ಲಂಕೆಯನ್ನೂ ಸುಡಲಾರದು. ಹಳ್ಳಿಹಳ್ಳಿಗೆ ತೀರ ಸಾಮಾನ್ಯವಾದ ಸಂಗತಿ. ಕಲಿಕೇರಿ ಎಂಬ ಒಂದು ಪ್ರಚಂಡ ಹಳ್ಳಿ. ಕಲಿಗಳ ಎಂದರೆ ಯಾವಾಗಲೂ ಕಡಿದಾಡುವ ಕಲಿಗಳ ಕೇರಿಯೆಂದೇ ಆ ಹಳ್ಳಿಗೆ ಕಲಿಕೇರಿ ಎಂಬ ಹೆಸರು ಬಂದಿರಬೇಕು. ಹಿಂದೆ ಊರ ಹೊರಗಿನ ವೈರಿಗಳನ್ನು ಹೊಡೆದಟ್ಟಿ ರಾಜ್ಯಕಟ್ಟಿದ ಹಳ್ಳಿಯ ಬಂಟರು ಈಗ ಊರ ಒಳಗಿನ ವೈರಿಗಳೊಡನೆ ಗುದ್ದಾಡಿ ಮನೆ–ಮಾರು ಹಾಳಾಗುತ್ತಿರುವರು. ಹಳ್ಳಿಯ ರೂಢಿಯಂತೆ ಕಲಿಕೇರಿಯಲ್ಲಿ ಎರಡು ದೊಡ್ಡ ಬಣಗಳಿದ್ದವು. ಒಬ್ಬರೊಬ್ಬರಿಗೆ ಆಗುತ್ತಿರಲಿಲ್ಲ. ಎರಡು ಬೇರೆ ಪ್ರಾಣಿವರ್ಗಗಳೊ ಎನ್ನು ವಷ್ಟು ಇಬ್ಬರ ನಡುವಿನ 'ಆದಾವತಿ' ಯಿತ್ತು. ಒಬ್ಬರು ಕೆಳ ಓಣಿಯವರು, ಇನ್ನೊಬ್ಬರು ಮೇಲೋಣಿಯವರು. ಆದರೆ ದ್ವೇಷದ ವಿಷಯದಲ್ಲಿ ಇಬ್ಬರೂ ಅಷ್ಟೇ, ಕೆಳಗೆ ಮೇಲೆ ಎಂಬ ಹೆಚ್ಚು ಕಡಿಮೆಯಿಲ್ಲ. ಒಮ್ಮೆ ಮಳೆ ಬೆಳೆ ನೆಟ್ಟಗಾಗಿ ಕಲಿಕೇರಿಯ ಸುತ್ತು ಹೊಲಹೊಲದಲ್ಲಿ ರಾಶಿ ನಡೆಯಿತು. ಹಂತಿಯ ಹಾಡುಗಳಲ್ಲಿ ಮುಚ್ಚು ಹರುಷವು ಸೂಸಿತು. ಅದರೊಡನೆ ಒಬ್ಬ ರೊಬ್ಬರನ್ನು ಆಡಿಕೊಳ್ಳುವ ವಿನೋದವೂ ಬೆಳೆಯಿತು. ಕೆಳ ಓಣಿಯವ ರೊಬ್ಬರ ಹೊಲದಲ್ಲಿ ಹಾಡಿದ ಒಂದು ಹಾಡು ಮೇಲೋಣಿಯ ಬಗ್ಗೆ ಬೀಭತ್ಸಮಯವಾಗಿತ್ತು. ಅದನ್ನು ಮೇಲೋಣಿಯವರಿಗೆ ಬೇಕಾದವ ನೊಬ್ಬನು ತನ್ನ ಹೊಲದಿಂದ ಕೇಳಿ ಅವರಲ್ಲಿ ವಿಷದ ಗಾಳಿಯನ್ನು ತುಂಬಿ ದನು. ಆಯಿತು, ಮೇಲೋಣಿಯ ಶೂರರು ತುಟಿ ಕಚ್ಚಿದರು, ಮೀಸೆಗೆ ಹುರಿ

ಹಾಕಿದರು. ರಾಶಿಯೆಲ್ಲ ಮುಗಿದುಹೋಯಿತು. ಅಲ್ಲಲ್ಲಿ ಚೆಂದನ್ನ ಬಣಿವೆ ಗಳು ನೆಲದ ತುರುಬುಹೂವಿನಂತೆ ಎದ್ದುನಿಂತವು. ಒಂದು ರಾತ್ರಿ ಮೇಲೋಣಿ ಯವರು ಕಳವಿನಿಂದ ಕೆಳ ಓಣಿಯ ಹೊಲವೊಂದಕ್ಕೆ ನಸುಳಿ ದೊಡ್ಡ ಬಣಿವೆಗೆ ಕೊಳ್ಳಿಹಚ್ಚಿ ಸುಟ್ಟು ಕೇಕೆಹಾಕುತ್ತ ತಿರುಗಿದರು. ಮರುಬೆಳಗಿನಲ್ಲಿ ಸುದ್ದಿ ಹರಡಿತು; ಕೆಳ ಓಣಿಯವರು ಸೇಡುತೀರಿಸಲಿಕ್ಕೆ ಉರಿದೆದ್ದರು. ಆದರೆ ಅವರ ಹಿರಿಯನಾದ ಹಿರೇಗೌಡನು ಕೋರ್ಟುಕಚೇರಿಗಳಲ್ಲಿ ಓಡಾಡಿ ಮನಗಂಡವನಾದ್ದರಿಂದ ಹುಂಬಗುತ್ತಿಗೆಗೆ ತಡೆಹಾಕಿ ಮಾಮಲೇದಾರ ಕಡೆಗೆ ರಿಪೋರ್ಟು ಮಾಡಿದನು. ಪಂಚನಾಮೆ ಆಗಿ ಖಟ್ಲೆ ಆರಂಭ ವಾಯಿತು. ಎರಡೂ ಬಣದವರು ಹೇವಕ್ಕೆ ಬಿದ್ದು ಹಣ ಸೂರೆಮಾಡಲು ಸಿದ್ಧರಾದರು. ವಕೀಲರ ಭಾಗ್ಯಲಕ್ಷ್ಮಿಯು ಮನೆಬಾಗಿಲಿಗೆ ಬಂದಳು. ಸಾಕ್ಷಿಪುರಾವೆ ಮುಂತಾದ್ದು ಮುಗಿದು ಇಂದು ಉಭಯಪಕ್ಷದ ವಕೀಲರ ಯುಕ್ತಿವಾದವಿತ್ತು. ಬಣಿವೆ ಸುಟ್ಟುಹಾಕಿದ ಮೇಲೋಣಿಯವರನ್ನು ಕಠಿಣಶಿಕ್ಷೆಗೆ ಗುರಿಮಾಡಿ ಅವರ ಕೈಯಲ್ಲಿ ಬೇಡಿ ಹಾಕಿದ್ದನ್ನು ಕಣ್ತುಂಬ ನೋಡಬೇಕೆಂದು ಹಿರೇಗೌಡನ ಮತ್ತು ಅವನ ಸಂಗಡದವರ ಹಿರಿಗನ ಸಾಗಿತ್ತು. ಈ ಪ್ರಕರಣದ ಮಟ್ಟಿಗೆ ಶುದ್ಧನ್ಯಾಯವು ಇವರಿಗೆ ಅನು ಕೂಲವೇ ಇತ್ತು. ಆದರೆ ಶುದ್ಧದ್ವೇಷವು ಎಲ್ಲಿ ಕೇಳುತ್ತದೆ? ಇಲ್ಲದ್ದನ್ನು ಹುಟ್ಟಿಸಿ ಕೆಳ ಓಣಿಯವರ ಮೇಲೆ ಹಿಂಸೆಯ ಆರೋಪ ಹೊರಿಸಿ ಮೇಲೋಣಿ ಯವರು ತಾವೂ ನ್ಯಾಯದ ಒಂದು ಮುಖವನ್ನು ತಮ್ಮ ಕಡೆಗೆ ಮಾಡಿ ಕೊಂಡಿದ್ದರು. ಮೇಲಿಂದ ನೋಡುವವರಿಗೆ ಈ ಖಟ್ಲೆಯಲ್ಲಿ ತಪ್ಪು ಯಾರದು ಎಂಬುದನ್ನು ತಿಳಿಯುವುದೇ ಅಸಾಧ್ಯಕೋಟಿಯ ಮಾತು. ಇಂಥ ಜಗ ತ್ತನ್ನು ಹುಟ್ಟಿಸಿದ ಬ್ರಹ್ಮನ ತಪ್ಪೆಂದು ಬೇಕಾದರೆ ಅಂದುಕೊಳ್ಳಬಹುದು! ಮಾಮಲೇದಾರ ಭೀಮರಾಯರು ಇಂಥ ಗೊಂದಲದಲ್ಲಿ ಬೀಳಬೇಕಾಗಿರ ಲಿಲ್ಲ. ಅವರಿಗೆ ಈ ಪ್ರಕರಣದ ತಳಬುಡವೆಲ್ಲ ಗೊತ್ತಿತ್ತು. ಜೀವನದ ಅವರ ಅನುಭವವೇ ಅಷ್ಟು ದೊಡ್ಡದು. ಮಧ್ಯಾಹ್ನದಲ್ಲಿ ಎರಡೂ ಕಡೆಯ ಯುಕ್ತಿ ವಾದವು ಕಚೇರಿಯಲ್ಲಿ ನಡೆಯಿತು. ಎಲ್ಲವೂ ಮುಗಿದ ಮೇಲೆ ಮನೆಗೆ ಹೋಗಿ ಭೀಮರಾಯರು ಮೇಲೋಣಿಯವರ ಪಕ್ಷದ ಪ್ರಮುಖ ವಕೀಲ ರನ್ನು ತತ್‌ಕ್ಷಣ ಕರೆಸಿದರು. ಅವರ ಕೂಡ ಖಾಸಗಿ ಮಾತುಕತೆ. ಆದವು.

ಅದೇನು ರಹಸ್ಯವೊ ತಿಳಿಯಲಿಲ್ಲ. ಮರುದಿನ ಮೇಲ್ಗೋಣಿಯವರ ಮುಖ್ಯಸ್ಥ ನಾದ ಮೂಲಿಂಗಸೆಟ್ಟಿಯು ಮಾಮಲೇದಾರರ ಕಡೆಗೆ ದೀನನಾಗಿ ಬಂದು ಕೈ ಕಟ್ಟಿಕೊಂಡು ನಿಂತನು. ಭೀಮರಾಯರು ಹೇಳಿದರು. 'ಸೆಟ್ಟಿ, ನಿನಗ ನಿಮ್ಮ ಮುಂದಿಗೆ, ಊರಾಗ ಸುಕದಿಂದ ಇರೋದು ಬೇಕಾಗೇದೋ ಇಲ್ಲೊ? ಏನು ನಾಕೊಪ್ಪತ್ತು ಜೇಲಿನ ಊಟದ ಸವಿ ನೋಡಬೇಕಂತೀರೊ?' ಸೆಟ್ಟಿಯು ಗಾಬರಿಯಿಂದ ನಡುಗಿದನು. 'ಅದ್ಯಾಕ ರಾವಸಾಹೇಬ, ನಾವೇನು ಅಂತಾ ಅಪರಾದ ಮಾಡಿದ್ದು? ನಾವ್ಯಾಕ ಜೇಲ ಕಾಣಬೇಕು?' ಎಂದು ಮಾತಿನಲ್ಲಿ ಅಬ್ಬರ, ದನಿಯಲ್ಲಿ ಗಾಬರಿ ಎರಡನ್ನೂ ತೋರಿಸಿದನು. ಭೀಮರಾಯರಿಗೆ ಈ ಜನದ ಸ್ವಭಾವವು ಚೆನ್ನಾಗಿ ಗೊತ್ತು. ಕಾಯದೆಯ ಗುಡುಗಿನಿಂದ ಸೆಟ್ಟಿ ಯನ್ನು ಅವರು ತುಡುಕಿದರು. 'ಹಿಂಗೇನು? ಮಾಡೋದು ಮಾಡಿ ಮತ್ತ ಅಭ್ರಾಟ ಬ್ಯಾರೆ! ಕಾಯದೆಪ್ರಕಾರ ನಿಮ್ಮೆಲ್ಲಾರನ್ನೂ ಜೇಲಿಗೆ ಅಟ್ಟತೀನಿ. ಕೊಳೀರಿ ಅಲ್ಲೇ ಒಂದೆರಡು ವರ್ಷ.' ಸೆಟ್ಟಿಯು ಈಗ ಜಗ್ಗಿಂದು ಇಳಿದು ಹೋದನು. ಅವನ ಕೈಕಾಲು ತಣ್ಣಗಾದವು. ತಾವು ಯಾರೂ ಸೆರೆಮನೆ ಕಾಣಬಾರದೆಂಬುದೇ ಅವನ ಬಣದ ಮುಖ್ಯ ಹಟವಿತ್ತು. ಈಗ ಅದು ಸುಳ್ಳಾ ಗುವ ಹೊತ್ತು ಬಂದಿತೆಂದು ಅವನು ಒಪ್ಪಾಡಿದನು. ಆದರೂ ಅವನ ವಕೀಲರು ಹೇಳಿಕಳಿಸಿದ ಕೊನೆಯ ಉಪಾಯವು ಅವನ ಕೈಬಿಡಲಿಲ್ಲ. ಮೊದಲಿಗಿಂತ ಹೆಚ್ಚು ನಮ್ರನಾಗಿ ಭೀಮರಾಯರ ಕಾಲಿಗೆ ಬಿದ್ದು ಅವನು ಬೇಡಿಕೊಂಡನು. 'ಮೆಬರ್ಬಾನ್ ರಾವಸಾಯೇಬ, ನಮ್ಮನ್ನ ಉಳಿಸಿಗೋರಿ' ಸಿಕ್ಸಾ ಕೊಡಬ್ಯಾಡರಿ. ದಂಡಾ ಬೇಕಾದರ ಕೊಟ್ಟೇವು, ಜೇಲಿನಾಗ ಹಾಕಬ್ಯಾಡರಿ. ಕೊನೆಯ ಮಾತು ಆಡುತ್ತ ತನ್ನ ರುಮಾಲಿನ ಪದರಿನೊಳಗಿಂದ ಕಾಗದ ಪುಡಿಕೆ ತೆಗೆದು ಮಾಮಲೇದಾರರ ಹತ್ತಿರವಿದ್ದ ಟೇಬಲ್ಲಿನ ಮೇಲಿಟ್ಟನು. ಭೀಮರಾಯರು ಸೆಟ್ಟನೋಟದಿಂದ ನೋಡಲು, ಹತ್ತು ರೂಪಾಯಿಯ ಹತ್ತು-ಹನ್ನೆರಡು ನೋಟುಗಳು ಕಂಡವು. ಅವರ ಧ್ವನಿಯು ಬದಲಾಯಿತು. ಕೈಯಿಂದ ಅವನನ್ನು ಎಬ್ಬಿಸಿ, 'ಅಲ್ಲಿ ಕೂಡು' ಎಂದರು. ಮುಂದೆ ಬಹಳ ಮಾತು ಬೆಳಸದೆ 'ನಿನ್ನಂತೆ ಕೆಲಸವಾಗತವೆ ಹೋಗು' ಎಂದು ಮುಖ್ಯ ಆಶ್ವಾಸನವನ್ನು ಕೊಟ್ಟು ಕಳಿಸಿದರು. ಮರುಪಕ್ಷದವರಿಗೆ ಇದರ ಸುಳಿವೇ ಹತ್ತಲಿಲ್ಲ. ತಮ್ಮ ಪಕ್ಷವು ಗಟ್ಟಿಯೆಂದೂ ತಾವು ಗೆಲ್ಲುವುದೇ ನಿಶ್ಚಿತ

ವೆಂದೂ ಭಾವಿಸಿ ಅವರು ಇಲ್ಲದ ಗೋಜಿಗೆ ಹೋಗಲಿಲ್ಲ. ಕಚೇರಿಯಲ್ಲಿ ನೋಡಿದಾಗ ಮಾಮಲೇದಾರರು ಅವರಿಗೆ ತುಂಬಾ ಅನುಕೂಲರಾಗಿಯೇ ಕಂಡುಬಂದಿದ್ದರು. ಕೆಲವು ದಿನದ ಮೇಲೆ ತೀರ್ಪು ಹೇಳಲಾಯಿತು. ಮೇಲೋಣಿಯ ಮಾಲಿಂಗಸೆಟ್ಟಿ ಮೊದಲಾದ ಐದಾರು ಆರೋಪಿಗಳಿಗೆ ಪ್ರತ್ಯೇಕವಾಗಿ ೬ ತಿಂಗಳ ಶಿಕ್ಷೆ ಇಲ್ಲವೆ ೫೦೦ ರೂಪಾಯಿ ದಂಡ ಎಂದೂ ಕೆಳಓಣಿಯ ಹಿರೇಗೌಡ ಮೊದಲಾದ ಆರೋಪಿಗಳು ದೋಷಮುಕ್ತರು ಎಂದೂ ಅದರ ತಾತ್ಪರ್ಯವಿತ್ತು. ದಂಡ ಬಿದ್ದರೂ ಶಿಕ್ಷೆ ತಪ್ಪಿತೆಂದು ಮೇಲೋಣಿಯವರು ಉಬ್ಬಿನಿಂದ ಕುಣಿದಾಡಿದರು. ಕೆಳ ಓಣಿಯವರ ಜಿದ್ದು ಸೋತಿತು. ಅವರು ಕೆಳಮೋರೆ ಹಾಕಿಕೊಂಡು ತಮ್ಮ ವಕೀಲ ರೊಡನೆ ಕಚೇರಿಯ ಹೊರಗೆ ಬಂದರು. 'ಇದ್ಯಾಕ ಹಿಂಗಾತರೀ ವಕೀಲರs?' ಎಂದು ಹಿರೇಗೌಡನು ದೈನ್ಯಪಟ್ಟು ಕೇಳಿದನು. ವಕೀಲರಿಗೂ ತುಸು ದಿಗಿಲು ಬಿದ್ದಿತ್ತು. ಆದರೂ ವಿನೋದಲಹರಿಯಲ್ಲಿ ಉತ್ತರ ಕೊಟ್ಟರು. 'ಗೌಡ' ಇಷ್ಟು ತಿಳಿಯೂದುಲ್ಲs ನಿನಗ? ನೂರ ಬ್ಯಾರೆ ಕಚೇರಿ-ಕಟ್ಟೆ ಹತ್ತಿಳಿದೀ. ನಮ್ಮ ಮಾಮಲೇದಾರರಿಗೆ ಬೆಣ್ಣೀ ಭೀಮುರಾಯರು ಅಂತ ಅದಕ್ಕs ಅಂತಾರೊ ಮಳ್ಳs,' ಮಳ್ಳ, ಗೌಡನಿಗೂ ಅವನ ಬಣದವರಿಗೂ ಆ ಎರಡ ರ್ಥವು ತಟ್ಟನೆ ಹೊಳೆಯಿತು. ತನ್ನು ಹೊಟ್ಟೆಯುರಿಯಲ್ಲಿಯೂ ಅವರು ಕೆಟ್ಟ ನಗೆಯೊಂದನ್ನು ನಕ್ಕರು.

ಹೀಗೆ ಅನೇಕ ರೀತಿಯಾಗಿ ಭೀಮುರಾಯರ ಬೊಕ್ಕಸವು ತಿರುಪತಿ ವೆಂಕಪ್ಪನ ಕಣಜದಂತೆ ತುಂಬುತ್ತಲಿತ್ತು. ಆ ವೆಂಕಪ್ಪನಂತೆ ಅವರು ಸಾಲ ಗಾರರಲ್ಲ; ಸಾಲ ಕೊಟ್ಟು ಆದರಿಂದಲೂ ಗಳಿಸುತ್ತಿರುವ ಸಾವುಕಾರರು. ಈ ಸಾವುಕಾರಿಕೆಯಲ್ಲಿ ಒಡೆದು ಕಾಣುವುದೆಂದರೆ ಅವರ ಉದಾರಬುದ್ಧಿ. ಸ್ನೇಹಿತರು ತಮ್ಮ ಅಡಚಣಿಯ ಪ್ರಸಂಗಗಳಲ್ಲಿ ಸಾಲ ಬೇಡಿದರೆ ಎಷ್ಟೂ ಮಿಬೆಮಿಜಿಯಿಲ್ಲದೆ ತಟ್ಟನೆ ಕೊಟ್ಟುಬಿಡುತ್ತಿದ್ದರು. ಆದಕ್ಕಾಗಿ ಅವರಿಂದ ಕಾಗದ ಬರಿಸಿಕೊಳ್ಳುವುದು, ಒಳ್ಳೇ ಬಡ್ಡೀದರವನ್ನು ಕಟ್ಟುವುದು ನಡೆದೇ ಇದ್ದವಾದರೂ ಅವು ಕಾಣಲಿಕ್ಕೆ ಮುಖ್ಯವಲ್ಲ. ಹಣ ಕೂಡಹಾಕಬೇಕು, ಜನಕ್ಕೆ ನೆರವಾಗಬೇಕು ಎಂಬ ಈ ಎರಡೂ ಧ್ಯೇಯಗಳನ್ನು ಮೇಳವಾಡಿ

ಸಾಧಿಸಿದವರೆಂದರೆ ಭೀಮರಾಯರೊಬ್ಬರೇ ಎನ್ನಬಹುದು. ಚಾಚೂ ತಪ್ಪದೆ ಅಸಲನ್ನೂ ಬಡ್ಡಿಯನ್ನೂ ಅವರು ವಸೂಲು ಮಾಡುತ್ತಿದ್ದರು. ಆದರೆ ಇಂಥ ದಿನವೇ ಕೊಡಬೇಕೆಂದು ಖಟ್ಟಿಗೆ ಹಚ್ಚಿದವರಲ್ಲ. ದಾನ-ಧರ್ಮದ ವಿಷಯದಲ್ಲಿ ಭೀಮರಾಯರ ಮನೋವೃತ್ತಿಯು ಬಹಳ ನಿಶ್ಚಿಂತವಾದದ್ದು. ಯಾರೇ ಕೇಳಲಿಕ್ಕೆ ಬರಲಿ ಅವರಿಗೆ ಏನಾದರೂ ಸ್ವಲ್ಪ ಕೊಟ್ಟು ಅರ್ಧನಿಮಿಷದಲ್ಲಿಯೇ ಅಪ್ಪಣೆಕೊಡುತ್ತಿದ್ದರು. ಸಾಧ್ಯವಿದ್ದಲ್ಲಿ ಕೆಲವು ಯಾಚಕರಿಂದ ತಮ್ಮ ಯಾವುದಾದರೂ ಕೆಲಸವನ್ನು ಮಾಡಿಸಿಕೊಳ್ಳುವ ಅವರ ಚಾತುರ್ಯವು ಹೆಚ್ಚಿನದು. ಒಂದು ಬೆಳಗಿನಲ್ಲಿ ವೈದಿಕ ಬ್ರಾಹ್ಮಣರೊಬ್ಬರು ಹಸುರುಶಾಲು ಹೊತ್ತುಕೊಂಡು ಹೊಸತಿಲೊಳಗೆ ಕಾಲಿಟ್ಟರು. ಅದೇ ಮೋರೆ ತೊಳೆದುಕೊಂಡು ಭೀಮರಾಯರು ತಮ್ಮ ಗಾದಿಯ ಮೇಲೆ ಕುಳಿತಿದ್ದರು. ಬ್ರಾಹ್ಮಣರು ಬಂದು ನಮಸ್ಕಾರಮಾಡಿ ಹೆಚ್ಚು ಹೇಳಿಸಿಕೊಳ್ಳದೆ ಮಗ್ಗುಲಿನ ಗಾದಿಯ ಮೇಲೆ ಕಾಲೂರಿದರು. ಭೀಮರಾಯರಿಗೆ ಮುಖಲಕ್ಷಣದಿಂದ ಎಲ್ಲಾ ತಿಳಿಯಿತು. ಇಂಥ ಎಷ್ಟೋ ವ್ಯಕ್ತಿಗಳು ಅವರ ಮನೆಗೆ ಹಾದಾಡಿದ್ದರು. ವೇದಮೂರ್ತಿಗಳು ಕೆಳಗೆ ಕೂತ ಕ್ಷಣದಿಂದ ಮಂತ್ರದ ಮಳೆಯನ್ನೇ ನಡಸಿದರು. ಸಾಮಾನ್ಯವಾಗಿ ರಾಯರು ಅದಕ್ಕೆ ಆಸ್ಪದ ಕೊಡದೆ ದಕ್ಷಿಣೆ ಕೊಟ್ಟು ಕಳಿಸುವವರು. ಅದೇಕೋ ಈ ಸಾರೆ ಏನೇನು ನಡೆಯುವುದು ನೋಡಬೇಕೆಂದು ಮಂತ್ರಪಾಠವನ್ನು ಕೇಳುತ್ತಲೆ ಕುಳಿತರು. ಅದಾದಮೇಲೆ ವೈದಿಕಧರ್ಮದ ಮಹತ್ತ್ವ, ಕಲಿಯುಗದಲ್ಲಿ ಅದರ ಹ್ರಾಸ, ಬ್ರಾಹ್ಮಣ್ಯದ ಹೀನಾವಸ್ಥೆ, ಕೊನೆಗೆ ಯಜಮಾನರ ಸ್ತುತಿಪಾಠ ಮೊದಲಾದ ಅನೇಕ ವಿಷಯಗಳು ಒಂದು ಐದು ನಿಮಿಷದ ಉಪನ್ಯಾಸದಲ್ಲಿ ಬಂದು ಹೋದವು. ಇನ್ನು ದೇಶಾವರಿಯ ಸಮಾರೋಪವಾಕ್ಯವು ಬರುವುದೆಂದು ಭೀಮರಾಯರಿಗೆ ಗೊತ್ತಾಯಿತು. ಆಗ ಉಪನ್ಯಾಸಕರನ್ನು ತಡೆದು ಹೇಳಿದರು, 'ಸ್ವಾಮಿ' ನಿಮ್ಮ ಅಭಿಪ್ರಾಯ ತಿಳೀತು. ಅಲ್ಪಸ್ವಲ್ಪ ದೇಶಾವರಿಯಿಂದ ನಿಮಗೇನು ಫಾಯದೆ ಆಗುವುದು? ನನ್ನ ಮಾತು ಕೇಳಿರಿ. ಇಂದಿನಿಂದ ನಮ್ಮ ಮನೆಯಲ್ಲಿ ಇದ್ದು ೧೦-೧೫ ದಿನ ಪುರಾಣ ಹೇಳಿರಿ. ಸುತ್ತುಮುತ್ತಿಲಿನ ನಾಲ್ಕು ಮನೆಯವರು ಕೇಳಲಿಕ್ಕೆ ಬರತಾರೆ. ನಾ ನಿಮಗೆ ಅನುಕೂಲಮಾಡಿಸಿಕೊಡತೀನಿ.' ಬ್ರಾಹ್ಮಣರು ಬಾಯಿ ತೆರೆದರು. 'ಮಹದುಪಕಾರ, ರಾಯರೇ! ಇಷ್ಟಾದರೆ

ಕೇಳಬೇಕೇ ? ‘ ಭವಿತವ್ಯಾನಾಂ ದ್ವಾರಾಣಿ ಭವಂತಿ ಸರ್ವತ್ರ ’ ಎಂದು ಕಾಲಿದಾಸ ಹೇಳಿದ್ದು ಸುಳ್ಳಲ್ಲ. ’

‘ ಅದಿರಲಿ, ನೀವು ಯಾವ ಪುರಾಣ ಹೇಳತೀರಿ ? ’

‘ ಬೇಕಾದ್ದು, ಯಜಮಾನರೇ. ಭಾರತ, ರಾಮಾಯಣ, ಭಾಗವತ, ಮಾಸಮಾಹಾತ್ಮ್ಯ ’

‘ ಸರಿ. ಭಾಗವತ ಆರಂಭಮಾಡಿಬಿಡಿರಿ. ನಾಳೆ ಪ್ರಾತಃಕಾಲದಿಂದ ಸುರುವಾಗಲಿ ’ ಎಂದು ಅವರನ್ನು ಕಳಿಸಿಕೊಟ್ಟು ಭೀಮರಾಯರು ಒಳಗೆ ಹೋಗಿ ಸುಗುಣಾಬಾಯಿಯನ್ನು ಕಂಡು ಹೇಳಿದರು: ‘ ನೋಡು ಸುಗುಣೀ, ನಿನ್ನ ದಸಿಂದ ಒಬ್ಬ ಪುರಾಣಿಕರನ್ನು ಗೊತ್ತುಮಾಡೀನಿ. ನಾಳಿಸಿಂದ ಇಲ್ಲೇ ನಮ್ಮ ನ್ಯಾಗ ಭಾಗವತ ಹೇಳತಾರ. ಓಣೀ ಮಂದಿಗೆಲ್ಲ ತಿಳಿಸೋಣ. ಸ್ವಾರ್ಥ ಪರಾರ್ಥ ಎರಡೂ ಆದಂಗಾತು. ಪುರಾಣ-ಪುಣ್ಯಕಥಿ ಕೇಳಿಕೋತ ಇನ್ನರS ಆರಾಮಿರು. ’ ಸುಗುಣಾಬಾಯಿಯ ಸರಳ ಚೇತನಕ್ಕೆ ನಿಜವಾದ ಸಂತೋಷವಾಯಿತು. ಹಾಗೇ ಆಗಲೆಂದು ಅವಳು ಒಪ್ಪಿಕೊಂಡಳು.

ಭಾಗವತಪುರಾಣವು ಆರಂಭವಾಗಿ ಹತ್ತು-ಹನ್ನೆರಡು ದಿನಗಳು ಕಳೆದವು. ಓಣಿಯ ಅನೇಕ ಭಾವಿಕರು ಕೂಡಹತ್ತಿದರು. ಅವರಲ್ಲಿ ಪತಿವಿಹೀನರಾದ ಸ್ತ್ರೀಯರೇ ಹೆಚ್ಚೆಂದು ಹೇಳಬೇಕಾಗಿಲ್ಲ. ಸುಗುಣಾಬಾಯಿಯೂ ತನ್ನ ಕೋಣೆಯೊಳಗೆ ಕೂತುಕೊಂಡು ಭಕ್ತಿಯಿಂದ ಕೇಳುತ್ತಿದ್ದಳು. ಪುರಾಣಿಕರ ಶೈಲಿಯಲ್ಲಿ ಒಂದು ವರ್ಚಸ್ಸು ಕೆಡಹುವ ಪ್ರಭಾವವಿತ್ತು. ಆದರೆ ಸಂಸ್ಕೃತಮಯವಾದ ಅವರ ವಾಣಿಯು ದೈವೀವಾಣಿಯೇ ಆಗಿಬಿಡುತ್ತಲಿತ್ತು. ಅಲ್ಲಿ ನೆರೆದ ಮನುಷ್ಯರಿಗೆ ಪೂರ ತಿಳಿಯುವುದೇ ಅಸಾಧ್ಯ. ಸುಗುಣಾಬಾಯಿಗೂ ಅದೇ ಗತಿ. ಕಥೆ ಬಂದಾಗ ಬಹು ಭಾಗವು ತಿಳಿಯುತ್ತಿತ್ತು; ಉಳಿದದ್ದೆಲ್ಲ ಮಸಮಸಕು. ಭಾಗವತದಲ್ಲಿ ತತ್ವ ವಿಷಯವು ಹೆಚ್ಚಾಗಿರುವುದರಿಂದ ಅದನ್ನು ತಿಳಿಗನ್ನಡದಲ್ಲಿ ಹೇಳಲಾರದ ಪುರಾಣಿಕರು ಎಲ್ಲರ ಕಣ್ಣಿಗೆ ತೂಕಡಿಕೆ ತರುತ್ತಿದ್ದರು. ಸುಗುಣಾಬಾಯಿಯು ಮಾತ್ರ ತಿಳಿಯದ ಬಾಗವು ಬಂದಿತೆಂದರೆ ಮನಸ್ಸು ಅದರಲ್ಲಿ ಸೇರದಾಗಿ ತನ್ನ ನೂರಾರು ಯೋಚನೆಗಳಲ್ಲಿ ಮುಳುಗಿಬಿಡುತ್ತಿದ್ದಳು. ತುಂಬ ಸಂಸಾರಹೂಡಿ ಮೆರೆಯುವ ಪ್ರಾಯ ಅವಳದು. ಮೂಲೆ ಹಿಡಿದು ಕೇಳುವ ವೇದಾಂತವು ಅವಳ ತಾರುಣ್ಯಕ್ಕೆ ಹೇಗೆ ಒಗ್ಗೀತು ?

ಅವಳನ್ನು ಸೆಳೆದೊಯ್ದು ಮನಸ್ಸು ತನ್ನ ಕನವರಿಕೆಗಳಲ್ಲಿ ತೇಲಿಬಿಡುತ್ತಿತ್ತು. ಪುರಾಣ ಕೇಳುವಾಗ ಅನೇಕ ಸಲ ಕಣ್ಣಮುಂದೆ ನಿಲ್ಲುವುದೆಂದರೆ ಕನಕಾಪುರ. ಅಲ್ಲಿ ಗಂಡನೊಡನೆ ಮಾತುಕಥೆಯಾಡಿದಂತೆ ಆಗುವುದು, ಕೂಡಲೆ ಅವನು ರೋಗದಿಂದ ಹಾಸಿಗೆ ಹಿಡಿದ ಚಿತ್ರವು ಕಣ್ಣುಕಟ್ಟಿ ಅವನ ಸಾವಿನ ನೆನಪು ಮೈನಡುಗಿಸುವುದು, ಕಣ್ಣೀರು ಹರಿಸುವುದು. ಅವನ ಅಣ್ಣ ತಮ್ಮಂದಿರು ಎಲ್ಲ ಆಸ್ತಿಪಾಸ್ತಿಯನ್ನು ತಮ್ಮದಾಗಿ ಮಾಡುವಂತೆ ಒಮ್ಮೆ ಭಾಸವಾಗುವುದು. ತಾನು ಅಲ್ಲಿಗೆ ಹೋಗಲು ಅವರು ಛೀ ಥೂ ಎಂದು ಹೊಡೆದಟ್ಟಿದಂತೆ ತೋರುವುದು. ಇದರಂತೆ ಇನ್ನೂ ಎಷ್ಟೋ ದೃಶ್ಯಗಳು ಸುಳಿದಾಡಿ ಸುಗುಣಾಬಾಯಿಯ ಪ್ರಾಣ ಹಿಂಡುತ್ತಿದ್ದವು. ಪುರಾಣವು ಒಮ್ಮೊಮ್ಮೆ ಬೇಡವೆನಿಸಿ ಹೋಗುತ್ತಿತ್ತು. ತನ್ನ ಅಕ್ಕನು ತನಗಾಗಿ ಅದನ್ನು ಹೂಡಿದ್ದು ಉಪಕಾರವೋ ಅಪಕಾರವೋ ಅವಳಿಗೆ ತಿಳಿಯದಾಯಿತು. ಇಷ್ಟರಲ್ಲಿ ಕನಕಾಪುರದಲ್ಲಿ ಅವಳಿಗೆ ಬಹಳ ಬೇಕಾದ ಋಣಾನುಬಂಧಿಕರೊಬ್ಬರಿಂದ ಭೀಮರಾಯರಿಗೆ ಪತ್ರವೊಂದು ಬಂದಿತು. ಅವಳು ಭಯಪಟ್ಟಂತೆ ದಾಯಾದರು ಎಲ್ಲ ಆಸ್ತಿಯನ್ನು ಹಂಚಿಕೊಂಡು ತನಗೆ ತೀರ ಸ್ವಲ್ಪ ಪೋಟಗಿಯನ್ನು ಕೊಡುವ ಹಂಚಿಕೆ ಮಾಡಿದ್ದು ಅದರಿಂದ ತಿಳಿಯಿತು. ಪತ್ರ ಮುಟ್ಟಿದೊಡನೆ ಅವಳು ಕನಕಾಪುರಕ್ಕೆ ಹೊರಡಬೇಕೆಂದೂ ಇಲ್ಲದಿದ್ದರೆ ಅವಳ ಸ್ಥಿತಿಯು ಅತಿಹೀನವಾಗುವುದೆಂದೂ ಅದರಲ್ಲಿ ಕಾಣಿಸಿತ್ತು. ಮೊದಲೇ ಕಂಗೆಟ್ಟ ಸುಗುಣಾಬಾಯಿಗೆ ಇನ್ನಷ್ಟು ಹಾಹಾರಿಕೆ ಹುಟ್ಟಿತು. ಪುರಾಣದಲ್ಲಿಯ ಆಸ್ಥೆಯೆಲ್ಲ ಚದರಿಹೋಯಿತು. ಭೀಮರಾಯರು ಇದನ್ನರಿತು ಒಂದೆರಡು ದಿನಗಳಲ್ಲಿ ಅರ್ಧ ಉಳಿದ ಸ್ಕಂಧವನ್ನು ಮುಗಿಸಹೇಳಿ ಪುರಾಣ ಮಂಗಳ ಮಾಡಿದರು. ಮರುದಿನವೇ ತಾವು ರಜೆ ದೊರಕಿಸಿ ಸುಗುಣಾಬಾಯಿಯನ್ನು ಕರೆದುಕೊಂಡು ಕನಕಾಪುರಕ್ಕೆ ತೆರಳಿದರು.

ಕನಕಾಪುರವು ಜಾಗೀರಿಯ ಹಳ್ಳಿ. ಜಾಗಿರದಾರರ ಮನೆಯ ಹೊರತು ಬೇರೆ ಜಾಗೀರಿಯ ಲಕ್ಷಣಗಳೇನೂ ಇಲ್ಲ. ಬಿದ್ದ ಮನೆಗಳು, ಡೊಕ್ಕೆ ಹಾಯ್ದ ದನಗಳು, ಬಡಕಲಾದ ಮಂದಿ ಇದೇ ಅಲ್ಲಿ ಕಾಣಿಸುವ ಸಂಪತ್ತು. ಊರ ನಡುವೆ ಜಾಗಿರದಾರರ ಮನೆ, ಹಳೆಯ ತರದ ಗಟ್ಟಿಮುಟ್ಟಾದ ಮನೆ. ಭೀಮರಾಯರು ಸುಗುಣಾಬಾಯಿಯ ಕೂಡ ಒಂದು ಸಂಜೆ ಅಲ್ಲಿಗೆ ಮುಟ್ಟಿ

ದರು. ಸುಗುಣಾಬಾಯಿ ಬರಬಹುದೆಂದು ಅವಳ ಭಾವಮೈದುನಂದಿರು ಬೇಡವಾಗಿದ್ದರೂ ನಿರೀಕ್ಷಿಸಿದ್ದರು. ಆದರೆ ಭೀಮರಾಯರು ಅವಳನ್ನು ಕಟ್ಟಿಕೊಂಡು ಬಂದ ವಿಷಯವು ಅವರಿಗೆ ಅಕಲ್ಪಿತವಾಗಿ ತೋರಿತು. ಅವಳ ಮದುವೆಯಲ್ಲಿ ಭೀಮರಾಯರನ್ನು ಅವರು ನೋಡಿದ್ದರು; ಮಾಮಲೇದಾರ ರೆಂದೂ ಗೊತ್ತಿತ್ತು. ಆದರೆ ಹೆಚ್ಚಿನ ಪರಿಚಯವಾಗಿರಲಿಲ್ಲ. ಅದನ್ನೆಲ್ಲ ಲಕ್ಷ್ಯಕ್ಕೆ ತಾರದೆ ಹಿರಿಯ ಅಣ್ಣಂದಿರಾದ ಬಾಬೂರಾಯರು ಅವರನ್ನು ಆದರೋಪಚಾರದಿಂದ ಬರಮಾಡಿಕೊಂಡರು. ಸುಗುಣಾಬಾಯಿಯು ಹುಣ್ಣು ಕೆದರಿದಂತಾಗಿ ಹಳೆಯ ಗೋಳನ್ನು ನೆನೆದು ಬಿಕ್ಕಿ ಬಿಕ್ಕಿ ಅಳುತ್ತ ಒಂದು ಮೂಲೆಹಿಡಿದು ಕುಳಿತಳು. ಗಂಡಸರ ಸಂಜೆಯೂಟವಾಯಿತು. ಎಲೆ-ಅಡಿಕೆ ಹಾಕಿಕೊಳ್ಳುವಾಗ ಭೀಮರಾಯರನ್ನು ಕುರಿತು ಬಾಬೂರಾಯರು ಕೇಳಿ ದರು 'ಏನು ರಾಯರಽ, ತಾವಽ ಬರಬೇಕಾತು ಮಗಳ್ನ ಕಳಿಸಲಿಕ್ಕೆ? ಬಹಳ ಶ್ರಮಕೊಟ್ಟಂಗಾತು ತಮಗ. ಮೊದಲೇ ತಿಳಿದಿದ್ದರ ನಮ್ಮ ಡಮಣಿ ಕಳಿಸ ತಿದ್ದವಿ.' ಭೀಮರಾಯರಿಗೆ ಈ ಉಪಚಾರದ ಶಾಸ್ತ್ರ ಹೊಸದಲ್ಲ. ಮಾತಿಗೆ ಮಾತು ಮುಟ್ಟಿಸಿದರು. 'ಏನೋ ನಿಮ್ಮ ಜಾಗೀರಿ ಊರು ನಾವಽ ನೋಡ ಬೇಕಂತ ಮನಸಿನ್ಯಾಗ ಬಂತು, ಬಂದುಬಿಟ್ಟಿವಿ. ತಿಳಿಸೋದಾಗಲಿಲ್ಲ.' ಹಾಗೇ ಹರಟೆ ಹೊಡೆಯುತ್ತ ಜಾಗೀರಿಯ ಇತಿಹಾಸವನ್ನೂ ಸದ್ಯದ ಹೊಲಮನೆಯ ಸ್ಥಿತಿಯನ್ನೂ ಅವರಿಂದ ಕೇಳಿಕೊಂಡರು. ಅನಂತರಾಯ ನಂಥ ತಮ್ಮನನ್ನು ಕಳಕೊಂಡದ್ದಕ್ಕೆ ಬಾಬೂರಾಯರು ಸ್ನೇಚಾಡಿ ಕಣ್ಣೀರು ತಂದರು. 'ಪಾಪ! ಬಹಳ ಅನ್ಯಾಯವಾಯ್ತು' ಎಂದು ಭೀಮರಾಯರು ಕನಿಕರದ ಉದ್ಗಾರ ತೆಗೆದರು. ಆ ಅನ್ಯಾಯವಾದದ್ದು ಬಾಬೂರಾಯರಿಗೋ ಸುಗುಣಾಬಾಯಿಗೋ ಎಂಬುದು ಮಾತಿನಲ್ಲಿ ಮುಚ್ಚಿಹೋಯಿತು.

ಮರುದಿನ ಸುಗುಣಾಬಾಯಿಯು ಕಾಲೆಳೆಯುತ್ತ ತನ್ನ ಗಂಡನ ಕೋಣೆಗೆ ಹೋಗಿ ಕೀಲಿ ತೆರೆದಳು. ಒಳಗಿನ ಸಾಮಾನುಗಳೆಲ್ಲ ಅಸ್ತವ್ಯಸ್ತ ವಾಗಿ ಬಿದ್ದಿದ್ದವು. ಕಪಾಟನ್ನು ತೆರೆದು ನೋಡಲಾಗಿ ಅಲ್ಲಿಟ್ಟ ಅತ್ತರದಾಣಿ-ಗುಲಾಬದಾಣಿ, ತಾಟು, ಬಟ್ಟಲ ಮೊದಲಾದ ಬೆಳ್ಳಿಯ ಒಡವೆಗಳೇ ಕಾಣ ಲಿಲ್ಲ. ಸಿಟ್ಟಿನಿಂದ ಮೈಯೆಲ್ಲ ಕಾಯಿತು. ತನ್ನ ಬಂಗಾರದ ವಸ್ತುಗಳ ಜೋಡಿ ಅವನ್ನು ಯಾಕೆ ಕಕ್ಕಸೂರಿಗೆ ತಾನು ಒಯ್ಯುವ ಬುದ್ಧಿಬರಲಿಲ್ಲವೆಂದು

ಹಳಹಳಿಸಿದಳು. ಕಕ್ಕನು ಸ್ನಾನಕ್ಕೆ ಬಂದಾಗ ಕರೆದು ಕಪಾಟು ತೋರಿಸಿ ನಡೆದ ಸಂಗತಿಯನ್ನು ಹೇಳಿದಳು. 'ನೀ ಸುಮ್ಮನಿರು, ನಾ ಎಲ್ಲಾ ವಿಚಾರಿಸತೀನಿ' ಎಂದು ಭೀಮರಾಯರು ಸ್ನಾನಕ್ಕೆ ಹೊರಟರು. ಆದರೆ ಅವರು ಆ ಕೋಣೆಗೆ ಹೋದ ಸುದ್ದಿಯು ಬಾಬೂರಾಯರಿಗೆ ತಮ್ಮ ಪತ್ನಿಯ ಮೂಲಕ ತಿಳಿಯಿತು. ಏನೋ ಕಾರಸ್ಥಾನಕ್ಕಾಗಿ ಮಾಮಲೇದಾರ ವ್ಯಕ್ತಿಯು ಬಂದಿರಬಹುದೆಂದು ಅವರು ಸಂಶಯಪಟ್ಟರು.

ಮಧ್ಯಾಹ್ನದ ಊಟ-ಸಿದ್ದಿಗಳಾದ ಮೇಲೆ ಪಡಸಾಲೆಯಲ್ಲಿ ಬಾಬೂರಾಯರು ತಂಬಾಕು ಮೆಲ್ಲುತ್ತ ಕುಳಿತಿರಲು ತಮ್ಮ ಕೋಣೆಯಿಂದ ಭೀಮರಾಯರು ಅಲ್ಲಿಗೆ ಬಂದರು. ಸಾಮಾನ್ಯ ಹರಟೆ ಮೊದಲಾಯಿತು. ಮೊದಲೇ ಮಾಮಲೇದಾರರು, ಮೇಲೆ ರಾಯಬಾರಿಗಳು ಎಂಬ ಸಂಶಯದಿಂದ ಬಾಬೂರಾಯರು ಯಾವ ಮಾತನ್ನೂ ಎಚ್ಚರದಿಂದಲೇ ಆಡುತ್ತಿದ್ದರು. ಒಂದರ್ಧ ತಾಸಿನ ತರುವಾಯ, ಭೀಮರಾಯರು ಹೇಳಿದರು: 'ಆಯಿತು, ಬಾಬೂರಾವ್, ನಮ್ಮ ಮಗಳನ್ನು ನಿಮಗೆ ಒಪ್ಪಿಸಿದ್ಹಾಂತು. ಇನ್ನೂ ಚಿಕ್ಕವಯಸ್ಸು. ದೇವರು ಹಿಂಗ ಸೌಭಾಗ್ಯ ಕಸಗೊಂಡ. ನೀವೇ ತಾಯಿತಂದೆ ಆಗಿ ಜೋಪಾನ ಮಾಡಬೇಕು.'

'ಅದರ ಕಾಳಜಿ ಬಿಡರಿ, ಭೀಮರಾಯರೇ. ನೀವು ಹೇಳುವ ಕಾರಣವೇ ಇಲ್ಲ.'

'ಆಯಿತು, ಹಂಗಾರ, ನಾವಿನ್ನು ತಿರಗಿ ಹೊರಡತೀವಿ, ನಮಗ ಹೆಚ್ಚು ರಜಾ ಇಲ್ಲ.'

'ಛೇಛೇ ತಾವು ಇಷ್ಟು ಲಗೂನೆ ಹೊರಟು ಹೋಗೂದೇ? ಎಂಟು ಹತ್ತು ದಿನ ಆದರೂ ನಮ್ಮ ಬಡ ಊರಾಗ ಇದ್ದರ ನಮಗ ಬಹಳ ಸಂತೋಷ ಆಗತದ.'

'ಅದೆಲ್ಲಾ ಖರೆ. ಕಚೇರಿ ಕೆಲಸ ಬಿಟ್ಟು ಹ್ಯಾಂಗಿರೋದು ಬಾಬೂರಾವ್? ಇಲ್ಲೇ ಏನು ಕೆಲಸ ಹಚ್ಚಿಕೊಡತೀರಾ?'

ಬಾಬೂರಾಯರು ಖೊಳ್ಳೆಂದು ನಕ್ಕರು, ಬೇರೆ ಉತ್ತರವನ್ನೇನೂ ಕೊಡಲಿಲ್ಲ. ಕೊನೆಗೆ ಭೀಮರಾಯರೇ ತಮ್ಮ ಮನಸ್ಸಿನಲ್ಲಿದ್ದ ವಿಷಯ ತೆಗೆದರು. 'ಬಾಬೂರಾವ್, ನೀವು ಮೂರು ಮಂದಿ ಅಣ್ಣತಮ್ಮಂದಿರು

ನಿಮ್ಮ ಆಸ್ತಿಪಾಸ್ತಿ ಸಂಬಂಧಿ ಮುಂದಿನ ವಿಚಾರ ಏನು?' ಬಾಬೂರಾಯರಿಗೆ ಈ ಪ್ರಶ್ನೆಯ ಕಳೆ ಗೊತ್ತಾಯಿತು. ತೋರಿಕೆಯ ಉತ್ತರವನ್ನೇ ಕೊಟ್ಟರು. 'ನಮ್ಮದು ಏಕತ್ರ ಕುಟುಂಬ, ರಾವಸಾಹೇಬ. ಎಲ್ಲಾರೂ ಪ್ರೇಮದಿಂದ ಇದ್ದೀವಿ, ಮುಂದೂ ಇರತೀವಿ ದೇವರ ದಯದಿಂದ. ನಮ್ಮ ಅನಂತರಾಯ ಅಂವರ ಮನೆತನಕ್ಕ ದೊಡ್ಡ ಆಧಾರಸ್ತಂಭ ಇದ್ದಂಗ ಇದ್ದ. ಅವನ್ನ ಕಳಕೊಂಡಿವಿ. ಆದರೇನು, ಸುಗುಣಾಬಾಯಿ ಮ್ಯಾಲೆ ನಮ್ಮ ಮಮತಾ ಅದ. ಆಕೀನೂ ನಮ್ಮನ್ನ ಹಚಿಗೊಂಡಾಳ.' ಈ ಧರ್ತಿಯಲ್ಲಿ ಬಣಗುಮಾತು ಬಾಯಿತುಂಬಿ ಹರಿಯಿತು. ಇದರಲ್ಲಿ ತಿರುಳಿಲ್ಲವೆಂದು ಇಬ್ಬರಿಗೂ ಗೊತ್ತು. ಹಾಗೆಂದೂ ಯಾರೂ ಸ್ಪಷ್ಟವಾಗಿ ಹೇಳಲಾರರು. ಅದೇ ಅನುಭವಿಕರ ಲಕ್ಷಣವಲ್ಲವೇ? 'ಅದೆಲ್ಲಾ ವಾಜವಿ, ಬಾಬೂರಾವ್, ನೀವು ಕೂಡಿ ಇದ್ದೀರಿ, ಮುಂದೂ ಇರಬೇಕೆಂಬೂದು ಯಾರಿಗೆ ಬ್ಯಾಡಾದೀತು? ಆದರ ಸುಗುಣಾಬಾಯಿಗೆ ಮುಂದಿನ ವ್ಯವಸ್ಥಾ ಏನು? ಇನ್ನೂ ಸಣ್ಣ ವಯಸ್ಸು ಅವಳದು. ಗಂಡ ಇದ್ದು ಓಡಾಡಿದ ಮನಿ, ಊರು ನೋಡಲಿಕ್ಕೆ ಆಗದು, ಅವಳಿಗೆ ಈಗ ಹೊಟ್ಟ್ಯಾಗ ಸಂಕಟ ಆಗೋದು ಸ್ವಾಭಾವಿಕ. ಅದರಿಂದ ಎಲ್ಲಾರ್ಯ್ಯರ ದೂರ ಹೋಗಿ ಇರಬೇಕಂತ ಆಕೀಗೆ ಅನಸಬಹುದು; ತೀರ್ಥ-ಯಾತ್ರಿ, ದಾನ-ಧರ್ಮ ಮಾಡಬೇಕು ಅಂತ ಅನಸಬಹುದು. ಇವೆಲ್ಲ ಸಾಹಜಿಕ ಹೌದಲ್ಲೋ ನೀವೇ ಹೇಳಿರಿ.'

'ಯಾರು ಅಲ್ಲಂತಾರ ರಾವಸಾಹೇಬ! ಅವಳಿಗೇನು ಬೇಕು ಹೇಳಲಿ, ಆ ವ್ಯವಸ್ಥಾ ನಾವು ಮಾಡತೀವಿ.'

'ಹೌದು, ನೀವು ಮಾಡೂದುಲ್ಲ ಅಂತ ನಾ ಎಲ್ಲಿ ಅಂತೀನಿ? ಆದರೂ ನೋಡರಿ. ಇವು ಸೂಕ್ಷ್ಮ ವಿಷಯ. ಲೌಕಿಕ ನೋಡಬೇಕಾಗತದ. ಅವರವರ ಹಕ್ಕಿನದು ಅವರಿಗೆ ಮುಟ್ಟಿಸಿ ಮನುಷ್ಯ ತನ್ನ ಜವಾಬದಾರಿಯಿಂದ ಪಾರಾಗಬೇಕು.'

ಈಗ ಇಬ್ಬರ ಮಾತು ಗುಡ್ಡ ಸುತ್ತಿ ಮೈಲಾರಕ್ಕೆ ಬರತೊಡಗಿತು. ಕೆಚ್ಚು ಕಡಿಮೆ ಸ್ಪಷ್ಟವಾದ ಪ್ರಶ್ನೋತ್ತರಗಳು ನಡೆದವು. 'ಹಂಗಾರೇನು, ರಾಯರು, ಅವಳಿಗೆ ಪೋಟಗಿ ಕೊಡಬೇಕಂತೀರಿ ಹೌದಲ್ಲೋ? ನಮ್ಮ ಕೈಲಾದಷ್ಟು ಕೊಡತೀವಿ. ತನಗೆಲ್ಲಿ ಬೇಕು ಅಲ್ಲಿ ಇದ್ದುಬಿಡಲಿ.'

'ಪೋಟಗಿ ಕೊಡೂ ಮಾತಲ್ಲ, ಬಾಬುರಾಯರs. ನೀವು ಅಷ್ಟು ಕೊಡೋದುಲ್ಲ ಅಂತ ನಾ ಎಂದಾರ ತಿಳದೀನೇನು ? ಅದು ದೊಡ್ಡ ಜಾಗೀರಿ ಮನೆತನಕ್ಕ ಭೂಷಣಲ್ಲ. ಆಕಿಗೇನು ಮಕ್ಕಳಿಲ್ಲ ಮರಿಯಿಲ್ಲ. ಜೀವಂತ ಇರೋತನಕ ಅನಂತರಾಯ ಇದ್ದರ ಏನು ಸಿಗುತಿತ್ತೊ ಅದನ್ನ ಕೊಟ್ಟಬಿಡರಿ.'

'ಒಂದು ಪಾಲಂತೀರಾ? ಅದು ಆಗದ ಮಾತು ರಾವಸಾಹೇಬ. ನಮ್ಮನ್ನ ಕ್ಷಮಿಸರಿ.'

ಭೀಮರಾಯರು ಇನ್ನೂ ಇಷ್ಟು ಆರ್ಜವಮಾಡಿ ನೋಡಿದರು. ಮತ್ತೆ ಅದೇ ಕಟ್ಟುನಿಟ್ಟಾದ ಉತ್ತರವು ದೊರೆಯಲಾಗಿ ಮಾತು ನಿಲುಕಡೆಗೆ ಬಂದಿತು. ಬಾಬುರಾಯರು ಈ ವಿಷಯದಲ್ಲಿ ಕಾಯದೆ-ಕಾನೂನು ಮೊದಲಾಗಿ ಎಲ್ಲವನ್ನೂ ವಿಚಾರಿಸಿ ಒಳ್ಳೆಯ ನಿಷ್ಠುರವಾದ ನಿರ್ಣಯಕ್ಕೆ ಬಂದಿರುವರೆಂದು ಭೀಮರಾಯರಿಗೆ ಒಡೆದು ತೋರಿತು. ಮುಂದೆ ಮಾತು ಬೆಳೆಸದೆ ಮರುದಿನ ಬೆಳಿಗ್ಗೆ ತಾವು ಹೊರಡಲೇಬೇಕೆಂದು ತಿಳಿಸಿದರು. ಆ ಮೇರೆಗೆ ಡಮಣಿಯ ಸಿದ್ಧತೆ ಮಾಡುವೆವೆಂದು ಬಾಬೂರಾಯರು ವಚನವಿತ್ತರು. ಇನ್ನು ಮುಂದೆ ಮಾಮಲೇದಾರರು ಎಂಟು-ಹತ್ತು ದಿನವಿದ್ದರೆ 'ಬಹಳ ಸಂತೋಷ'ದ ಬಲು ಸಂತಾಪವೇ ಆದೀತೆಂದು ಬಾಬೂರಾಯರಿಗೆ ಅನಿಸಿರಬೇಕು, ಅಂತೇ ಅವರು ಆಗ್ರಹಮಾಡಲಿಲ್ಲ.

ರಾತ್ರಿಯೂಟವಾದ ಕೆಲಹೊತ್ತಿನ ಮೇಲೆ ತಾವು ಮರುದಿನವೇ ಹೊರಡುವುದನ್ನು ತಿಳಿಸಬೇಕೆಂದು ಭೀಮರಾಯರು ಸುಗುಣಾಬಾಯಿಯ ಖೋಲಿಯೊಳಗೆ ಹೋದರು. ಅಲ್ಲಿ ಅದ್ಭುತ ದೃಶ್ಯವೇ ಕಂಡುಬಂದಿತು. ಸುಗುಣಾಬಾಯಿಯು ಅನಂತರಾಯರ ಪಲ್ಲಂಗದ ಮೇಲೆ ಅಸ್ತವ್ಯಸ್ತವಾಗಿ ಬಿದ್ದುಕೊಂಡು ಹೊರಳಾಡುತ್ತಿರುವಳು. ಕಣ್ಣೀರಿಗೆ ತೆರಪಿಲ್ಲ, ಮುಖವೆಲ್ಲ ಕೆಂಪಿಟ್ಟಿದೆ. ಕೆಂಪು ಸೀರೆಯುಟ್ಟ ಆ ಕೆಂಪು ಮೈಯನ್ನೂ ಮೋರೆಯನ್ನೂ ನೋಡಿದರೆ ವೈಧವ್ಯದುಃಖದ ತಪ್ತ ಕೆಂಡವೇ ಇದಿರು ಕಂಡಂತಾಗುವುದು. ಭೀಮರಾಯರಿಗೆ ಎಷ್ಟೋ ಘೋರದೃಶ್ಯಗಳನ್ನು ನೋಡಿ ಕಣ್ಣಿಗೆ ಅಭ್ಯಾಸವಿತ್ತು. ಆದರೆ ಈ ನೋಟವು ಅವರಿಗೆ ಸಹ ಅಸಹ್ಯವಾಯಿತು. ಹತ್ತಿರ ಹೋಗಿ ಮೆಲ್ಲಗೆ ಆವಳನ್ನು ಮುಟ್ಟಿ ಎಬ್ಬಿಸಿದರು. ಮೊದಮೊದಲು ಆವಳಿಗೆ ಎಚ್ಚರವೇ ಇರಲಿಲ್ಲ. 'ಯಾರು? ನೀವ್ಯಾಕ ಬಂದಿರಿ

ಸತ್ತ್ರವರು ! ನಾನೇ ಅಲ್ಲಿಗೆ ಬರತೀನಿ ' ಎಂದಳು. ಮುಂದೆ ಅರಿವು ಮರ ಳಿತು. ಬಟ್ಟೆಯನ್ನು ಸಂವರಿಸಿಕೊಂಡು ಮಂಚದಿಂದ ಕೆಳಗೆ ನಿಂತಳು. ' ಇದೇನು ಸುಗುಣೀ, ಏನಾಗಿತ್ತು? ಹಿಂಗ್ಯಾಕ ಮಾಡತೀ ? ಮನಸ್ಯಾ ಆಗಿ ಹುಟ್ಟಿ ಬಂದ ಮ್ಯಾಲೆ ತಾಳಿಕೋಬೇಕು ' ಒತ್ತಿಕ್ಕಿದ ದುಃಖವು ಹೊರ ಬರಲಾರದೆ ಬಿಕ್ಕುವುದಕ್ಕೆ ಮೊದಲಾಯಿತು. ಸ್ವಲ್ಪ ಹೊತ್ತಾದ ಮೇಲೆ ತಾವು ನಾಳೆ ಹೋಗಲಿಕ್ಕೇಬೇಕೆಂದು ಭೀಮರಾಯರು ತಿಳಿಸಿದರು. ಅದನ್ನು ಕೇಳಿದೊಡನೆ ದೊಪ್ಪನೆ ನೆಲಕ್ಕೆ ಕುಳಿತು ಅಳುವ ಸ್ವರದಲ್ಲಿ ಸುಗುಣಾಬಾಯಿ ಹೇಳಿದಳು: ' ಹಂಗಾರ ಕಾಕಾ, ನಾನೂ ನಿಮ್ಮ ಜೋಡೀನೆ ಬರತೀನಿ. ನಾ ಇಲ್ಲಿ ಇರಲಾರೆ, ಕಾಕಾ, ಮರೋ ಇರಲಾರೆ. ' 'ಯಾಕ ಏನಾತು? ' ಎಂದು ಉತ್ತರ ಗೊತ್ತಿದ್ದರೂ ಕೇಳುವಂತೆ ಕಕ್ಕ ಕೇಳಿದರು. ' ಆಗೋದೇನು ಕಾಕಾ. ಈ ಮನಿ ಒಂದು ರಾಕ್ಷಸ ಆಗಿ ನನ್ನ ಹರಕೊಂಡು ತಿನ್ನತದ. ನೋಡಿದಲ್ಲೆ ಅವರs ಕಣ್ಣಿಗೆ ಬೀಳತಾರ. ಈ ಖೋಲ್ಯಾಗ ಹೊಕ್ಕರ ಸ್ಮಶಾನದ ಉರ್ಯಾಗ ಹೊಕ್ಕಂಗ ಆಗತದ ನನಗ. . ಮ್ಯಾಲ. . ' ಎಂದು ತಡೆದಳು.

' ಮತ್ತೇನು ? ಹೇಳು. '

ಖೋಲಿಯ ಬಾಗಿಲು ಮುಂದೆ ಮಾಡಿದೆಯೋ ಹೇಗೆ ನೋಡಿ ಸುಗುಣಾಬಾಯಿ ಮುಂದರಿಸಿದಳು. 'ಮ್ಯಾಲ ಮನ್ಯಾಗಿನ ಹೆಂಗಸರ ಸಿಗ್ಗ್ರ. ಇವೆಲ್ಲ ಗಂಡಸರಿಗೆ ತಿಳಿಯೂದುಲ್ಲ ಕಾಕಾ. '

' ಅದು ಖರೆ, ಈವತ್ತ ಏನಾತು ಅಂಥಾದು ? '

' ದಿನಾ ನೂರಾ ಎಂಟು ಆಗತಾವ ಕಾಕಾ. ಮೊದಲಿನಿಂದ ನಾ ಭಾಳ ಡೌಲಿನಾಕಿ ಅಂತ ನಮ್ಮ ಅತ್ತೀದು, ನಿಗೆಣ್ಣೇರದು, ಉಪದ್ರವ ಇದ್ದs ಇತ್ತು. ಈಗ ನನ್ನ ಆಧಾರ ತಪ್ಪಿದ ಮ್ಯಾಲೆ ಅದು ಇನ್ನಷ್ಟು. . . . ' ಕೊರಳು ಉಬ್ಬಿ ಮಾತು ನಿಂತವು.

' ಹೇಳು, ಸುಗುಣಿ ಏನರ ಆತು ? '

'' ಈವತ್ತ ರಾತ್ರಿ ಗಂಡಸರ ಊಟ ಆದ ಮ್ಯಾಲೆ, ' ನೀ ಏನು ತಿಂಬು ವಾಕಿ ಅವ್ವ ' ಅಂತ ಅತ್ತೆವರು ನನ್ನ ಕೇಳಿದರು. 'ನಾ ಏನೂ ಒಲ್ಲೆ ' ಅಂತಂದೆ. ' ಅದ್ಯಾಕ, ನಮ್ಮ ಜೋಡಿ ದಶಮಿ ತಿನ್ನಿರಲ್ಲ ' ಅಂತ ಚಿಕ್ಕ ನಿಗೆಣ್ಣಿ ಕರ ದಳು. ' ಭಾಳ ನಾಜೂಕ ಮಂದಿ ಅವರು. ಸುಮ್ಮನ ಮೊದಲಿನಂಗ ಊಟ

ಮಾಡಲಿ' ಅಂತ ಹಿರೇ ನಿಗೆಣ್ಣೆ ಚುಚ್ಚಿ ಆಡಿದಳು. ಅದಕ್ಕ ಅತ್ತೀವರು ಸಿಟ್ಟು ಮಾಡಬೇಕೋ ಬ್ಯಾಡೋ? ಅದೆಲ್ಲ ಬಿಟ್ಟು 'ಹೌದು ಖರೇ ಮಾತು. ನಮ್ಮ ಅನಂತ ಇದ್ದಾಗನ ಮನಸ್ಸಿಗೆ ಬಂದಂಗ ಮಾಡಾಕಿ. ಈಗವ ಹೋದ ಇನ್ಯಾರು ಈಕಿನ್ನ ಕೇಳವರು? ಊರೂರು ತಿರಗತಾಳ, ಬೇಕಾದ್ದು ತಿಂತಾಳ, ಬೇಕಾದ್ದು ಮಾಡತಾಳ....' ಕಾಕಾ ಇನ್ನ ಮುಂದೆ ಹೇಳ ಲಾರೆ" ಎಂದು ನೆಲಕ್ಕೆ ಬಿದ್ದು ಗೋಳಿಟ್ಟಳು.

ಭೀಮರಾಯರಂಥ ವ್ಯವಹಾರಚತುರರಿಗೂ ಇದನ್ನು ನೋಡಿ ದಿಗ್ಭ್ರಮೆಯಾದಂತಾಯಿತು. 'ಏಳುಏಳಕ್ಕ ಸುಗುಣಿ' ಎಂದು ಬಾಯಿಂದ ಹೇಳುತ್ತ ಒಳಗೆ ಮಾತ್ರ ತುಂಬ ವಿಚಾರದ ಗೊಂದಲದಲ್ಲಿ ಬಿದ್ದರು. ಸುಗುಣಾಬಾಯಿ ಎದ್ದು ನಿಂತಳು, ಮೈಮೇಲಿನ ಸೀರೆಯನ್ನು ಸರಿಪಡಿಸಿ ಕೊಂಡಳು. ಆ ಎಳೆಮೈಗೆ ಆ ಕೆಂಪು ಸೀರೆ ಎಷ್ಟು ಅನುಚಿತವೆಂದು ಭೀಮ ರಾಯರಿಗೆ ಎಂದಿಗಿಂತ ಮಿಗಿಲಾದ ಕನಿಕರ ಹುಟ್ಟಿತು. ಅವರು ಮನಸ್ಸಿ ನಲ್ಲಿ ಮಾಡುತ್ತಿದ್ದ ನಿರ್ಧಾರಕ್ಕೆ ಅವಳ ಆ ನಿಲುವು, ಆ ನೋಟ, ಪ್ರಬಲವಾದ ಪುಷ್ಟಿಯನ್ನು ಕೊಟ್ಟವು. 'ನೀ ಅಂದಂಗ ಆಗಲಿ, ಸುಗುಣೀ. ಇಬ್ಬರೂ ಕೂಡೇ ನಾಳೆ ಹೊರಡೋಣ. ಬಾಬೂರಾಯರಿಗೆ ತಿಳಿಸಿಬಿಡತೀನಿ. ಸಾಮಾನು ಕಟ್ಟಿಡು. ನಸಗಿನಾಗ ಡಮಣಿಯೊಳಗೆ ಹೊರಡಬೇಕು.'

'ಈಗ ನನ್ನ ಜೀವ ಹೌರಗಾತು, ಕಾಕಾ. ಆದರ ನನ್ನ ಸಾಮಾನು-ಸಟ್ಟರು ಹೆಂಗ ಮಾಡಬೇಕು?'

'ಹೆಂಗೇನು? ಸಣ್ಣಪುಟ್ಟ ಸಾಮಾನು ಒಂದೂ ಇಡಬ್ಯಾಡ. ಈ ಟ್ರಂಕಿನಾಗ ಹಾಕಿ ತಗೊಂಡು ಬಾ. ಆ ಬೆಳ್ಳೀ ಸಾಮಾನು ಇವರೇ ತಗೊಂಡಿರ ಬೇಕು. ಈಗ ಪತ್ತೆ ಹಚ್ಚಿಗೊಡೋದಿಲ್ಲ, ಸುಮ್ಮನಿರು. ದೊಡ್ಡೂ ಈ ಮಂಚ, ಪೆಟಿಗಿ ಇವುಗಳ ಯಾದಿ ಮಾಡೋಣ. ಖೋಲಿಗೆ ಕೀಲಿ ಹಕ್ಕೊಂಡು ಹೋದರಾತು.'

ಹಾಗೇ ಮಾಡಬೇಕೆಂದು ಗೊತ್ತಾಯಿತು. ಸುಗುಣಾಬಾಯಿಯೂ ಭೀಮರಾಯರ ಕೂಡ ಹೊರಡುವಳೆಂದು ಬಾಬೂರಾಯರಿಗೆ ತಿಳಿಯಿತು. ಆಯಿತು ಉಪಾಯವಿಲ್ಲ ಎಂದುಬಿಟ್ಟರು. ಅವರು ಅಪೇಕ್ಷಿಸಿದ್ದೇ ಆಗಿರ ಬಹುದು. ಅಂತೂ ಅವರು ಉಪಚಾರೋಕ್ತಿಯ ಹೊರತು ಹೆಚ್ಚೇನೂ

ಜುಲುಮೆ ಮಾಡಲಿಲ್ಲ. ಆದರಿಂದ ಅವರ ಹೆಂಡತಿ, ತಾಯಿ ಮೊದಲಾದ ತಾರ ಕಂಬಗಳಿಂದ ಮನೆಯಲ್ಲಿ ಸುದ್ದಿ ಹಬ್ಬಿಕೊಂಡಿತು. ಹೋಗಬೇಡೆಂದು ಹೇಳುವ ಒಣಮಾತು, ಸಿಟ್ಟು-ಸಿಡುಕು ಇವುಗಳ ನಾಟಕವು ಸ್ವಲ್ಪಹೊತ್ತು ನಡೆದು ರಾತ್ರಿನಿದ್ದೆಯೂ ಕೊನೆಯ ಪರದೆಯನ್ನು ಕೆಡವಿತು. ಗೊತ್ತುಪಡಿಸಿ ದಂತೆ ಸೂರ್ಯ ಏಳುವುದರಲ್ಲಿಯೇ ಭೀಮರಾಯರು ಮಗಳ ಕೂಡ ಜಾಗಿರ ದಾರರ ಡಮಣಿಯಲ್ಲಿ ಕನಕಾಪುರವನ್ನು ದಾಟಿ ಒಂದೆರಡು ಮೈಲು ದೂರ ಹೋಗಿದ್ದರು. ಹಾದಿಯಲ್ಲಿ ಬಾಬೂರಾಯರ ಕೂಡ ತಾವು ನಡಿಸಿದ ಸಂವಾದ ವನ್ನು ಭೀಮರಾಯರು ಸುಗುಣಾಬಾಯಿಗೆ ವಿವರಿಸಿ ಹೇಳಿದರು. 'ಇನ್ನೇನು ಗತಿ!' ಎಂದು ಅವಳು ಹಲುಬಿದಳು. 'ನನ್ನ ಹತ್ತರ ಇದ್ದುಬಿಡು, ನಿನಗೆ ಯಾತರ ಚಿಂತೆ?' ಎಂದು ಅವರು ಸಮಾಧಾನ ಮಾಡಿದರು. ಅದೇ ಹೊತ್ತಿಗೆ ಅವರ ಲೋಕಾನುಭವದ ಅರ್ಕ ಇದ್ದಂಥ ಒಂದು ದಿವ್ಯ ವಿಚಾರವು ಅವರ ತಲೆಯಲ್ಲಿ ಹೊಳೆದುಹೋಯಿತು. ಸುಗುಣೆಗೆ ತಮ್ಮ ಮಗ ಅರವಿಂದನನ್ನು ದತ್ತಕಕೊಟ್ಟು ಅದೇ ಹೊಸದಾಗಿ ಜಾರಿಯಲ್ಲಿ ಬಂದ ನಿಯಮದ ಪ್ರಕಾರ ಜಾಗೀರಿಯಲ್ಲಿ ಯಾಕೆ ಒಂದು ಪಾಲನ್ನು ಪಡೆಯಬಾರದು? ದೊಡ್ಡ ಸಮಸ್ಯೆ ಯೊಂದು ಬಗೆಹರಿದಂತೆ ಅವರ ಮುಖವು ಅರಳಿತು. ಬಾಡಿದ ಸುಗುಣಾ ಬಾಯಿಯ ಮೊಗಕ್ಕೆ ಅದರ ಕಾರಣವು ಆಗಳೆ ತಿಳಿಯಲಿಲ್ಲ.

---

## ಪ್ರಕರಣ ೫.

ವಾಮಣ್ಣನು ಹತ್ತಿದ ಮೇಲಗಾಡಿಯು ಧಾರವಾಡ ಬಿಟ್ಟು ನಾಲ್ಕು ಹೆಜ್ಜೆ ಹೋಗಿ ಇಳಿಜಾರಿನಲ್ಲಿ ರಭಸದಿಂದ ಓಡಹತ್ತಿತು. ಸಾಹಸದ ಬೆನ್ನು ಹತ್ತಿ ಹೊರಟಿರುವ ವಾಮಣ್ಣನ ಎದೆಯೂ ಅಷ್ಟೇ ವೇಗದಿಂದ ಮಿಡಿಯು ತ್ತಿತ್ತು. ಅವನು ಕುಳಿತ ಡಬ್ಬಿಯೂ ದೊಡ್ಡದಾಗಿ ಕಿಕ್ಕಿರಿದು ತುಂಬಿದ್ದರೂ ಧಾರವಾಡ ಕಡೆಯ ಒಂದು ಕಿಡಿಕಿಯ ಸ್ಥಳವು ಅವನಿಗೆ ಸಿಕ್ಕಿತ್ತು. ಗಾಡಿಯು ಹಾವಿನಂತೆ ಸುತ್ತಿಕೊಂಡು ಹೊರಟಿರಲು ಕ್ಷಣಕ್ಷಣಕ್ಕೆ ದೂರ ಸರಿಯುತ್ತಿ ರುವ ತನ್ನ ಊರನ್ನು ಕಣ್ತುಂಬಿ ಅವನು ನೋಡಿದನು. ಧಾರವಾಡದ ಒಟ್ಟು ನೋಟವು ಈಗ ಅವನಿಗೆ ದೊರೆಯಿತು. ಹಸುರು ಹಾಸಿ, ಬೆಳಕನ್ನು ಹೊಚ್ಚಿ

ಕೊಂಡ ತಗ್ಗು ದಿನ್ನೆಯ ತವರೂರು ಎಂದರೆ ತನ್ನ ಧಾರವಾಡವೆಂದು ತನ್ನೊಳಗೆ ಅಂದುಕೊಂಡನು. ತಾನು ತಿರುಗಾಡಿದ ಹುಲ್ಲುಗದ್ದೆಗಳನ್ನೂ ತೋಟಗಳನ್ನೂ ಕಣ್ಣಿನಿಂದ ಗುರುತಿಸಿದನು. ಎತ್ತರ ಮೇಲೆ ತಲೆಯೆತ್ತಿ ನಿಂತ ತನ್ನ ಕಾಲೇಜು ಕಂಡಿತು. ಅಂಥ ಹವಣಾದ ಎತ್ತರದ ಮೇಲೆ ನಿಂತಿರುವ ಹರವಾದ ವಿದ್ಯಾಲಯವನ್ನು ಬೇರೆಲ್ಲಿಯೂ ಕಂಡಿಲ್ಲವೆಂದು ಅವನು ಅದೆಷ್ಟೋ ಸಲ ತನ್ನ ಮಿತ್ರರಿಗೆ ಹೇಳಿದ್ದನು. ಗಾಡಿಯಲ್ಲಿ ಕುಳಿತು ದೂರದಿಂದ ನಿಟ್ಟಿಸಿದಾಗಲೂ ಅದೇ ಮಾತು ಮತ್ತೆ ಅವನ ಅನುಭವಕ್ಕೆ ಬಂದಿತು. ಈ ಕಾಲೇಜಿನ ಕಟ್ಟಡವೆಂದರೆ ಉಚ್ಚ ವಿದ್ಯೆಯ ಉತ್ತಮ ಸಂಕೇತವೆಂದನು. ಕಾಲೇಜಿನ ಮೇಲಟ್ಟದಲ್ಲಿ ನಿಂತು ಬೇಕಾದಷ್ಟು ವಿಶಾಲವಾದ ಸುತ್ತುನೋಟವನ್ನು ನೋಡಬಹುದು. ಅದು ತುಂಬಾ ವಿವಿಧವಾದದ್ದು. ಒಂದು ಕಡೆ ದೇವಸೃಷ್ಟಿ, ಇನ್ನೊಂದು ಕಡೆ ಮನುಷ್ಯಸೃಷ್ಟಿ. ಎರಡರ ನಡುವೆ ಎತ್ತರದಲ್ಲಿ ನಿಂತ ವಿದ್ಯಾಲಯವು ಸಮತೂಕದ ಉಚ್ಚ ಸಂಸ್ಕೃತಿಯನ್ನು ತೋರುವುದಿಲ್ಲವೇ ?

ಈ ಭಾವನೆಯು ತೋರಿದ ಮರುಕ್ಷಣ ಕೆಣಕುವ ಬುದ್ಧಿಯು ಮುಂದಾಯಿತು. ಉಚ್ಚ ವಿದ್ಯಾಲಯವೆಂದು ಉಚ್ಚ ಸ್ಥಳದಲ್ಲಿ ಇದ್ದ ಮಾತ್ರಕ್ಕೆ ಕರೆಯಬೇಕೆ ? ಈ ಕಾಲೇಜಿನ ಸಂಸ್ಕೃತಿಯು ನಿಜವಾಗಿಯೂ ಉಚ್ಚವಾದದ್ದೇ ? ಇದಕ್ಕೆ ಕರ್ನಾಟಕ ಕಾಲೇಜ ಎಂಬ ಹೆಸರು ಯೋಗ್ಯವಾಗಿರುವುದೇ ? ಮೊದಲು ಇದು ಎಂ. ಎಸ್. ಎಂ. ರೇಲ್ವೆ ಕಂಪನಿಯ ಕೆಲಸದ ಮನೆ (ವರ್ಕಶಾಪ್) ಆಗಿತ್ತು. ಈಗ ಕಾಲೇಜಾದರೇನು, ಆ ಕಂಪನಿಯ ಹೆಸರಿನಲ್ಲಿ ಅಡಕವಾದ ದಕ್ಷಿಣಮಹಾರಾಷ್ಟ್ರವು ಇದರ ಪ್ರೇರಣೆಯಾಗಿದೆ ; ಇಲ್ಲಿಯ ಅನೇಕ ಅಧ್ಯಾಪಕರಿಗೆ ಹೆಚ್ಚಾಗಿ ಇದೊಂದು ಕೆಲಸದ ಮನೆಯೇ ಆಗಿಬಿಟ್ಟಿದೆ ! ಕನ್ನಡಕ್ಕೆ ಯಾವ ಸ್ಥಾನವಿದೆ ಇಲ್ಲಿ ? ಎಂದು ಮುಂತಾಗಿ ಯೋಚಿಸುತ್ತ ವಾಮಣ್ಣನು ತನ್ನೊಳಗೆ ತಪ್ತನಾದನು. ಒಂದು ಬಗೆಯ ನಿರಾಶೆಯು ತಲೆಮುಸುಕಿತು. [illegible]ಗಳೆ ಸಪ್ತಾಪುರದ ಕಡೆ ಬೀರಿದ ನೋಟವು ಕನ್ನಡ ಕೋಗಿಲೆಗಳ ನೆನಪು ಕೊಟ್ಟಿತು. ಅವರು ತಮ್ಮ ತೋಟದಲ್ಲಿ ಅಲೆಯುತ್ತಿರುವುದನ್ನೂ ದುಡಿಯುತ್ತಲೆ ಕಾವ್ಯ ನುಡಿಯುತ್ತಿರುವುದನ್ನೂ ಕಲ್ಪಿಸಿದನು. ಮತ್ತೆ ಮನಸ್ಸಿಗೆ ಉಲ್ಲಾಸವನ್ನು ಉಗ್ಗಿದಂತಾಯಿತು. ಕನ್ನಡಕ್ಕೆ ಉಜ್ವಲ

ಭವಿಷ್ಯವಿದೆ, ಕನ್ನಡ ಕೋಗಿಲೆಗಳು ಮುಂದೆ ಬರುವ ಸುಗ್ಗಿಯನ್ನು ಸಾರುತ್ತಿವೆ ಎಂದುಕೊಂಡು ತನ್ನಲ್ಲಿ ಹಿಗ್ಗಿದನು. ಗಾಡಿ ಮುಂದರಿಯಿತು. ಕಾಲೇಜೂ ಸುತ್ತಲಿನ ನೋಟವೂ ಕಣ್ಮರೆಯಾದವು.

ಗಾಡಿಯು ಮುಂದೆ ಹೋದಂತೆ ಕಣ್ಣು ಸೆರೆಹಿಡಿಯುವ ಮಲೆನಾಡ ಸಿರಿಯು ಏರಿಏರಿ ಬರುತ್ತಿತ್ತು. ಅದನ್ನು ನೋಡುತ್ತಲೆ ನಮ್ಮ ವಾಮಣ್ಣನು ತನ್ನ ಡಬ್ಬಿಯೊಳಗಿನ ಜೊತೆಗಾರರನ್ನು ಸಹಜ ಕುತೂಹಲದಿಂದ ಪರೀಕ್ಷಿಸಿದನು. ತನ್ನ ಇದಿರಿನಲ್ಲಿ ಆಚೆಯ ಕಿಡಿಕಿಗೆ ಇಬ್ಬರು ತರುಣ ದಂಪತಿಗಳು ಕೂತಿರುವರು; ಒಂದು ೩-೪ ವರುಷದ ಹೆಣ್ಣುಮಗು ಅವರೊಡನಿದೆ. ಅವರಾಡುವ ಮಾತಿನ ಮೇಲಿಂದ ಅವರು ಸಾರಸ್ವತರಿರಬಹುದೆಂದು ಊಹಿಸಿದನು. ರೂಪ, ವೇಷ ಎಲ್ಲದರಲ್ಲಿಯೂ ಬಹಳ ಅಚ್ಚುಕಟ್ಟಾದ ಕುಟುಂಬವೆಂಬಂತೆ ತೋರಿತು. ದಂಪತಿಗಳು ಇಲ್ಲದ ಸಂಕೋಚವಿಲ್ಲದೆ ಪ್ರೇಮದಿಂದ ಹರಟುತ್ತಿರುವರು; ಆ ಮಗು ತನ್ನ ಹುಡುಗಾಟದಿಂದ ಅವರ ಮುಖವನ್ನು ನಗೆಯಿಂದ ಅರಳಿಸುತ್ತಿರುವುದು. ಅವರನ್ನು ನೋಡಿದಂತೆ ವಾಮಣ್ಣನಿಗೆ ತನ್ನ ಮನೆಯ ನೆನಪು ತೇಲಿಬರುತ್ತಿತ್ತು. ತನ್ನ ಪದ್ಮೆಯೂ ತಾನೂ ಹೀಗೇ ಒಂದು ದಿನ ಬಾಳಬಹುದೇ ಎಂಬ ಪ್ರಶ್ನೆಯು ಎದೆಯಂತರಾಳದಲ್ಲಿ ಹುಟ್ಟಿ ಕೆಣಕಿತು. ಪದ್ದಕ್ಕನ ಕೂಡ ಕಳೆದ ಹಗಲು-ರಾತ್ರಿಗಳು ಚಲನಚಿತ್ರದಂತೆ ಸರಿದವು. ಆಶೆಗಿಂತ ನಿರಾಶೆಯೇ ಹೆಚ್ಚಾಗಿ ತಲೆದೋರಿತು; ಹೊಟ್ಟೆಯಲ್ಲಿ ಒಂದು ಕ್ಷಣ ಹುಚ್ಚು ಸಂಕಟವಾಯಿತು. ಆದರೂ ಅದಕ್ಕೆ ಬಹಳ ಅವಕಾಶ ಕೊಡದೆ ಹೊರನೋಟದಲ್ಲಿ ಮಗ್ನನಾದನು. ತಾನು ಕಂಡ ಆ ದಂಪತಿಗಳು ಇಷ್ಟರಲ್ಲಿ ಓದುತ್ತ ಕುಳಿತಿದ್ದರು; ಗಂಡನ ಕೈಯಲ್ಲಿ ಇಂಗ್ಲಿಶ್ ಪತ್ರಿಕೆಯೊಂದು, ಹೆಂಡತಿಯ ಕೈಯಲ್ಲಿ ಮರಾಠೀ ಕಾದಂಬರಿ. ಇವರು ತಮ್ಮ ಆಯುಷ್ಯವನ್ನೆಲ್ಲ ಹುಬ್ಬಳ್ಳಿಯಲ್ಲಿ ಕಳೆಯುತ್ತಿರುವರೆಂದೂ ಈಗ ಯಾರದೋ ಭೆಟ್ಟಿಗಾಗಿ ಪುಣೆಕ್ಕೆ ಹೊರಟಿರುವರೆಂದೂ ಇವರ ಮಾತಿನಿಂದ ಸುಮಾರಾಗಿ ತಿಳಿಯುವಂತಿತ್ತು. ಆದರೆ ಇವರು ಓದುವ ಪುಸ್ತಕಗಳನ್ನು ಮಾತ್ರ ನೋಡಿದರೆ ಇವರು ಪುಣೆ-ಮುಂಬೈ ಕಡೆಯವರೇ ಎಂದು ಯಾರಾದರೂ ಭಾವಿಸಿದರೆ ತಪ್ಪೇನು? ಇಬ್ಬರೂ ಕಲಿತವರಾಗಿದ್ದು ನಡುನಡುವೆ ಇಂಗ್ಲಿಶ್ ಬೆರಸುತ್ತ ಕಥೆ, ನಾಟಕ ಇತ್ಯಾದಿಗಳ ಬಗ್ಗೆ ಚರ್ಚೆ ಮಾಡುತ್ತಿದ್ದರು.

ಅದರಲ್ಲಿ ಕನ್ನಡದ ಗಂಧವೇ ಇಲ್ಲ. ಇವರ ಪಾಲಿಗೆ ಕನ್ನಡ ನಿರ್ಗಂಧ ಕುಸುಮವೇ ಎಂದು ರಾಮಣ್ಣ ಉಸುರ್ಗರೆದನು.

ಡಬ್ಬಿಯಲ್ಲಿ ಇದಲ್ಲದೆ ಗೋವಾಜನರು, ಮಾರವಾಡಿಗಳು, ಮಲಬಾರಿನ ಮಾಪಿಳ್ಳೆ ವ್ಯಾಪಾರಿಗಳು ಹೆಚ್ಚಾಗಿದ್ದರು. ಕೆಲವು ಹಳ್ಳಿಯ ಜನರು ನಡುವಿನ ಸ್ಟೇಶನ್ನುಗಳಲ್ಲಿ ಹತ್ತಿದರು. ಇಷ್ಟರಲ್ಲಿ ಉಳಿದವರು ಪ್ರಶಸ್ತವಾಗಿ ಹಾಸಿ ಕೊಂಡು ಕುಳಿತಿದ್ದರಿಂದ ಈ ಹಳ್ಳಿಗರಿಗೆ ಕೂಡಲಿಕ್ಕೆ ಸ್ಥಳವಿರಲಿಲ್ಲ. ಹಾಗೆಂದು ತಕರಾರು ಮಾಡಿ ಅವರೇನು ಅಧಿಕಾರ ನಡೆಯಿಸುವರೇ? ಅಚ್ಚಗನ್ನಡಿ ಗರಿಗೆ ಒಪ್ಪುವಂತೆ ಸಾಲಾಗಿ ಸಂತೋಷದಿಂದ ಸೀಟಿನ ಕೆಳಗಡೆ ಕೂತು ಕೊಂಡರು; ಮಳೆಬೆಳೆಯ ಹರಟೆಹೊಡೆಯುತ್ತ, ತಂಬಾಕ ಸೇದುತ್ತ ಸಾಗಿ ದರು. ಅದನ್ನೆಲ್ಲ ನೋಡಿ ಒಂದು ಹುಚ್ಚುನಗೆ, ನೋವು ಎರಡೂ ರಾಮಣ್ಣ ನಲ್ಲಿ ಕಾಲಿಕ್ಕಿದವು. ಒಬ್ಬಿಬ್ಬರನ್ನು ಕರೆದು ತನ್ನ ಹತ್ತಿರ ಕೂಡಿಸಿಕೊಳ್ಳ ಬೇಕೆಂದನು, ಅವರೇನು ಬರಲಿಲ್ಲ. ಕೆಲಹೊತ್ತಿಗೆ ರಾಮಣ್ಣನಿಗೆ ಒಂದು ವಿನೋದದ ವಿಚಾರ ಬಂದಿತು. ಕರ್ನಾಟಕದಲ್ಲಿ ಈ ಗಾಡಿ ಈಗ ಹಾಯ್ದು ನಡೆದಿದೆ. ಇದನ್ನು ಚಟ್ಟನೆ ನಿಲ್ಲಿಸಿ ಯಾರಾದರೂ ಖಾನೇಸುಮಾರಿಯನ್ನು ಮಾಡಿದರೆ ಏನು ಹೊರಡಬಹುದು? ಎಷ್ಟು ಜನರು ನಾವು ಕರ್ನಾಟಕದವ ರೆಂದು ಹೇಳುವರು? ಹೇಳುವ ತಿಳಿವಳಿಕೆಯಿದ್ದವರು ಸಾರಸ್ವತರೆಂದೂ ಮಾರವಾಡಿಗಳೆಂದೂ ಮಾಪಿಳ್ಳೆಗಳೆಂದೂ ಬೇರೆಬೇರೆ ಹೇಳುವರು; ತಿಳಿವಳಿಕೆ ಇಲ್ಲದ ಹಳ್ಳಿಯ ಬಂಧುಗಳು ಬೆಪ್ಪನಾಗಿ ಕೂಡುವರು. ಎಂದ ಮೇಲೆ ರೇಲ್ವೆಯವರು ಮದ್ರಾಸ ಮತ್ತು ಸದರ್ನಮರಾಠಾ ಎಂಬ ಕಿಚಡೀ ಹೆಸ ರನ್ನು ತಮ್ಮ ಕಂಪನಿಗೆ ಇಟ್ಟಿದ್ದರೆ ತಪ್ಪೇನು? ರಾಮಣ್ಣನು ಒಳಗೊಳಗೆ ನಕ್ಕನು, ನಗೆಯನ್ನು ಬಿಗಿಹಿಡಿಯಲಾರದೆ ಕೆಲವು ನಿಮಿಷ ಹೊರಗೆ ನೋಡುತ್ತ ಕುಳಿತನು.

ಗಾಡಿಯು ಸಂಜೆಯ ಹೊತ್ತಿಗೆ ಬೆಳಗಾಂವಿಯಿಂದ ಮುಂದೋಟ ಬಿಟ್ಟಿತು. ರಾಮಣ್ಣನ ಡಬ್ಬಿಯಲ್ಲಿ ಹೊಸ ಜೋಡಿ, ಹೊಸ ಮುಖ ಮೂಡಿ ದ್ದವು. ಕೆಲವು ಹಳೆಯವಿದ್ದವು. ಹಲವು ಹೋಗಿದ್ದವು. ಜೀವನದ ಅನಂತ ಪ್ರವಾಹಕ್ಕೂ ರೇಲ್ವೆ ಗಾಡಿಗೂ ಎಷ್ಟು ಹೋಲಿಕೆ! ಅವನ ಹೊಸ ನಿರೀ ಕ್ಷಣೆಯಲ್ಲಿ ಹೊಸ ವೈಚಿತ್ರ್ಯಗಳು ಕಂಡುಬಂದವು. ಮರಾಠಿ-ಕನ್ನಡ

ಎರಡನ್ನೂ ಬೇಕಾದಾಗ ಅಷ್ಟೇ ಸಾಮರ್ಥ್ಯದಿಂದ ಮಾತಾಡುತ್ತಿರುವ ಒಂದು ಕುಟುಂಬವು ಕಂಡಿತು. ತಂದೆಯೊಡನೆ ಕನ್ನಡ, ತಾಯಿಯ ಕೂಡ ಮರಾಠಿ ಎಂದು ಒಪ್ಪಂದ ಮಾಡಿಕೊಂಡಂತೆ ಮಾತಾಡುವ ಚಿಕ್ಕಮಕ್ಕಳನ್ನು ಕರೆದು ಕೊಂಡು ನಡೆದಿರುವ ದಾಂಪತ್ಯವೊಂದು ಕಡೆ ಇದ್ದಿತು. ಸಂಪೂರ್ಣ ಮರಾಟಿಗ ರಾದ ಒಬ್ಬ ಸಭ್ಯಗೃಹಸ್ಥರು ಮರಾಠಿಯು ಎಲ್ಲರಿಗೂ ತಿಳಿಯುತ್ತಲೇ ಇರ ಬೇಕೆಂದು ರಾಮಣ್ಣನನ್ನು ಮರಾಠಿಯಲ್ಲಿಯೇ ಮಾತನಾಡಿಸಿದರು. ಮುಂದಿನ ಸ್ಟೇಶನ್ನು ಬಂದಿತು, ರಾಮಣ್ಣನ ಒಳಿಯ ಸ್ಥಳ ತೆರವಾಯಿತು. ನಡುವೆ ಕೂತಿದ್ದ ಒಬ್ಬ ಮಹನೀಯರು ರಾಮಣ್ಣನ ಹತ್ತಿರ ಬಂದರು. ಮೊದಲು ಬಾಯಲ್ಲಿ ತುಂಬಿದ ತಂಬಾಕದಿಂದ ಹೊರಗೆ ತಣಿಯನ್ನು ಹಾಕಿದರು. ಕೂಡಲೆ ಮಾತಿನ ಚಕ್ರ ತಿರುಗಹತ್ತಿತು. 'ಏನು ರಾಯರ, ಯಾವ ಠಿಕಾಣಿಕ್ಕ ಹೊಂಟೀರಿ? ಪುಣೆ-ಮುಂಬೈಗೇನು?' ಎಂದು ಅತಿಪರಿಚಿತರಂತೆ ಅವರು ತನ್ನನ್ನು ಮಾತನಾಡಿಸಿದ್ದು ನೋಡಿ ರಾಮಣ್ಣನಿಗೆ ಅಚ್ಚರಿಯೇ ಆಯಿತು. ಆದರೂ ಒಬ್ಬನೇ ಕುಳಿತು ಬೇಸರ ಬಂದಿದ್ದರಿಂದ ಅವರ ಕೂಡ ಒಂದಿಷ್ಟು ಮಾತಾಡೋಣ ಎಂದುಕೊಂಡು 'ಹೌದು, ಮುಂಬಯಿಗೆ ಹೊರಟೇನಿ' ಎಂದು ಉತ್ತರಕೊಟ್ಟನು. ಆಯಿತು, ಮಹಾಶಯರ ನಾಲಿಗೆಗೆ ಪುಟ ಕೊಟ್ಟಂತಾಯಿತು. 'ಮುಂಬೈಗೆ? ಒಳಿವಾಸಿದೆ ಬಿಡರಿ. ಪುಷ್ಕಳ ದೂರ ಮುಂಬೈ ಅಂದರ. ಏನು ಶಹಾರ್ರೀ ಅದು! ದಹಾಲಾಖ ಮಂದಿ ಇರತಾರ. ನಾವೂ ಹಿಂದಕ್ಕೊಮ್ಮೆ ಮುಂಬೈ ನೋಡೀವಿ ಪಸರೆಪ. ಹಾಯಕೋರ್ಟಿ ನಾಗ ನಮ್ಮದೊಂದು ಅಪೀಲು ಮಾಡೋದಿತ್ತರೆಪ. ವಕೀಲರನ್ನು ತಗೊಂಡು ಹೋಗಿದೇವು. ಆ ಬ್ಯಾರಿಸ್ಟರ ಮಂದಿ ಏಟೇನು ಅರ್ಭಾಟೇನು? ಅವರ ಮನಿಗೆ ಎಷ್ಟು ಹೇಲಪಾಟಿ ಹಾಕಬೇಕು? ಛೇ ಛೇ ಅಗದೀ ಕಂಟಾಳ ಬಂದು ಹೋತು.' ರಾಮಣ್ಣನು ನಗೆ ತಡೆಯಲಾರದೆ ತುಸು ನಕ್ಕುಬಿಟ್ಟನು. ಆ ಗೃಹಸ್ಥರಿಗೆ ಅದರ ಅರ್ಥವೇ ಬೇರೆಯಾಯಿತು. 'ಹಿರೇ ನೋಡಿರಿ. ಬ್ಯಾರಿಸ್ಟರ ಅಂದರ ಮೋಜಶೀರ ಮಂದಿ. ಎಲ್ಲಾ ಇರೋಣಾಕಿ, ಬಿಳೀ ಸಾಹೇಬರ ಹಂಗ ಅವರದು. ಒಬ್ಬರ ಠಿಕಾಣೆದಾಗ ಹೋಗಿಧೇವು, ಅವರು ಮನ್ಯಾಗ ಇದ್ದಿಲ್ಲ. ನಾವು ಪರತ ಹೊಂಡೋದರಾಗ ಅವರ ಹೆಣ್ತಿ ಗಂಟುಬಿದ್ದರು. ಆಹು, ಅವರ್ನ ಗಾಠಾಸಿ ಬಂದೇವು.'

ವಾಮಣ್ಣನು ಹುಚ್ಚೆದ್ದು ನಕ್ಕನು. ಮಾತಿನ ವಿಷಯವನ್ನು ಬದಲಿಸ ಬೇಕೆಂದು 'ನೀವು ಈಗ ಎಲ್ಲಿಗೆ ಹೊರಟೀರಿ?' ಎಂದು ಕೇಳಿದನು. 'ಇಲ್ಲೇ ಅಥಣಿಗೆ. ಶೀಡಬಾಳಕ್ಕ ಉತರಾಯಿಸಿ ಹೋಗಬೇಕು' ಎಂದು ಮುಂತಾಗಿ ಆ ವಿಷಯವನ್ನೆತ್ತಿ ತಮ್ಮ ವಿಶಿಷ್ಟ ಶೈಲಿಯಲ್ಲಿ ಹೊಟ್ಟೆಕುಟ್ಟಿದರು. ತಾವು ಬೆಳಗಾಂವಿಗೆ ಹೋದ ಕಾರಣವನ್ನು ತಾವಾಗಿ ಕೇವಲ ಆಪ್ತೇಷ್ಟರಿಗೆ ಹೇಳು ವಂತೆ ವಿವರಿಸಿದರು. ನಡುನಡುವೆ ಅವರ ನಾಲಿಗೆಗೆ ವಿಶ್ರಾಂತಿ ಸಿಗಲೆಂದೇ ವಿಧಿಯು ಅವರಿಗೆ ತಂಬಾಕು ಹಾಕುವ ಚಟವನ್ನು ಕಲಿಸಿಕೊಟ್ಟಿರಬೇಕು! ಬಾಯಲ್ಲಿ ತುಂಬಿದ ಕೆಂಪು ರಸವನ್ನು ಹೊರಗೆ ಉಗುಳಿ ಹೇಳಿದರು. 'ಏನು ರಾಯರ ಬೆಳಗಾಂವ್ಯಾಗ ಚಳವಳಿ ಆಗದೀ ಜೋರದ ನೋಡರಿ. ಎಲ್ಲಾಕಡೆ ಗಾಂಧೀಟೋಪಿ ದೇಖಾವಾ. ಆಠವಡೇದಾಗ ಮೂರು ನಾಕು ದಿವಸ ಸಭಾನೇ ಸಭಾ. ಒಂದು ಸಭಾದಾಗ ದೊಡ್ಡ ದಣಗಿ ಆತು. ಚಳವಳಿ ಪೈಕಿ ಯಾವನೋ ಮಾತಾಡಲಿಕ್ಕೆ ಎದ್ದರ, ಕನಡ ಅಂತ ತುಸಾ ಮಂದಿ, ಮರಾಠಿ ಅಂತ ತುಸಾ ಮಂದಿ ಓರಡಾಸೇ ಓರಡಾಸಿದರು. ಶೇವಟೀ ಸಭಾನೇ ಆಗ ಲಿಲ್ಲ. ರಾಯರ, ನಾ ಹೇಳಲೇನು, ಇದ್ಯಾಕರೆಪ ಈ ವೇಡ ನಮ್ಮ ಮಂದಿಗೆ? ಕನಡೇನು ಮರಾಠೇನು? ಎಲ್ಲಾನು ಭಾಷಾನ. ಹಂಗ ನೋಡಿದರ, ಮರಾ ಠೀನ ಠೀಕ ನೋಡರಿ. ಅದರಾಗ ಕೇಸರಿ ಅದ, ಗೀತಾರಹಸ್ಯ ಅದ. ಮರಾಠೀ ಅಂದರ ಕಿವೀಗೆ ಇಂಪು ನೋಡರಿ.'

'ಹಿಂಗೇನು? ಇಂಪು ಯಾವ ಭಾಷೆಯ ಶಬ್ದ ಗೊತ್ತದೆ ಏನು ರಾಯರ?' ವಾಮಣ್ಣ ಕೇಳಿದನು.

'ಇದ್ದೀತು ಬಿಡರಿ–ಪಾರ್ಶೀ–ಉರ್ದು.

ವಾಮಣ್ಣ ಖೊಳ್ಳೆಂದು ನಕ್ಕು ಹೇಳಿದನು. 'ಅಲ್ಲ, ರಾಯರ, ಇಂಪು ಕನ್ನಡ, ಕನ್ನಡ ಇಂಪು! ಹೋಗಲಿ, ನಿಮ್ಮ ಮಾತು ಸಾಗನರಿ.' ಹೀಗೆ ಜೊಳ್ಳು ಹರಟಿಕೊಚ್ಚಿ ರಾಯರು ತಮ್ಮ ಸ್ಟೇಶನ್ನಿಗೆ ಇಳಿದು ಹೋದರು. ಅವರು ಹೋದ ಮೇಲೆ ವಾಮಣ್ಣನಲ್ಲಿ ಎಷ್ಟೋ ವಿಚಾರತರಂಗಗಳೆದ್ದವು. ಕೊನೆಗೆ, ಒಡೆದುಚೂರಾದ ಕನ್ನಡದ ಕನ್ನಡಿಯಲ್ಲಿ ಎಂಥ ವಿಕೃತ ಚಿತ್ರಗಳು ಮೂಡುತ್ತಿವೆ ಎಂಬ ಭಾವವು ನುಗ್ಗಿಬಂದು ಕಣ್ಣೀರಿನಿಂದ ನೋಟವನ್ನು ಮಂಜುಗೊಳಿಸಿತು.

ಮುಂದೆ ರಾತ್ರಿಯಾಗುತ್ತ ಹೋದಂತೆ ಗಾಡಿಯು ಕನ್ನಡನಾಡಿನಿಂದ ದೂರಾಗುತ್ತ ಹೊರಟಿತು. ಕನ್ನಡದ ಸೊಲ್ಲು ಅಪರೂಪವಾಯಿತು. ಬೆಳಿಗ್ಗೆ ಪುಣೆ ಸ್ಟೇಶನ್ನು ಬಂದಿತು. ಒಂದು ಭಾಷೆಯು ತಲೆಯೆತ್ತಿ ನಿಂತ ಬಗೆಗು, ಬೆಳೆಯುತ್ತಿರುವ ಜನಜೀವನ ಎಲ್ಲವನ್ನೂ ಸ್ಟೇಶನ್ನಿನ ಮೇಲೆ ಕೂಡ ವಾಮಣ್ಣನು ಕಂಡನು. ಅವನಿಗೆ ಹಿಗ್ಗಾಯಿತು. ಕನ್ನಡವೂ ಹೀಗಾಗಲಾರದೇ ಎಂದುಕೊಂಡನು. 'ಕಾರಣಪುರುಷ' ಹಾಡು ನಾಲಿಗೆಯ ಮೇಲೆ ನಲಿದಾಡಿತು. ಮಧ್ಯಾಹ್ನ ಹನ್ನೊಂದು ಗಂಟೆಗೆ ಅತಿವೇಗದ ಗಾಡಿಯಲ್ಲಿ ತೂರಿಬಿಟ್ಟಂತೆ ವಾಮಣ್ಣನು ಮುಂಬೈ ಮುಟ್ಟಿದನು.

ಮುಂಬಯಿಯು ವಾಮಣ್ಣನಿಗೆ ತೀರ ಹೊಸದಲ್ಲ. ಬಿ. ಎ. ಪರೀಕ್ಷೆಗೆಂದು ಮೂರು ವರ್ಷಗಳ ಹಿಂದೆ ಪುಣೇಕ್ಕೆ ಬಂದಾಗ ಕನ್ನಡದ ಓರಲ್ ಪರೀಕ್ಷೆಗಾಗಿ ಬಂದರ್ಧದಿವಸ ಅವನು ಮುಂಬಯಿಗೆ ಬಂದು ಹೋಗಿದ್ದನು. ಆದರೆ ಆಗ ಅವನ ಜೊತೆಯಲ್ಲಿ ಅನೇಕ ಮಿತ್ರರಿದ್ದರು. ಒಬ್ಬನೇ ಆಗ ಮುಂಬಯಿಯ ಮಾಯಾಬಜಾರವನ್ನು ಇದಿರಿಸುವ ಪ್ರಸಂಗ ಬಂದುದು ಅವನಿಗೆ ಇದೇ ಮೊದಲನೆಯ ಸಾರೆ; ಅದೂ ನಿಶ್ಚಿತವಾದ ಗುರಿಸಿರಿಯಿಲ್ಲದೆ ಹೊರಟ ಸಾಹಸಕ್ಕಾಗಿ. ಮುಂಬಯಿಯು ಸನಿಯಕ್ಕೆ ಬಂದಂತೆ ಎಲ್ಲಿ ಇಳಿದುಕೊಳ್ಳಬೇಕೆಂಬ ಯೋಜನೆ ಪ್ರಬಲವಾಯಿತು. ಹಿಂದೆ ಗೆಳೆಯರೊಡನೆ ತಾನು ಇಳಿದು ಊಟಮಾಡಿದ ವೆಲ್‌ಕಂ ಹಾಟೆಲ್ಲು ಲಕ್ಷ್ಯಕ್ಕೆ ಬಂದಿತು. ಆದರೆ ದಿನವೊಂದಕ್ಕೆ ಕನಿಷ್ಟ ೧॥ ರೂಪಾಯಿಯನ್ನು ಕೊಟ್ಟು ಉದ್ಯೋಗಶೋಧದಲ್ಲಿ ಇದ್ದ ಬಿದ್ದ ಸಂಗ್ರಹವನ್ನು ಸವೆಯಿಸಿಬಿಟ್ಟರೆ ಗತಿಯೇನು ಎಂಬ ಭಯವು ಅವನನ್ನು ಮುತ್ತಿತು. ಅವನ ಆಪ್ತರಾರೂ ಅಲ್ಲಿಲ್ಲ. ಇದ್ದವರೊಬ್ಬರೆಂದರೆ ಅವನ ಕೇವಲ ಗುರುಗಳಾದ ಪ್ರೊಫೆಸರ ವೈಶಂಪಾಯನರು. ಅವರ ನಿವಾಸವು ಇವನಿಗೆ ಎಳ್ಳಷ್ಟೂ ಗೊತ್ತಿಲ್ಲ. ಪ್ರಶ್ನೆ ಬಗೆಹರಿಯದೆ ಅವನು ಕಿಡಿಕಿಯ ಹೊರಗಡೆ ಹಣಕುತ್ತಲಿದ್ದನು. ಖಡ್‌ಖಡೆಂದು ಗಾಡಿಯು ಮುನ್ನೋಗುತ್ತಿತ್ತು. ಮೂರು ನಾಲ್ಕು ಅಂತಸ್ತಿನ ಅಸಂಖ್ಯ ಮನೆಗಳು ಎರಡೂ ಬದಿಗೆ ಸರ-ಸರನೆ ಸರಿಯುತ್ತಿದ್ದವು. ಕಂಡಲ್ಲಿ ಹಿಂಡುಗಟ್ಟಿದ ಜನವು ಸುಳಿದಾಡುತ್ತಿತ್ತು. ಈ ಮಹಾಸಂತೆಯಲ್ಲಿ ತಾನು ಒಂದು ಇರುವೆಯಂತೆ ಜಬ್ಬಿಹೋಗಬಹುದೇ ಎಂಬ ಡವಡವಿಕೆಯು ಎದೆಯ ಹಾರಾಟವನ್ನು

ಹೆಚ್ಚಿಸಿತು. ತಾನು ಇಳಿಯುವ ಬಗ್ಗೆ ಏನಾದರೊಂದು ನಿರ್ಣಯಕ್ಕೆ ಬರುವ ವರೆಗೆ ಗಾಡಿಯು ಇನ್ನಿಷ್ಟು ದೂರ ಓಡಲಿ ಎಂದು ಅವನು ಬಯಸುತ್ತಿರು ವಾಗ ಮುಂಬಯಿಯ ಕೊನೆಯ ಥಾಜೀಗಟ್ಟೆಯಾದ ವ್ಹಿ. ಟಿ. ಸ್ಟೇಶನ್ನು ಬಂದಿತು; ಗಾಡಿಯು ನಿಂತಿತು. ವಾಮಣ್ಣನು ಇಳಿಯಲೇಬೇಕಾಯಿತು. ಕೂಲಿಯೊಬ್ಬನು ಇವನನ್ನು ಕೇಳದೆ ಇವನ ಸಾಮಾನುಗಳನ್ನು ತನ್ನ ಕೈವಶ ಮಾಡಿಕೊಂಡಿದ್ದನು. ತುತ್ತಿನ ಚೀಲದ ಆತುರವಷ್ಟು! ಕೂಲಿಯವನ ಬೆನ್ನು ಹತ್ತಿ ನಾಲ್ಕೆಂಟು ಹೆಜ್ಜೆ ನಡೆದ ಮೇಲೆ 'ವೆಲ್‌ಕಂ' ಹಾಟೆಲ್ಲಿನ ಪ್ರಚಾರಕನು ತನ್ನ ಕಾರ್ಡು ಕೊಟ್ಟು ಮನವೊಲಿಸಲು ಬಂದನು. ಬೇರೆಡೆ ಹೋಗುವ ವಿಚಾರವಿದ್ದಾಗ ಪ್ರಚಾರದ ಅಗತ್ಯವಿರಬೇಕು. ಹಾಗೆ ಅಗತ್ಯ ಬೀಳಲೇ ಇಲ್ಲ. ಮೊದಲು ಒಂದು ಕಡೆ ಹೋಗಿ ಕಾಲೂರಿ ಮುಂದಿನದನ್ನು ಬಗೆಯ ಬಹುದೆಂದು ವಾಮಣ್ಣನು ಅದೇ ಹಾಟೆಲ್ಲಿಗೆ ಸಾಗಿದನು. ಅದು ಸ್ಟೇಶನ್ನಿಗೆ ತೀರ ಸಮೀಪವಾಗಿದ್ದರಿಂದ ವಿಕ್ಟೋರಿಯಾ ಗಾಡಿಯು ಅವಶ್ಯ ಕಾಣಲಿಲ್ಲ. ಹಾಗೇ ನಡೆದುಹೋಗಿ ಹಾಟೆಲ್ಲಿನಲ್ಲಿ ಸ್ನಾನ-ಊಟಗಳನ್ನು ತೀರಿಸಿ ವಿಶ್ರಾಂತಿಗೆಂದು ಅಡ್ಡಾದನು.

ಪ್ರವಾಸದ ದಣುವಿನ ಮೂಲಕ ವಿಶ್ರಾಂತಿಯು ದೀರ್ಘನಿದ್ರೆಯೇ ಆಯಿತು. ವಾಮಣ್ಣನು ಏಳುವುದರಲ್ಲಿ ನಾಲ್ಕು ಬಡಿದುಹೋಗಿತ್ತು. ಎದ್ದು ಮೋರೆ ತೊಳೆದು ಚಹಾ ತಗೊಂಡನು. ಹಾಟೆಲ್ಲಿನಲ್ಲಿ ಕನ್ನಡ ತಿಳಿಯುವ ದೆಂದು ಅವನಿಗೆ ಗೊತ್ತಿತ್ತು. ಅವರಿಗೆ ಮುಂಬಯಿ ಕನ್ನಡಿಗರ ಪರಿಚಯವೂ ಇರಬಹುದೆಂಬ ಭ್ರಮೆಯಿಂದ ತನ್ನ ಪ್ರೊಫೆಸರರ ವಿಷಯ ಅರಿಕೆಯಿದೆಯೇ ನೆಂದು ಹೋಗಿ ಕೇಳಿದನು. ತಮ್ಮ ಹಾಟೆಲ್ಲಿನ ಜಗತ್ತಿನ ಹೊರಗೆ ಇನ್ನೊ ಬ್ಬರನ್ನರಿಯದ ಶುದ್ಧ ವ್ಯವಹಾರಿಗಳು ಅಲ್ಲಿಯವರು. ತಮಗೆ ಆ ಪ್ರೊಫೆಸರರ ಪರಿಚಯವಿಲ್ಲವೆಂದರು. ಆದರೂ ತಮ್ಮ ಹೊಸ ಅತಿಥಿಗಳನ್ನು ನಿರಾಶೆ ಗೊಳಿಸಬಾರದೆಂದು ಅಲ್ಲಿ ನೋಡಿರಿ, ಇಲ್ಲಿ ನೋಡಿರಿ, ಎಂದು ದಿಕ್ಕು ತಪ್ಪಿ ಸುವ ವಿಳಾಸಗಳನ್ನು ಹೇಳಿದರು. ವಾಮಣ್ಣನು ಅದನ್ನೇನು ಅಷ್ಟು ನಂಬದೆ ಬೇರೆ ಬಗೆಯಿಂದ ಶೋಧಮಾಡಬೇಕೆಂದು ಹೊರಬಿದ್ದನು. ಅದು ಹೇಗೆ ಎಂಬುದು ತಿಳಿಯಲೊಲ್ಲದು. ವಿಚಾರಮಾಡುತ್ತ ಬೀದಿಯಲ್ಲಿ ಹೋಗುವುದು ಸಾಧ್ಯವಿಲ್ಲ. ಎರಡೂ ಕಡೆಯ ಮೋಟರ ಕೂಗು, ಟ್ರ್ಯಾಮಿನ ಠಣಠಣಾಟ.

ಜನರ ಗಟ್ಟಣೆ ಎಲ್ಲವೂ ಕೀಲು ತಪ್ಪಿದ ಯಂತ್ರದಂತೆ ಅವನನ್ನು ಅತ್ತಿತ್ತ ಹೊಯ್ದಾಡಿಸುತ್ತಿದ್ದವು. ಒಂದು ಬದಿಯಿಂದ ಇನ್ನೊಂದಕ್ಕೆ ಹೋಗುವುದೆಂದರೆ ತುಂಬಿದ ಹೊಳೆ ದಾಟುವುದಕ್ಕಿಂತ ಕಷ್ಟವೆಂದು ಅರಿತನು. ಯಾವ ವಾಹನ ಯಾವ ಕಡೆಯಿಂದ ಬರುವುದೆಂಬುದು ಗೊತ್ತಾಗದೆ ಹುಚ್ಚಾಗಿ ಒಮ್ಮೊಮ್ಮೆ ನಡುವೆ ನಿಲ್ಲುತ್ತಿದ್ದನು. ಒಂದು ಮೋಟರ ಗಾಡಿಯು ಅವನ ಮೈಮೇಲೆ ಹಾಯುವಷ್ಟು ರಭಸದಿಂದ ಬಂದು ಗಕ್ಕನೆ ನಿಂತಿತು. ವಾಹಕನು ಬಿರುಸಾಡಿದನು; ಒಳಗೆ ಕುಳಿತ ಪಾವಡರ್ ಬೆಡಗಿಯರು ಕಿಸಿ ಕಿಸಿ ನಕ್ಕರು. ಅಬ್ಬ ಮುಂಬಯಿಯೇ! ಎಂದು ರಾಮಣ್ಣ ಗಾಬರಿಯಾದನು. ಮೊದಲದಿನವೇ ಈ ನಗರವಾಸಿಯು ತನ್ನ ಆಹುತಿ ತಗೊಳ್ಳುವಳೋ ಹೇಗೆಂದು ನೊಂದನು. ಆದರೂ ಎದೆಗುಂದಲಿಲ್ಲ. ದೊಡ್ಡ ಬೀದಿಗಳನ್ನು ದಾಟಿ ಹೋಗುತ್ತ ಮುಂಬಯಿ ನಿವಾಸಿಗಳು ಎತ್ತ ನೋಡುವರು ಏನೆಂಬುದನ್ನು ಕಣ್ಣರಿಕೆಯಿಂದ ತಿಳಿದುಕೊಂಡನು. ಮುಂದೆ ತೊಂದರೆಯಾಗಲಿಲ್ಲ. ಸಂಜೆಯ ಹೊತ್ತಿಗೆ ಸಾವಧಾನವಾಗಿ 'ಬ್ಯಾಕ್‌ಬೇ' ಬಳಿಯ ಸಮುದ್ರ ತೀರಕ್ಕೆ ಹೋಗಿ ದೊಡ್ಡ ಕಟ್ಟೆಯ ಮೇಲೆ ತಿರುಗುತ್ತ ಹೊರಟನು. ಒಂದು ಕಡೆ ಅಪಾರ ನೀರಿನ ಅಂಚು, ಇನ್ನೊಂದು ಕಡೆ ಅಪಾರ ಜನತೆಯ ಹಿಂಡು. ಒಬ್ಬರೂ ತನ್ನ ಗುರುತಿನವರಿಲ್ಲ. ತಿರುಗಾಡಲಿಕ್ಕೆಂದು ಬಂದ ಎಷ್ಟೋ ಗಂಡು ಹೆಣ್ಣಿನ ಜೋಡುಗಳು ಹತ್ತಿರ ಹಾಯ್ದುವು. ಕೆಲವು ದಂಪತಿಗಳಂತೂ ಕೈಯ್ಯಲ್ಲಿ ಕೈಹಾಕಿ ಒಬ್ಬರಿಗೊಬ್ಬರು ಹೊಲಿದುಕೊಂಡಂತೆ ಸಲಿಗೆಯ ಮೆಲುಮಾತನಾಡುತ್ತ ಹೊರಟಿದ್ದರು. ಅವರನ್ನು ನೋಡುತ್ತ ಒಬ್ಬಂಟಿಯಾದ ತನ್ನ ಬಾಳುವೆಯನ್ನು ರಾಮಣ್ಣ ನೆನಸಿದನು; ಹೆಚ್ಚಿನ ಕಳವಳವಾಯಿತು.

ಸೂರ್ಯ ಮುಳುಗಿದನು; ಮಬ್ಬು ಹಬ್ಬುತ್ತಿತ್ತು. ಯಾರನ್ನಾದರೂ ಒಬ್ಬರನ್ನು ಮಾತಾಡಿಸಿಯೇ ಬಿಡಬೇಕೆಂದು ರಾಮಣ್ಣ ನಿರ್ಧರಿಸಿದನು. ಅಷ್ಟರಲ್ಲಿ ಕೈಯ್ಯಲ್ಲಿ ಪುಸ್ತಕ ಹಿಡಿದ ಬಕ್ಕನೆತ್ತಿಯ ತರುಣನೊಬ್ಬನು ಇದಿರು ಬಂದನು. ಇವನು ವಿದ್ಯಾರ್ಥಿಯಿರಬೇಕೆಂದು ರಾಮಣ್ಣನು ಕಾಯಾಸ ಕಟ್ಟಿ ಇಂಗ್ಲಿಶಿನಲ್ಲಿ ಮಾತನಾಡಿಸಿದನು. ಅವನು ಉತ್ತರ ಕೊಡದೆ ಹಾಗೇ ಸಾಗಿದನು. ಇದೆಂಥ ವಿಚಿತ್ರವ್ಯಕ್ತಿ ಎಂದು ರಾಮಣ್ಣನು ಆಶ್ಚರ್ಯಪಟ್ಟನು. ಆದರೆ ಅವನಿಗೆ ಸಾಕಷ್ಟು ಆ ಮಹಾನಗರದ ಅನುಭವವಿದ್ದರೆ ಅದರಲ್ಲಿ

ಆಶ್ಚರ್ಯವೇನು ತೋರುತ್ತಿರಲಿಲ್ಲ. ಅಲ್ಲಿ ಒಂದು ಕಡೆ ಸಮುದ್ರ ನೋಡುತ್ತ ನಿಂತನು. ಒಂದೆರಡು ಮಿನಿಟುಗಳಲ್ಲಿ ಮೂರು ನಾಲ್ಕು ವಿದ್ಯಾರ್ಥಿಗಳ ನಿವುಡೇ ಬಂದಿತು. ಕಾಲೇಜು, ಪುಸ್ತಕ, ಪ್ರೊಫೆಸರರು ಮೊದಲಾದ ಹರಟೆಯನ್ನೇ ಅವರು ನಡೆಸಿದ್ದರಿಂದ ತನಗೆ ಬೇಕಾದ ಸಮಾಚಾರವು ಅವರಿಂದ ತಿಳಿಯ ಬಹುದೆಂದು ರಾಮಣ್ಣನು ಆತುರನಾದನು. ಅವರನ್ನು ಇದಿರುಗೊಂಡು ಪ್ರೊಫೆಸರ ವೈಶಂಪಾಯನ ಎಂಬವರು ಯಾವ ಕಾಲೇಜಿನಲ್ಲಿ ಇರುವರೆಂದು ಪ್ರಶ್ನೆ ಕೇಳಿದನು. ಅವರಿಗೆ ಎಲ್ಲ ಕಾಲೇಜುಗಳ ಸಂಪೂರ್ಣ ಪರಿಚಯವಿತ್ತು. ಪ್ರೊ. ವೈಶಂಪಾಯನ ಎಂದು ಯಾರೂ ಕಾಲೇಜಿನಲ್ಲಿ ಇಲ್ಲವೆಂದು ಖಂಡಿತ ವಾಗಿ ಹೇಳಿದರು. ವಿಜ್ಞಾನವು ಅವರ ವಿಷಯವೆಂದು ರಾಮಣ್ಣನು ಇನ್ನಿಷ್ಟು ವಿಶದಮಾಡಿದನು. ಆದರೂ ಅವನ ಅಜ್ಞಾನವನ್ನು ಅವರು ಕಳೆಯ ಲಾರದಾದರು. ಅವನಿಗೆ ದೊಡ್ಡ ದಿಗಿಲು ಬಿದ್ದಿತು. ಅವರು ಮುಂಬೈಯ ಲ್ಲಿಯೇ ಈಗ ಇಲ್ಲವೋ ಹೇಗೆ, ಇಲ್ಲದಿದ್ದರೆ ಆನಂದಮೂರ್ತಿಗಳು ನಿಶ್ಚಿತ ವಾಗಿ ಯಾಕೆ ಹೇಳಿರಬಹುದು, ಎಂದು ತನ್ನಷ್ಟಕ್ಕೆ ತಲೆ ಕೆದರುತ್ತ ಹಾಟೆಲ್ಲಿನ ಕಡೆ ನಡೆದನು. ಪ್ರೊಫೆಸರರು ತಮ್ಮ ಹೆಸರನ್ನು ಬದಲಿಸಿಕೊಂಡಿರಬಹು ದೆಂದು ಮೂರ್ತಿಗಳು ಹೇಳಿದ ಸುದ್ದಿಯು ಅವನ ಸಮಸ್ಯೆಯನ್ನು ಇನ್ನಿಷ್ಟು ತೊಡಕು ಮಾಡಿತು.

ಮರುದಿನ ಬೆಳಗಿತು. ದಿನವೂ ಎರಡು ರೂಪಾಯಿಗಳ ವರೆಗೆ ಕೊಟ್ಟು ಕೊಳ್ಳುವ ಅನ್ನವು ಅವನಿಗೆ ಹಿತವೆನಿಸದಾಯಿತು. ಅನ್ನದ ಆಧಾರ ವನ್ನು ಹುಡುಕಲಿಕ್ಕೆ ತಾನು ಬಂದಿದ್ದು ಅನ್ನ ಇದ್ದವರಂತೆ ಹಣವನ್ನು ಹರಿಬಿಟ್ಟರೆ ಏನು ಉಪಯೋಗ ಎಂಬ ಯೋಚನೆಗೆ ಸಿಲುಕಿದನು. ಅದ ರಿಂದ ಒಂದು ನಿರ್ಣಯವು ಹೊರಟಿತು. ವೈಶಂಪಾಯನರು ಸಿಗಲಿ, ಸಿಗದೆ ಹೋಗಲಿ ತಾನು ಮುಖ್ಯವಾಗಿ ಬಂದ ಕೆಲಸದ ಬೆನ್ನು ಹತ್ತಬೇಕು. ಹೀಗೆಂದು ಸ್ಥಳ ತೆರವಿದ್ದ ಬ್ಯಾಂಕು, ಕಚೇರಿ, ಉದ್ಯೋಗಸಂಸ್ಥೆ ಮೊದ ಲಾದ ಕಡೆಗಳಿಗೆ ತನ್ನ ಅರ್ಜಿ ಹಾಗೂ ಪ್ರಶಸ್ತಿಗಳೊಡನೆ ತೀರ್ಥಯಾತ್ರೆ ಕೈಕೊಂಡನು. ಊಟಕ್ಕೊಂದು ಹಾಟೆಲ್ಲಿಗೆ ಬರಬೇಕು, ಉಳಿದ ಹೊತ್ತನ್ನೆಲ್ಲ ಅತ್ಯಂತ ನಿಷ್ಠೆಯಿಂದ ಕೆಲಸದ ಶೋಧದಲ್ಲಿ ಕಳೆಯಹತ್ತಿದನು. ಆಗ ಅವನಿಗೆ ಬಂದ ದಿವ್ಯ ಅನುಭವಗಳು ಅವನನ್ನು ನಿಜವಾದ ಮಾನವನನ್ನು ಮಾಡಲಿಕ್ಕೆ

ರವಾದವು. ಮೊದಲು ಒಂದೆರಡು ಕಡೆಗಳಲ್ಲಿ ಅರ್ಜಿಯನ್ನು ಇಸಗೊಂಡು ವಿಚಾರಮಾಡಿ ತಿಳಿಸುತ್ತೇವೆ' ಎಂಬ ಲೋಕ ಉತ್ತರಗಳನ್ನು ಕೊಟ್ಟರು. ದರಿಂದ ಬಹಳ ಆಶೆಯೂ ಇಲ್ಲ, ಬಹಳ ವ್ಯಥೆಯೂ ಇಲ್ಲ. ಕೆಲವು ಕಡೆಗೆ ಂದರೆ ವಿಶೇಷವಾಗಿ ಸರಕಾರೀ ಕಚೇರಿಗಳಲ್ಲಿ ಒಳಗೆ ಪ್ರವೇಶವೇ ಇಲ್ಲ. ಾಗಿಲಿಗೆ ನಿಂತ ಜಯವಿಜಯರೇ ಇವನ ಅರ್ಜಿಯ ನಿಕಾಲುಮಾಡಿದಂತೆ ಪ್ಪಣೆ ಕೊಡುತ್ತಿದ್ದರು. ನಿಜವಾದ ಅನುಭವವನ್ನು ಕೊಟ್ಟು ಅನೇಕ ಸನ್ನಿ ೇಶಗಳಲ್ಲಿ ಒಂದು ಮಾತ್ರ ಅವನ ನೆನಪಿನಲ್ಲಿ ಕೂರೆದುಹೋಯಿತು.

ಒಂದು ಕಾಗದ ಮಾರುವ ಅಂಗಡಿ. ಕಲಿತ ಜನರು ಬೇಕೆಂದು ಜಾಹೀ ಾತು ಕೊಟ್ಟಿದ್ದರು. ವಾಮಣ್ಣನು ಹೋಗಿ ಬೆಟ್ಟಿಯಾದನು. ಮಾಲಕನು ಹಳ ಆದರದಿಂದ ಬರಮಾಡಿಕೊಂಡು ಮೊದಲು ಸವಿಸವಿ ಮಾತನಾಡಿ ನು; ತನ್ನೊಡನೆ ಕಪ್ಪು ಚಹವನ್ನೂ ತರಿಸಿಕೊಟ್ಟನು.

'ತಮ್ಮಲ್ಲಿ ಕೆಲಸ ಸಿಗಬಹುದೇ?' ಎಂದು ವಾಮಣ್ಣ ಕೇಳಿದನು.

'ಅವಶ್ಯವಾಗಿ ಸಿಗಬಹುದು. ತಮ್ಮಂಥ ಬುದ್ಧಿವಂತ ತರುಣರೇ ಮಗೆ ಬೇಕಾಗಿದ್ದರು. ನೀವು ಅನಾಯಾಸವಾಗಿ ಬಂದಿರಿ.' ಎಂದು ಉತ್ತರ ಂದಿತು. ವಾಮಣ್ಣನ ಎದೆ ಉಬ್ಬಿತು. ಒಂದು ನಿಮಿಷದಲ್ಲಿ ಆಸೆಯ ಹಕ್ಕಿ ುಗಿಲೆಲ್ಲ ಹಾರಾಡಿ ಧಾರವಾಡದ ವರೆಗೆ ಹೋಗಿ ಬಂತು. ಪದ್ದಕ್ಕನನ್ನು ರೆತಂದು ಮುಂಬಯಿಯಲ್ಲಿ ಮನೆಮಾಡಿಯೂ ಬಿಟ್ಟಿತು.

'ನನ್ನ ಕೆಲಸವೇನು? ಪಗಾರವೇನು ಕೊಡುತ್ತೀರಿ?' ಎಂದು ಸರಳ ಾಗಿ ವಾಮಣ್ಣ ಕೇಳಿದನು.

ಒಡೆಯನು ಚದುರಿಸ ಮುಗುಳ್ನಗೆ ನಗುತ್ತ 'ಯಾಕೆ ಅವಸರಪಡು ್ತೀರಿ? ಎಲ್ಲ ಹೇಳತೇನಿ. ನೀವು ಇಲ್ಲಿಗೆ ಬಂದದ್ದು ಬಹಳ ಹೆಚ್ಚಿನದು' ಂಬಡಾಗಿ ಬಣಹರಟೆಯ ಹಗ್ಗ ನೇಯುತ್ತ ತಾಸೆರಡು ತಾಸು ಕಳೆದನು. ೊನೆಗೆ ಮತ್ತೆ ಅದೇ ಪ್ರಶ್ನೆಯನ್ನು ವಾಮಣ್ಣ ಕೇಳಬೇಕಾಯಿತು. ಒಳ್ಳೇದು. ನಾಳೆಗೆ ಇಲ್ಲಿ ಇದೇ ಹೊತ್ತಿಗೆ ಬರ್ರಿ. ನಿಮಗೆ ನಿಮ್ಮ ಕೆಲಸದ ಳ ತೋರಿಸಿ ಎಲ್ಲ ಹೇಳುತ್ತೇನೆ' ಎಂಬ ಉತ್ತರ ಬಂದಿತು. ಹಾಗೇ ಆಗಲಿ ಂದು ವಾಮಣ್ಣ ಹೊರಹೊರಟನು. ಮಾಲಕನು ಬಹಳ ಸಭ್ಯನಿರುವನೆಂದು ವನಿಗೆ ತೋರಿತು. ಆದರೆ ಅವನು ಮುಚ್ಚು ಮಾತುಗಳ ಹೇಳಿಕೆಯನ್ನು

ಯಾಕೆ ಮುಂದೂಡುತ್ತಿರಬಹುದು ಎಂಬ ಗೂಢವು ಹಾಗೇ ಉಳಿಯಿತು. ನಾಳೆ ಹೋಗಿ ಕಂಡರಾಯಿತು ಎಂದುಕೊಂಡು ಅದಕ್ಕಾಗಿಯೆ ಒಂದು ದಿನ ತಡೆದು ಹೋದನು. ಮಾಲಕನು ಮತ್ತೆ ಮಮತೆಯಿಂದ ಒರಮಾಡಿ 'ಆಯಿತು, ನೀವು ಇನ್ನು ನಮ್ಮ ಸಹೋದ್ಯೋಗಿಗಳು. ನಮ್ಮ ನಿಮ್ಮ ಸಂಬಂಧ ಆಯುಷ್ಯದ ಕೊನೆಯವರೆಗಿನದು.' ಎಂದು ಮುಂತಾಗಿ ತವಡು ಕುಟ್ಟಿ, ಒಂದೆರಡು ಮೈಲು ದೂರ ಕಾಳಬಾದೇವಿ ಬೀದಿಯ ಕಗ್ಗತ್ತಲೆಯುಳ್ಳ ಸಣ್ಣ ಸಂದಿಗೆ ತನ್ನೊಡನೆ ಕರಕೊಂಡು ಹೋದನು. ಅಲ್ಲಿ ನೆಲದ ಕೆಳಗೆ ಇರುವ ಮಳಿಗೆಗಳಲ್ಲಿ ಇಳಿದು, ಕಾಗದದ ಕಟ್ಟುಗಳನ್ನು ಮಾಡಿ ಮಡಿಚಿ ಅಡಕಲಾಗಿ ಇಡುತ್ತಿದ್ದ ಹತ್ತಿಪ್ಪತ್ತು ಜನ ಕೂಲಿಗಳನ್ನು ತೋರಿ ಅವರ ಪ್ರಾಮಾಣಿಕತನವನ್ನು ಹೊಗಳಿದನು. 'ಇದು ನನ್ನ ಉಪಜೀವನದ ಕಾರಖಾನೆ' ಎಂದನು. ರಾಮಣ್ಣನಿಗೆ ಅದು ಯಾವುದೂ ಅರ್ಥವಾಗಲಿಲ್ಲ. ಆದರೂ ತಾಳ್ಮೆಯಿಂದ ಎಲ್ಲ ಕೇಳಿಕೊಂಡನು. ತನಗೆ ಎಲ್ಲ ಉದ್ಯೋಗದ ಮಾಹಿತಿ ಕೊಡುವುದಕ್ಕೆಂದು ಮಾಲಕನು ಕರೆತಂದಿರಬಹುದು. ಎಂದು ಭಾವಿಸಿದನು. ಕೊನೆಗೆ ಮಾಲಕನು 'ತಿಳಿಯಿತಲ್ಲವೆ? ಇದು ನಿಮ್ಮ ಕೆಲಸ' ಎಂದನು. 'ಏನು ?' ಎಂದು ದಿಙ್ಮೂಢನಾಗಿ ರಾಮಣ್ಣ ಕೇಳಬೇಕಾಯಿತು. 'ಇದೇ. ಈ ಕೂಲಿಗಳ ಮೇಲೆ ಮುಖ್ಯಸ್ಥನಾಗಿ ಇವರ ಕೆಲಸದಲ್ಲಿ ಸಹಕಾರ ಮಾಡಬೇಕು!' ಆಯಿತು, ಮೊದಲೇ ಮುಂಬಯಿಯ ಶಕೆ, ಮೇಲೆ ಆ ನೆಲಮಳಿಗೆಯ ಕುದಿ. ಅದರಲ್ಲಿ ಬೆವತ ರಾಮಣ್ಣನ ಮೈಯು ಆ ಕೆಲಸದ ವರ್ಣನೆಯಿಂದ ಇನ್ನಿಷ್ಟು ಬೆವರು ಸುರಿಯಿತು. ತಾನು ಎಂಥ ಒಲೆಯಲ್ಲಿ ಹೊಕ್ಕೆನಲ್ಲ ಎಂದು ಮಿಡುಮಿಡುಕಿದನು. ಆದರೂ 'ಪಗಾರವೇನು ತಿಳಿದುಕೊಳ್ಳಬೇಕು. ಪಗಾರವು ಚೆನ್ನಾಗಿದ್ದರೆ ಯಾವ ದುಡಿತವೇನು ?' ಎಂದು ಯೋಚಿಸಿ 'ಮಾಲಕರೇ, ಕೆಲಸ ತಿಳಿಯಿತು. ನನ್ನ ಪಗಾರವೇನು?' ಎಂದನು. 'ಛೇ, ಅದರ ಯೋಚನೆಯೆ ಬೇಡ. ನಿಮಗೆ ನಾವೂ ನೀವೂ ಇನ್ನು ಮೇಲೆ ಅಣ್ಣತಮ್ಮಂದಿರು.' ಎಂಬ ಜೊಳ್ಳು ತೂರುತ್ತ ಮಾಲಕನು ತಿರುಳಿಗೆ ಬಂದನು. 'ಈ ಕೂಲಿಗಳಿಗೆ ತಿಂಗಳಿಗೆ ೧೦ ರೂ. ಸಿಗುತ್ತದೆ. ನಿಮಗೆ ಅದರ ದುಪ್ಪಟ್ಟು ಸಿಗುವುದು. ಮೇಲೆ ಇಲ್ಲಿ ಇರಲಿಕ್ಕೆ ಸ್ಥಳವಿದೆ. ಉಳಿದ ಎಲ್ಲ ಅನುಕೂಲಗಳನ್ನು ನಾನು ಮಾಡಿಕೊಡುತ್ತೇನೆ.'

ಈಗ ವಾಮಣ್ಣನಿಗೆ ಕಾಗದದೊಡೆಯನ ಕುಟಿಲನೀತಿಯು ನಿಚ್ಚಳವಾಗಿ ಹೊಳೆಯಿತು. ತುಂಬಾ ಸಿಟ್ಟು ಬಂದಿತು. ಒಮ್ಮೆಲೆ ಮೋರೆ ಬಿಗಿದುಕೊಂಡು ಆತ್ಯಾವೇಶದಿಂದ ಒದರಾಡಹತ್ತಿದನು. ಬಹಳ ವಾದಿಸಾಟವಾಯಿತು. 'ನನಗೆ ನೀವು ಅತ್ಯಂತ ಅಪಮಾನ ಮಾಡಿದಿರಿ' ಎಂದು ವಾಮಣ್ಣನು ಗದ್ದರಿಸಿದನು. ಇನ್ನು ಈ ಆಸಾಮಿಯು ತನ್ನ ಕೈಬಿಟ್ಟಿತೆಂದು ಮನಗಂಡು ಮಾಲಕನು ತನ್ನ ಉರುಟು ರೀತಿಗೆ ನೆಟ್ಟಗೆ ಇಳಿದನು. 'ಅಪಮಾನವೇ? ನೀನು ಒಪ್ಪಿಕೊಂಡು ಈಗ ಒಲ್ಲೆಂದು ನನಗೆ ಬಹಳ ಅಪಮಾನಮಾಡಿದೆ. ಏ ಭೋಕರ, ಇವನನ್ನು ಹೊರಗೆ ಹಾಕು' ಎನ್ನುವುದಕ್ಕೆ ಸಹ ಅವನು ಹಿಂಜರಿಯಲಿಲ್ಲ. ತಾನಾಗಿ ವಾಮಣ್ಣನು ಹೊರಬಂದು ಹಾಟೆಲ್ಲಿಗೆ ಹೋಗುವಾಗ ಕೈಮೀರಿದ ಕಳವಳವು ಅವನನ್ನು ಮುತ್ತಿಬಿಟ್ಟಿತು.

ಕೆಲಸದ ವ್ಯರ್ಥಶೋಧದಲ್ಲಿ ವಾಮಣ್ಣನ ಎಳೆಂಟು ದಿನಗಳು ನಡೆದವು. ೧೦-೧೫ ರೂಪಾಯಿಗಳು ಹಾಳಾದವು. ಇನ್ನೇನು ಮಾಡಬೇಕು ತಿಳಿಯದಾಯ್ತು. ತಾನು ಬಂದ ಮೇಲೆ ಎಷ್ಟೋ ಹುರುಪಿನಿಂದ ಮಾವಂದಿರಿಗೆ ಒಂದೂ ಹೆಂಡತಿಗೆ ಒಂದೂ ಪತ್ರ ಹಾಕಿದ್ದನು. ಈಗ ಆ ಹುರುಪು ಹಾರಿ ಹೋಗಿತ್ತು. ಅದರಲ್ಲಿ ಮತ್ತೆ ಕೆಲವು ಕಾರಣಗಳು ಕೂಡಿಕೊಂಡವು. ಮಾವಂದಿರಾದ ಭೀಮರಾಯರಿಂದ ಉತ್ತರವೊಂದು ಬಂದಿತು. ಅದರಲ್ಲಿ ಅವನ ಸಾಹಸವನ್ನು ಹುಚ್ಚಾಟವೆಂದು ಹೀಗಳೆದು ಸುಮ್ಮನೆ ಊರಿಗೆ ಹೊರಟು ಬರಬೇಕೆಂದು ಅವರು ಉಪದೇಶ ಮಾಡಿದ್ದರು. ಹೀಗಾಗಿ ಅವರಿಂದ ಉತ್ತೇಜನವೇನೂ ಇಲ್ಲ. ಹೆಂಡತಿ ಪದ್ಮೆಯಿಂದ ಯಾವ ಪತ್ರವೂ ಇಲ್ಲ. ತಾನು ಬರುವಾಗ ಅದೆಷ್ಟು ಹೇಳಿ ಬಂದಿದ್ದನು! ತನ್ನ ಪತ್ರದಲ್ಲಿಯೂ ಉತ್ತರವನ್ನು ಹಾರೈಸಿ ಅದೆಷ್ಟು ಬರೆದಿದ್ದನು! ಅದೆಲ್ಲವೂ ಅವಳ ಎದೆ ಮುಟ್ಟಲಿಲ್ಲ. ಇತ್ತ ತನ್ನ ಪ್ರೀತಿಯ ಪ್ರೊ. ವೈಶಂಪಾಯನರ ಸುಳಿವೂ ಹತ್ತಲಿಲ್ಲ. ಎಲ್ಲ ಕೂಡಿ ಜೀವಕ್ಕೆ ಬಹಳ ಜುಗುಪ್ಸೆ ಹುಟ್ಟಿತು. ಯಾರಿಗೂ ತಿಳಿಯದಂತೆ ಎಲ್ಲಿಗಾದರೂ ಹೋಗಿಬಿಡಬೇಕು ಎಂದುಕೊಂಡನು. ಅದರ ಅರ್ಥವೇನು ಅವನೇ ಅರಿಯ. ಹೀಗಿರುವಾಗ ಅದೇ ಹಾಟೆಲ್ಲಿಗೆ ಕಾರಣಾಂತರದಿಂದ ಇನ್ನೊಬ್ಬ ಕನ್ನಡಿಗರು ಬಂದರು ಅವರೊಡನೆ ಮಾತೆತ್ತಿ ಕೇಳಲು, ನಿಶ್ಚಿತವಾಗಿ ಪ್ರೊ. ವೈಶಂಪಾಯನರು ಮುಂಬೈಯಲ್ಲಿಯೇ ಇರುವರೆಂದೂ ಅವರನ್ನು ತಾವು ಬೀದಿಯಲ್ಲಿ ಒಮ್ಮೆ

ನೋಡಿರುವರೆಂದೂ ತಿಳಿಸಿದರು. ಅದರಿಂದ ಬಾಡಿ ಮುದುಡಿದ ಬಳ್ಳಿ ಮತ್ತೆ ಕುಡಿ ಬಿಟ್ಟಂತಾಯಿತು. ವಾಮಣ್ಣನು ಬೇರೆ ಕೆಲವು ಮುಂಬಯಿಯ ಕನ್ನಡಿಗರನ್ನು ಸಮುದ್ರತೀರಕ್ಕೆ ಹೋದಾಗ ಕಂಡನು. ಅವರೂ ಅದನ್ನೇ ಹೇಳಿದರು. ಆದರೆ ಯಾರಿಗೂ ಪ್ರೊಫೆಸರರ ನಿವಾಸಸ್ಥಾನವು ಗೊತ್ತಿರಲಿಲ್ಲ. ಅವರು ಇತ್ತೀಚೆ ತೀರ ತಮ್ಮಷ್ಟಕ್ಕೆ ಇರುತ್ತಿರುವರೆಂದು ತಿಳಿಯಿತು. ಅವರ ಈಗಿನ ವ್ಯವಸಾಯದ ಬಗ್ಗೆ ಎಲ್ಲರೂ ಒಂದೇ ಬಗೆಯಾಗಿ ಹೇಳಲಿಲ್ಲ. ಅದೇನೆ ಇದ್ದರೂ ಹೇಗಾದರೂ ಮಾಡಿ ಅವರನ್ನು ಕಾಣಬೇಕೆಂದೂ ಅವರಲ್ಲಿಯೇ ಇದ್ದುಕೊಂಡು ಕೆಲಸವನ್ನು ಹುಡಕಬೇಕೆಂದೂ ವಾಮಣ್ಣ ನಿರ್ಧಾರ ಮಾಡಿದನು.

ಮರುದಿನ ಸಂಜೆ. ಚೌಪಾಟಿಯ ಮೇಲೆ ತರತರದ ಕೂಗಿನ ಮಿಠಾಯಿಗಾರರನ್ನು ನೋಡುತ್ತ ವಾಮಣ್ಣನು ತಿರುಗಾಡಿದನು. ಹೊರನೋಟದಲ್ಲಿ ಎಷ್ಟೋ ತಲೆಭಾರವು ಹಗುರಾಯಿತು. ಮುಂದೆ ಕಾಲುದಾರಿಯಿಂದ ಮಲಬಾರ ಹಿಲ್ಲಿನ ಗುಡ್ಡವೇರಿ 'ತೂಗುವ ತೋಟ' (Hanging Garden) ಕ್ಕೆ ಹೋಗಿ ಸುತ್ತುಹಾಕಿದನು. ಅಲ್ಲಿ ಹವೆಗಾಗಿ ಬಂದ ಮಂದಿಯಲ್ಲಿ ಅನೇಕ ಹೊಸ ಮುಖಗಳು, ಹೊಸ ವೇಷಗಳು. ಮುಂಬಯಿಯಲ್ಲಿ ಇರುವವರಿಗೆ ಬೇರೆ ಪ್ರದರ್ಶನದ ಅಗತ್ಯವೇ ಇಲ್ಲ. ಕಣ್ಣು ತೆರೆದು ತಿರುಗಿದರೆ ಓಣಿ ಓಣಿಗೆ ವಿವಿಧ ಪ್ರದರ್ಶನ! ತೂಗುವ ತೋಟದಲ್ಲಿಯೂ ಅದು ಕಂಡುಬಂದಿತು. ಇಷ್ಟು ದಿನದಂತೆ ಹೊಸ ಮೋರೆ ಕಂಡೊಡನೆ ತನ್ನ ಗುರುಗಳನ್ನು ಹುಡುಕುವ ಪದ್ಧತಿಯನ್ನು ವಾಮಣ್ಣನು ಇಲ್ಲಿಯೂ ಬಳಸಿದನು. ತನ್ನ ಗುರುಗಳು ಅಲ್ಲಿ ಕಾಣಲಿಲ್ಲ. ಕತ್ತಲೆ ಕವಿಯತೊಡಗಿತು. ಅದರೊಡನೆ ನಿರಾಶೆಯ ನೆರಳು ಅವನ ಮೇಲೆ ಬೀಳಹತ್ತಿತು. ತೋಟದಿಂದ ಸಂಜೆಯ ಸಮುದ್ರ ನೋಡಿದನು; ಇತ್ತಕಡೆಯ ಎತ್ತರದ ಕಟಾಂಜನದಿಂದ ಕೆಳಗಿನ ಮುಂಬಯಿ ನೋಡಿದನು. ಈ ಅಪಾರದಲ್ಲಿ ನಾನು ಯಾರು? ನನ್ನ ಬೆಲೆಯೇನು? ನಾನಿದ್ದು ಫಲವೇನು? ಎಂದು ಅನಿಸಿತು. ಹೇಗೋ ಕಾಲೆಳೆಯುತ್ತ ಕೆಳಕ್ಕಿಳಿದು ತನ್ನ ಸ್ಥಳದ ಕಡೆಗೆ ನಡೆದನು. ಕತ್ತಲೆ ಹೆಚ್ಚಿತು. ಮುಂಬಯಿ ದೀಪಗಳು ಮಿನುಗಹತ್ತಿದವು. ಮುಖ್ಯ ದಾರಿ ತಪ್ಪಿ ವಿಚಾರಭರದಲ್ಲಿ ವಾಮಣ್ಣನು ಒಂದು ಸಂದಿ ಸೇರಿದನು. ಅಲ್ಲಿ ಒಂದು ಮಗ್ಗುಲಿನ ದೊಡ್ಡ ಹಾಲಿನಲ್ಲಿ ಅನೇಕ ಜನರು

ಖುರ್ಚಿಗಳಲ್ಲಿ ಕುಳಿತಿದ್ದರು. ಯಾರೋ ಮಹನೀಯರ ಉಪನ್ಯಾಸವು ನಡೆದಿತ್ತು. ಕಣ್ಣೆತ್ತಿ ನೋಡಿದನು. 'ಸತ್ಯಶೋಧಮಂದಿರ' ಎಂದು ಬರೆದಿತ್ತು. ಬಾಗಿಲಲ್ಲಿ "ಪ್ರೊ. ಸತ್ಯಕಾಮ ಇವರ 'ಸತ್ಯದ ಬಗ್ಗೆ ಸತ್ಯ' ಎಂಬ ಉಪನ್ಯಾಸ" ಎಂದು ಹಲಿಗೆಯ ಮೇಲೆ ಬರೆದಿತ್ತು. ಒಳಗೆ ಹೋಗಿ ಉಪನ್ಯಾಸ ಕೇಳಬೇಕೆಂದು ಮನಸ್ಸಾಯಿತು. ಮೆಲ್ಲಗೆ ಹೋಗಿ ತುದಿಯ ಒಂದು ಬಾಕಿನ ಮೇಲೆ ಕುಳಿತನು. ಉಪನ್ಯಾಸವು ಬಳ್ಳೀ ರಭಸದಿಂದ ನಡೆದಿತ್ತು. ಸಭಿಕರೆಲ್ಲ ತಟಸ್ಥರಾಗಿ ಕುಳಿತು ಕೇಳುತ್ತಿದ್ದರು. 'ಸತ್ಯವೆಂದರೇನು? ಸತ್ಯದ ಸ್ವರೂಪವೇನು?' ಎಂಬ ತಾತ್ವಿಕ ವಿಷಯವನ್ನು ಉಪನ್ಯಾಸಕರು ಬಹಳ ಗಂಭೀರವಾಗಿ ನಿರೂಪಿಸುತ್ತಿದ್ದರು. ಈ ಪ್ರೊ. ಸತ್ಯಕಾಮ ಎಂದರೆ ಯಾರೆಂದು ವಾಮಣ್ಣನಿಗೆ ಗೊತ್ತಿಲ್ಲ. ಆದರೆ ಅವರ ಮಾತು ಕೇಳಿದಂತೆ ಯಾವುದೋ ಪರಿಚಯದ ಧ್ವನಿಯಿರಬೇಕೆಂದು ಕಿವಿಯು ಅನುಮಾನಿಸತೊಡಗಿತು. ಯಾರದೆಂಬುದನ್ನು ಗುರುತಿಸಲು ಆಗಲೊಲ್ಲದು. ಕೇಳಿಕೇಳಿದ ಮೇಲೆ 'ತನ್ನ ಗುರುಗಳದೇ?' ಎಂದು ತನ್ನನ್ನೆ ಕೇಳಿಕೊಂಡನು. ತತ್‍ಕ್ಷಣ ಎದ್ದು ನಿಂತು ರೂಪವನ್ನು ನಿಟ್ಟಿಸಿದನು. ಅವರಲ್ಲ ಎಂಬ ಉತ್ತರ ಸಿಕ್ಕಿತು. ಯಾಕೆಂದರೆ ಈ ಉಪನ್ಯಾಸಕರು ಗಡ್ಡ ಬಿಟ್ಟಿದ್ದಾರೆ, ಉದ್ದನ್ನ ಅಂಗಿಯನ್ನು ಹಾಕಿದ್ದಾರೆ, ಸರಳವಾದ ಧೋತರವನ್ನುಟ್ಟಿದ್ದಾರೆ. ತನ್ನ ಪ್ರೊಫೆಸರಾದರೆ ಯಾವಾಗಲೂ ಸೂಟಿನಲ್ಲಿ ಇರುತ್ತಿದ್ದರು. ದಿನಕ್ಕೊಮ್ಮೆ ಮುಖಕ್ಷೌರವು ಅವರಿಗೆ ತಪ್ಪಿದ್ದಲ್ಲ. ಹಾಗಾದರೆ ತನ್ನ ಹಳವಂಡದಿಂದ ಹಾಗೆ ಅನಿಸಿರಬೇಕೆಂದು ಸ್ವಲ್ಪ ಹೊತ್ತು ಆ ಯೋಚನೆ ಬಿಟ್ಟನು. ಆದರೆ ಮತ್ತೆ ಮತ್ತೆ ಆ ಧ್ವನಿಯು ಇವನ ಕಿವಿಗೆ ಅಪ್ಪಳಿಸಿ ಹಿಂದಿನ ನೆನಪನ್ನು ಕೆದರುತ್ತಿತ್ತು. ಉಪನ್ಯಾಸ ಮುಗಿಯಿತು. ಜನರೆಲ್ಲ ಬಾಯಿತುಂಬ ಹೊಗಳುತ್ತ ಹೊರಟರು. ಪ್ರೊ. ಸತ್ಯಕಾಮರು ಕೆಳಮೋರೆಮಾಡಿ ಯಾರಿಗೂ ಮಾತಾಡಿಸದೆ ಯಾರ ಮಾತಿಗೂ ಕಿವಿಗೊಡದೆ ಹೊರಹೊಂಟರು. ಆ ನಡಿಗೆ ತನ್ನ ಗುರುಗಳದೆಂದು ವಾಮಣ್ಣನಿಗೆ ಭಾಸವಾಯ್ತು. ಅವರು ಹೊರಬಿದ್ದ ಕೂಡಲೆ ಅವರ ಹತ್ತಿರ ಹತ್ತಿರ ನಡೆದು ಅವರ ಮೈಕಟ್ಟನ್ನು ಪರೀಕ್ಷಿಸಿದನು. ಇವರೇ ತನ್ನ ಪ್ರೊಫೆಸರರು ಎಂದು ಹೆಚ್ಚೆಚ್ಚು ಅನಿಸತೊಡಗಿತು. ಹೆಸರಿನ ಭೇದವು ಅವನಿಗೆ ದೊಡ್ಡತೊಂದರೆ ಕೊಡಲಿಲ್ಲ. ಕನ್ನಡ ಕೋಗಿಲೆಗಳು ಹೇಳಿದ್ದನ್ನು ಅವನು ನೆನೆದಿ

ದ್ದನು. ಅಷ್ಟರಲ್ಲಿ ಯಾರೋ ಒಬ್ಬ ಮುಂಬಯಿ ಕನ್ನಡಿಗರು ಮುಂಬಂದು 'ತಮ್ಮ ಲೆಕ್ಚರು ಭಾಳ ಛಲೋ ಆತು. ಈಗ ತಾವು ಎಲ್ಲಿ ಇರತೀರಿ?' ಎಂದರು. 'ಎಲ್ಲೊ ಇರತೇನಿ, ಎಲ್ಲೊ..' ಅನ್ನುತ್ತ ಸತ್ಯಕಾಮರು ಮುಂದೆ ಸಾಗಿಬಿಟ್ಟರು. ಅವರ ಕನ್ನಡ ಕೇಳಿದ ಮೇಲಂತೂ ರಾಮಣ್ಣನಿಗೆ ಮನ ವರಿಕೆಯಾಯಿತು, ಅವರೇ ತನ್ನ ಗುರುಗಳೆಂದು. ಹಾಗೇ ಬೆನ್ನುಹತ್ತಿ ಅವರು ಹೊರಟತ್ತ ಹೊರಟನು. ಮಾತನಾಡಿಸಬೇಕೆಂಬ ಲವಲವಿಕೆ ಉಕ್ಕಿತು. ಆದರೆ ತಾನು ಅವರಲ್ಲಿ ಇದ್ದುದು ಐದಾರು ವರುಷಗಳ ಹಿಂದಿನ ಮಾತು. ಗುರುತು ಸಿಗುವುದೋ ಇಲ್ಲವೋ ಎಂದು ಹೆದರುತ್ತ ಹಿನ್ನಡೆದನು. ಗದ್ದಲದ ಬೀದಿ ಗಳನ್ನೆಲ್ಲ ದಾಟಿ ಅವರು ಒಂದು ಸದ್ದಿಲ್ಲದ ಸಂದಿ ಸೇರಿದರು. ಈಗ ಒಳ್ಳೆಯ ಸಮಯವೆಂದು 'ಸರ' ಎಂದು ರಾಮಣ್ಣ ಕರೆದನು. ಉತ್ತರವಿಲ್ಲ. 'ಪ್ರೊಫೆಸರ್' ಎಂದನು. ಅದಕ್ಕೆ ಹಿಂದೆ ನೋಡಿ ಮುಂದರಿದರು. 'ಪ್ರೊ. ವೈಶಂಪಾಯನರೇ, ನಾ ನಿಮ್ಮ ಹಳೇ ಶಿಷ್ಯ' ಎಂದು ರಾಮಣ್ಣ ಅವರನ್ನು ಇದಿರಿಸಿ ಆಡಿದನು. ಒಂದು ಕ್ಷಣ ಮಿಕಿಮಿಕಿ ನೋಡಿದರು, ಮತ್ತೆ ಮುಂದೋಟ ಬಿಟ್ಟರು. ತನ್ನ ಗುರುತು ಹಿಡಿಯಲಿಲ್ಲವೆಂದು ರಾಮಣ್ಣನು ತಿಳಿದನು; ಆದರೂ ಅವರ ನಡೆವಳಿಯು ವಿಚಿತ್ರವಾಗಿ ಕಂಡಿತು. ಮತ್ತೆ ನರಿ ಹೆಜ್ಜೆ ಹಾಕುತ್ತ ತನ್ನ ವಿಷಯ ಹೆಚ್ಚು ಬಣ್ಣಿಸಿ ಪರಿಚಯ ಮಾಡಿಕೊಡ ಹತ್ತಿದನು. 'ಬೇಡ, ನಾನು ಯಾವುದೂ ಕೇಳಲಾರೆ. ನನಗೆ ಯಾರೂ ಗೊತ್ತಿಲ್ಲ' ಎಂದು ಗುಣುಗುಣಿಸುತ್ತ ಮುಂದೆ ಹೆಜ್ಜೆ ಹಾಕಿದರು. ಅಷ್ಟರಲ್ಲಿ ಒಂದು ಮೂರಟ್ಟದ ಮನೆ ಬರಲು ಅದರ ಮೆಟ್ಟಲೇರುತ್ತ ಸತ್ಯಕಾಮರು ಹೊರಟುಹೋದರು. ಅವರು ಹೋದದ್ದನ್ನು ನೋಡುತ್ತ ರಾಮಣ್ಣ ಕೆಳಗಡೆ ನಿಂತನು. ಮುಂದೆ ಬೆನ್ನುಹತ್ತುವುದು ಅವನಿಗೆ ಸರಿತೋರಲಿಲ್ಲ. 'ಪ್ರೊ. ವೈಶಂಪಾಯನರು ಹೋಗಿ ಪ್ರೊ. ಸತ್ಯಕಾಮರೆಂದರೆ ಹೊಸ ಮನು ಷ್ಯರೇ ಆಗಿಬಿಟ್ಟಿರುವರು!' ಎಂದುಕೊಂಡನು. ಅದೇನು ಕಾರಣ ಎಂಬುದು ತಿಳಿಯದೆ ಹೋಯಿತು. 'ಹೋಗಲಿ, ಇವರೇ ಅವರೆಂದ ಮೇಲೆ ಇಂದು ನಾಳೆ ಇವರ ಮನವೊಲಿಸಿಬಿಟ್ಟೇನು' ಎಂದು ಸಮಾಧಾನ ಮಾಡಿಕೊಂಡು ಅವರ ಮನೆಯ ಗುರುತುಗೆರೆಗಳನ್ನು ನೆನಪಿನಲ್ಲಿ ಕೊರೆದು ತನ್ನ ಬೀಡಿಗೆ ಹೋದನು.

ಮರುದಿನ ಬೆಳಿಗ್ಗೆ ಎಂಟು ಗಂಟೆ. ಪ್ರೊ. ಸತ್ಯಕಾಮರು ಮೂರನೆ ಅಟ್ಟದ ತಮ್ಮ ಮೂಲೆ-ಕೋಣೆಯಲ್ಲಿ ನಿತ್ಯದ ಸ್ನಾನ ತೀರಿಸಿ ಅರೆಗಣ್ಣು ಮುಚ್ಚಿ ಚಾಪೆಯ ಮೇಲೆ ಕುಳಿತಿರುವರು. ಇದಿರಿಗೆ ಹಳೆಯ ಹೊಸ ತಾತ್ವಿಕ ಗ್ರಂಥಗಳಿವೆ. ಅವರು ಮಾಡುತ್ತಿರುವ ಕೆಲವು ಟಿಪ್ಪಣಿಕಾಗದಗಳಿವೆ. ತಟ್ಟನೆ ಬಾಗಿಲು ಸೂಕಿದಂತಾಯಿತು. ತೆರೆದ ಬಾಗಿಲಿಂದ ವಾಮಣ್ಣ ಒಳಸೇರಿದನು. ಸತ್ಯಕಾಮರು ಕಣ್ಣುತೆರೆದು ನೋಡಿದರು. 'ಯಾರು ನೀವು?' ಎಂದರು. ವಾಮಣ್ಣನು ಓಡಿ ಹೋಗಿ ಕಾಲಹತ್ತಿರ ಕುಳಿತು 'ನಾ ನಿಮ್ಮ ವಾಮಣ್ಣ' ಎಂದನು. ಪ್ರಸನ್ನವಾದ ಆಗಿನ ಅವರ ಮನೋವೃತ್ತಿಯಲ್ಲಿ ಆ ಹೆಸರು ಪರಿಚಯದ್ದೆಂದು ತೋಚಿದಂತಾಯಿತು. ಆದರೂ 'ಯಾವ ವಾಮಣ್ಣ?' ಎಂದು ತಮ್ಮ ಬಿಗುವಿನಲ್ಲಿ ಕೇಳಿದರು. ವಾಮಣ್ಣನು ಕೊರಳುಬ್ಬಿ ತಡೆತಡೆದು ತನ್ನ ಅವರ ಪೂರ್ವಸಂಬಂಧವನ್ನು ತಿಳಿಹೇಳಿದನು. ಈಗ ಅವರಿಗೆ ಅವನು ಯಾರೆಂಬುದು ಪೂರ್ಣ ಸ್ಮರಣಕ್ಕೆ ಬಂದಿತು. ಆದರೆ ಭಾವನೆಗೆ ಅವರು ಇಂಬುಗೊಡಲಿಲ್ಲ. 'ತಿಳಿಯಿತು, ವಾಮಣ್ಣಾ. ನಾನೀಗ ಏಕಾಕಿ. ನನ್ನ ಕಡೆ ಯಾರೂ ಬರುವದಿಲ್ಲ. ನಾನು ಯಾರ ಕಡೆಗೂ ಹೋಗುವದಿಲ್ಲ. ನನ್ನ ಜೀವನದಲ್ಲಿ ದೊಡ್ಡ ಕ್ರಾಂತಿಯಾಗಿದೆ.'

'ಅಂತೇ ಹೆದರಿ ನಿನ್ನೆ ನಾನು ಬಂದು, ಹಾಗೇ ತಿರುಗಿಹೋದೆ.'

ನಿನ್ನೆ ಬೆನ್ನ ಹಿಂದೆ ನಡೆದವನು ವಾಮಣ್ಣನೇ ಎಂದು ಅವರಿಗೆ ಹೊಳೆಯಿತು. ಅವನ ಆರ್ತಕರುಣೆ ಅವರ ಎದೆಯಲ್ಲಿ ದಾರಿಕೊರೆಯಹತ್ತಿತು. ಆದರೆ ಭಾವನೆಯೆಂದರೆ ಅವರಿಗೆ ಆಗದ ವಿಷಯ. 'ಭಾವನೆಯಿಂದಲೇ ನನ್ನ ಬಾಳುವೆಯೆಲ್ಲ ಸುಟ್ಟು ಕಮರಿತು' ಎಂದು ಅವರ ನಿಶ್ಚಿತಕಲ್ಪನೆಯಾಗಿತ್ತು. ಕೇಳುವುದನ್ನು ಕೇಳಿ 'ವಾಮಣ್ಣಾ, ಹೊರಟುಬಿಡು. ನನ್ನಷ್ಟಕ್ಕೆ ನನ್ನ ಬಿಡು. ಈ ಸ್ಥಿತಿಯಲ್ಲಿ ನನ್ನಿಂದ ನಿನಗೆ ಏನೂ ಉಪಯೋಗವಿಲ್ಲ.' ಎಂದರು.

ಅದೇಕೆ ಈ ಮಾರ್ಪಾಡು ಆಗಿದೆ ಎಂಬ ಗೂಢವು ವಾಮಣ್ಣನನ್ನು ಬಿಡಲಿಲ್ಲ. ತುಸು ತಡೆದು 'ಈಗ ನೀವು ಪ್ರೊಫೆಸರ ಎಲ್ಲಿದ್ದೀರಿ?' ಎಂದು ಕೇಳಿದನು.

'ಎಲ್ಲಿಯೂ ಇಲ್ಲ. ಹಿಂದೆ ಇದ್ದೆ. ನನ್ನ ಏಕಾಂತಕ್ಕೆ ಅದು ಎಡರಾಯಿತು. ಈಗ ಅದೂ ಇಲ್ಲ; ಒಂದು ದೂರದ ಶಾಲೆಯ ಮಾಸ್ತರನಾಗಿದ್ದೇನೆ.'

ಅವರ ಮುಂದಿನ ಮಾತಿನ ಮೇಲಿಂದ ಆ ಶಾಲೆಯಿಂದ ತಿಂಗಳಿಗೆ ನೂರು ರೂಪಾಯಿ ಸಂಬಳ ದೊರೆಯುವುದೆಂದು ತಿಳಿಯಿತು. 'ಗುರುಗಳೇ, ನಿಮ್ಮ ಹತ್ತಿರ ಇನ್ನೊಮ್ಮೆ ನಿಮ್ಮ ಶಿಷ್ಯನಾಗಿ ಕೆಲವು ಕಾಲ ನನ್ನ ಇರಗೊಡಿರಿ. ನಿಮ್ಮ ಹೊರತು ನನಗೆ ಗತಿಯಿಲ್ಲ. ಕೆಲಸ ಹುಡುಕಿಕೊಂಡು ನಿಮ್ಮ ನೆನಸುತ್ತ ಹೋಗುವೆ ' ಎಂದು ವಾಮಣ್ಣಾ ಬಿನ್ನವಿಸಿದನು.

' ಅದಾಗದು, ವಾಮಣ್ಣಾ ನನ್ನಿಂದ ಯಾವ ಸಹಾಯವೂ ಈಗ ಸಿಗದು. ನೀನು ಇಲ್ಲಿರಬೇಡ. ನಿನಗೆ ಕಲ್ಯಾಣವಾಗಲಿ, ಹೋಗಿಬಿಡು' ಎಂದು ಸತ್ಯಕಾಮರು ಇದ್ದುದನ್ನು ಹೇಳಿದರು. ವಾಮಣ್ಣಾನು ತನ್ನ ಒಂದೆರಡು ವರುಷದ ಜೀವನಸಾರವನ್ನು ಹೇಳಿ ಸದ್ಯಸ್ಥಿತಿಯನ್ನು ವಿವರಿಸಿದನು. ತನ್ನ ಹತ್ತಿರದ ಸಂಗ್ರಹವೆಲ್ಲ ತೀರಬಂದಿರುವ ಸಂಗತಿಯನ್ನು ತೋಡಿಕೊಂಡನು. ಸತ್ಯಕಾಮರು ಈಗ ಮಾತ್ರ ನಿಜವಾಗಿ ವಿಚಾರದಲ್ಲಿ ಬಿದ್ದರು. ಐದು ನಿಮಿಷ ಸುಮ್ಮನೆ ಕುಳಿತರು, ಎದ್ದು ಅತ್ತಿಂದಿತ್ತ ಓಡಾಡಿದರು. ಕಡೆಗೆ ಯಾವುದೊಂದು ನಿಶ್ಚಯಕ್ಕೆ ಬಂದು ಹೇಳಿದರು: ' ವಾಮಣ್ಣಾ, ಈಗ ಐದು ವರುಷ ಯಾರೂ ನನ್ನ ಹತ್ತಿರ ಸುಳಿದಿಲ್ಲ. ನನ್ನ ಪ್ರಪಂಚವೆಲ್ಲ ನೂರು ಹರಿದಾರಿಯ ಆಚೆ ಕಣ್ಮರೆಯಾಗಿದೆ. ನೀನು ಬರಬಾರದು, ಆದರೂ ಇರುವಿಯಾದರೆ ಎರಡು ವಿಷಯಗಳನ್ನು ಸ್ಪಷ್ಟ ತಿಳಿದುಕೋ. ನನ್ನಿಂದ ಯಾವ ನೆರವನ್ನೂ ಕೋರಕೂಡದು. ನನ್ನ ಬಗ್ಗೆ ಯಾರಿಗೂ ಏನನ್ನೂ ಹೇಳಕೂಡದು.'

' ನೀವು ಹೇಳಿದಂತೆ ನಡೆಯುವೆನು ' ಎಂದು ವಾಮಣ್ಣಾ ಕೂಡಲೆ ಒಪ್ಪಿಕೊಂಡನು. ' ನಾನು ಹಾಗೆ ನಡೆಯದಿದ್ದರೆ ನನಗೆ ಹೋಗಲು ಹೇಳಿಬಿಡಿರಿ.' ಎಂದೂ ಬೆರಸಿದನು. ಆಗಳೆ ವಾಮಣ್ಣಾನು ತನ್ನ ಹಾಟೆಲ್ಲಿಗೆ ಮರಳಿ ಬಂದು ಅಲ್ಲಿಯ ಬಿಲ್ಲನ್ನು ಮುಟ್ಟಿಸಿ ತನ್ನೆಲ್ಲ ಗಂಟುಗದಡಿಯೊಡನೆ ಗುರಗಳ ಮನೆಸೇರಿ ಅಲ್ಲಿ ತಳವೂರಿದನು.

ಸತ್ಯಕಾಮರ ಕಾರ್ಯಕ್ರಮವು ಋತುಮಾನದಂತೆ ಕ್ಲೃಪ್ತವಾಗಿ ನಡೆದಿತ್ತು. ಮುಂಜಾನೆ ಜಳಕ-ಓದು; ಊಟವಾದೊಡನೆ ೧೧ರಿಂದ ಸಂಜೆ ೫ ಶಾಲೆಯಲ್ಲಿ; ರಾತ್ರಿಯಲ್ಲಿ ಮತ್ತೆ ಓದು-ಬರೆಹ. ಮನೆಯಲ್ಲಿ ಅವರು ತಾವಾಗಿ ಮಾತನಾಡುವುದೇ ಕ್ವಚಿತ್ತಾಗಿತ್ತು. ನಿತ್ಯಮೌನ, ಸತ್ಯಶೋಧ ಇವು ಅವರ ಈಗಿನ ಜೀವನಸೂತ್ರಗಳಾಗಿದ್ದವು. ಶಾಲೆಯಲ್ಲಿ ವಿಜ್ಞಾನ

ಕಲಿಸುವಾಗ ಪದ್ಧತಿಯಂತೆ ಎಷ್ಟು ಮಾತಾಡಬೇಕೋ ಅಷ್ಟೆ ಆಡುತ್ತಿದ್ದರು. ಅವರ ಈ ಇರುವಿಕೆಗೆ ಚೆನ್ನಾಗಿ ಹೊಂದಿಕೊಂಡು ವಾಮಣ್ಣ ಅವರ ಮನೆಯಲ್ಲಿ ಇರಹತ್ತಿದನು. ಅವರಿಗೆ ವ್ಯತ್ಯಯ ಬರದಂತೆ ಅವರ ಮನೆಗೆಲಸಗಳಲ್ಲಿ ತನ್ನ ನೆರವು ನೀಡುತ್ತಿದ್ದನು; ಹೊತ್ತು ದೊರೆತಾಗ ಕೆಲಸ ಹುಡುಕುವದಕ್ಕೆ ಹೊರಡುತ್ತಿದ್ದನು. ಹೀಗೆ ಇರುತ್ತಿರಲು ಅವನು ಮುಂಬಯಿಗೆ ಬಂದು ಒಂದು ತಿಂಗಳು ಮೇಲಾಯಿತು. ತನ್ನ ಗುರುಗಳ ಬಳಿಯಲ್ಲಿ ಇದ್ದುದೊಂದೇ ಹೆಚ್ಚಿನ ಸಮಾಧಾನ ಕೊಟ್ಟಿತು. ಕೆಲಸದ ನಿಷ್ಕರ್ಷೆ ಏನೂ ಆಗಲಿಲ್ಲ. ಒಂದು ದಿವಸ 'ನಿರುದ್ಯೋಗಿ ಸಹಾಯಕ ಸಮಿತಿ' ಎಂಬಲ್ಲಿ ಹೋಗಿ ಅಧ್ಯಕ್ಷರನ್ನು ಕಂಡನು. ಅವರು ಬಹಳ ಸೌಜನ್ಯದಿಂದ ಇವನನ್ನು ಬರಮಾಡಿ ಎಲ್ಲ ವಿಷಯಗಳನ್ನು ತಿಳಿದುಕೊಂಡರು. ಒಂದೆರಡು ತಿಂಗಳಲ್ಲಿಯೇ ತಪ್ಪದೆ ಕೆಲಸವನ್ನು ಹಚ್ಚಿಕೊಡುವೆವೆಂದು ಮಾತುಕೊಟ್ಟರು. ಅವರಿಗೆ ಗೊತ್ತಿದ್ದ ಎಷ್ಟೋ ಸಂಘ-ಸಂಸ್ಥೆಗಳೂ ಕಾರಖಾನೆಗಳೂ ಇರುವವೆಂದೂ ಇಂಥ ಬುದ್ಧಿವಂತರಿಗೆ ಅಲ್ಲಿ ಆಸ್ಪದ ದೊರೆಯುವುದೆಂದೂ ತಿಳಿಸಿದರು. ಈವರೆಗೆ ಇಡೀ ಮುಂಬಯಿಯಲ್ಲಿ ಇಷ್ಟು ಆತ್ಮೀಯತೆಯಿಂದ ಯಾರೂ ವಾಮಣ್ಣನಿಗೆ ಆಶ್ವಾಸನ ಕೊಟ್ಟಿರಲಿಲ್ಲ. ಅಂತೇ ಎಂದಿಲ್ಲದ ಕುಲುಕುಲು ನಗೆಯು ಅವನ ಮೊಗದ ಸುತ್ತು ನೆಳಲಾಟವಾಡಿತು. ಅವನ ಸುದೈವದಿಂದ ಅಂದೇ ಅವನ ಪದ್ಮೆಯ ಮೊಟ್ಟಮೊದಲನೆಯ ಪತ್ರ ಬಂದಿತು. ಪತ್ರವೇನೋ ನಾಲ್ಕೇ ಸಾಲು. ಎಲ್ಲಾ ಶಾಲೆಯಲ್ಲಿ ಕಲಿಸಿದ ಮಾತು; ತಪ್ಪು ಅಕ್ಷರ, ತಪ್ಪು ಭಾಷೆ. ಆದರೂ ವಾಮಣ್ಣನಿಗೆ ಅದರಲ್ಲಿ ಪ್ರೇಮ ತುಂಬಿ ಹರಿಯುವಂತೆ ತೋರಿತು. ಪತ್ರದ ಕೊನೆಗೆ 'ಪತ್ರ ಬರೆಯಲಿಕ್ಕೆ ತಡ ಆದದ್ದಕ್ಕೆ ಕ್ಷಮಿಸಿರಿ, ಕೆಲಸ ಸಿಕ್ಕದ್ದು ತಿಳಿಸಿರಿ....ನಿಮ್ಮ ಪ್ರೇಮಳೆಯಾದ ಪದ್ಮಾ' ಎಂದಿತ್ತು. ಇವಿಷ್ಟೇ ನುಡಿಗಳು ತೆಳು ರಬ್ಬರಿನ ಪೀಪಿಯಂತೆ ಅವನ ಎದೆಯುಬ್ಬಿಸಿದವು. ತಿರುತಿರುಗಿ ಅವನ್ನು ಓದಿದನು, ಪ್ರತಿಯಕ್ಷರವನ್ನೂ ಸೂಕ್ಷ್ಮದರ್ಶಿಯಂತ್ರದಲ್ಲಿ ನೋಡಿದಂತೆ ನೋಡಿದನು. ಪತ್ರಬರೆಯುವಾಗ ಅವಳು ಹೇಗೆ ಕುಳಿತಿರಬಹುದೆಂಬ ಚಿತ್ರವನ್ನು ಕಲ್ಪಿಸಿ ಮುಗುಳುನಗೆ ತೋರಿದನು. ಅವಳ ಸ್ವಭಾವದ ಬಗ್ಗೆ ಹಿಂದೆ ಮಾಡಿಕೊಂಡ ಅಭಿಪ್ರಾಯಗಳೆಲ್ಲ ಈಗ ಎಲ್ಲಿಯೋ ಮಾಯವಾದವು. ತನ್ನ ಭವಿಷ್ಯ ಜೀವನದ ಸರಸ

ಸ್ವಪ್ನದಲ್ಲಿ ಕೆಲ ನಿಮಿಷಗಳನ್ನು ಕಳೆದು ತನ್ನ 'ಪ್ರೇಮಲೆಯಾದ ಪದ್ಮೆ'ಗೆ ಕೂಡಲೆ ಸೊಗಸಾದ ಉತ್ತರವೊಂದನ್ನು ಬರೆದು ಹಾಕಿದನು.

ಒಂದು ರಾತ್ರಿ ಒಂಬತ್ತು ಗಂಟೆ. ವಾಡಿಕೆಯಂತೆ ಸತ್ಯಕಾಮರು ಸಂಜೆಯ ಅಡಿಗೆಯನ್ನು ತಾವು ಮಾಡಿದರು. ವಾಮಣ್ಣನು ಊಟದ ಏರ್ಪಾಟುಮಾಡಿದನು. ಇಬ್ಬರೂ ಬಡಿಸಿಕೊಂಡು ಊಟಕ್ಕೆ ಕುಳಿತರು. ಹೆಚ್ಚು ಮಾತಿಲ್ಲದೆ ಊಟ ಸಾಗುತ್ತಿತ್ತು. ಆದರೆ ಅನೇಕ ದಿವಸಗಳಿಂದ ವಾಮಣ್ಣನು ತನ್ನ ಗುರುಗಳಿಗೆ ಕೇಳಬೇಕೆಂದು ಮಾಡಿದ ಅನೇಕ ಪ್ರಶ್ನೆಗಳು ಬಾಯತುದಿಗೆ ಬರುತ್ತಿದ್ದವು ; ಅವರ ಮೌನವ್ರತಕ್ಕೆ ಹೆದರಿ ಹಿಮ್ಮೆಟ್ಟುತ್ತಿದ್ದವು. ಈ ಹೊತ್ತು ಮಾತ್ರ ಒಂದು ಪ್ರಶ್ನೆ ಕೇಳುವ ಉತ್ಸಾಹ ಹೆಚ್ಚಿತು. ಆದರೆ ಕೇಳಲಿಕ್ಕೆ ಧೈರ್ಯ ಸಾಲದು. ಪ್ರೊ. ವೈಶಂಪಾಯನರು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಇಂಗ್ಲಂಡಕ್ಕೆ ಹೋದಾಗ ಅಲ್ಲಿಯ ಕಾಲೇಜಿನಲ್ಲಿ ಕಲಿಯುತ್ತಿರುವ ಕಮಲಕಿಶೋರಿ ಎಂಬ ಒಬ್ಬ ಕಾಶ್ಮೀರದ ಹಿಂದೂ ಕನ್ಯೆಯನ್ನು ಪ್ರೀತಿಸಿ ಅವಳೊಡನೆ ಮದುವೆಯಾಗಿದ್ದರು. ಧಾರವಾಡಕ್ಕೆ ಇರುವಾಗ ಅವಳೂ ಜೊತೆಗಿದ್ದಳು. ಅವರಿಬ್ಬರ ಪ್ರೇಮಕಲಹಗಳನ್ನು ವಾಮಣ್ಣನು ಕಣ್ಣಾರೆ ಕಂಡಿದ್ದನು. ಈಗ ಅವರೇಕೆ ಇಲ್ಲಿಲ್ಲ? ತವರೂರಿಗೆಂದು ಹೋಗಿರಬಹುದೆ? ಎಂಬುದೇ ಅವನು ಕೇಳಬೇಕೆಂದು ಮಾಡಿದ ಪ್ರಶ್ನೆ. ಊಟ ಮುಗಿಯುವವರೆಗೆ ಅವನಿಗೆ ಕೇಳುವುದಾಗಲಿಲ್ಲ. ಊಟ ಮುಗಿಸಿ ಸತ್ಯಕಾಮರು ತಮ್ಮ ಟೇಬಲ್ಲಿಗೆ ಕುಳಿತರು. ವಾಮಣ್ಣನು ವಿನಯದಿಂದ ಹತ್ತಿರ ಹೋಗಿ ಟೇಬಲ್ಲ ಮೇಲಿನ ಒಂದೆರಡು ಪುಸ್ತಕಗಳನ್ನು ನೋಡಿದಂತೆ ಮಾಡಿ 'ಗುರುಗಳೇ, ಈಗ ನಿಮ್ಮ ಮನೆಯವರೆಲ್ಲಿ?' ಎಂದು ಕೇಳಿಬಿಟ್ಟನು.

ಸತ್ಯಕಾಮರು ಮೋರೆ ಬಿಗಿದುಕೊಂಡು 'ಮನೆಯವರಲ್ಲ, ಹೊರಗಿನವರೆಲ್ಲಿ ಎಂದು ಕೇಳು!' ಎನ್ನುತ್ತ ಸಿಡಿದಾಗಿ ಉಸಿರು ಬಿಟ್ಟರು.

'ಈಗ ನಿಮ್ಮ ಕೂಡ ಇಲ್ಲವಲ್ಲ.'

'ಹೌದು ಇಲ್ಲ. ಇರುವ ಹಾಗಿಲ್ಲ. ಈಗ ಎಲ್ಲಿಯೋ ಒಂದು ಶ್ರೀಮಂತರ ಶಾಲೆಯಲ್ಲಿ ಶಿಕ್ಷಕಿಯಾಗಿರುವರಂತೆ. ಅವರ ಜೀವನಕ್ಕೂ ನನ್ನದಕ್ಕೂ ಲೆಕ್ಕವಿಲ್ಲದಷ್ಟು ಹರಿದಾರಿಗಳ ಅಂತರವಿದೆ, ವಾಮಣ್ಣ. ಬಲೆಯಲ್ಲಿ ಬೀಳುವ

ವರೆಗೆ ಮನುಷ್ಯನಿಗೆ ಬುದ್ಧಿ ಬರುವದಿಲ್ಲ. ಬುದ್ಧಿ ಬಂದ ಮೇಲೆ ಬಲೆಯು ಇನ್ನಿಷ್ಟು ಬಿಗಿಯುತ್ತದೆ.'

ಯಾಕೋ ತಾವೇ ತುಸು ಹೆಚ್ಚಾಗಿ ಮಾತಾಡುತ್ತಿರುವರೆಂದು ರಾಮಣ್ಣ ಹಿಗ್ಗಿದನು. ಅವರಲ್ಲಿ ಯಾಕೆ ದೊಡ್ಡ ಬದಲಾವಣೆಯಾಗಿದೆ ಎಂಬುದರ ಕಾರಣವನ್ನು ಅವನ ಊಹೆಯು ಈಗ ಮಸಮಸಕಾಗಿ ತಿಳಿಯತೊಡಗಿತು. ಅಗಳಿನ ಮಾತು ಹೇಳಿ ಸತ್ಯಕಾಮರು ಕಣ್ಣು ಮುಚ್ಚಿ ಕುಳಿತುಕೊಂಡರು. ಇನ್ನು ಮುಂದೆ ಕೇಳಲಿಯೋ ಬೇಡವೊ ಎಂದು ಹೆದರುತ್ತ ರಾಮಣ್ಣ ಅಂದನು: 'ಧಾರವಾಡದಿಂದ ಮುಂಬೈಗೆ ಬಂದ ಮೇಲೆ ಶ್ರೀಮತಿಯವರು ನಿಮ್ಮ ಕೂಡ ಇದ್ದರಲ್ಲವೇ?'

'ಇದ್ದರು, ಹೋದರು. ಶ್ರೀಮಂತರವರು, ಶ್ರೀಮಂತರು! ನನ್ನ ಜೀವನದ ಕಲ್ಪನೆಗಳು ಕೂಡಬಾರವು, ರಾಮಣ್ಣಾ. ನನ್ನ ದಾಂಪತ್ಯವೊಂದು ದಾರುಣಕಥೆ, ಕೇಳಬಾರದ ಕಥೆ!' ಎನ್ನುತ್ತ ಸತ್ಯಕಾಮರು ಮತ್ತೆ ಕಣ್ಣು ಮುಚ್ಚಿ ಅತ್ಯಂತ ಸ್ತಬ್ಧರಾಗಿಬಿಟ್ಟರು. ತಾನು ಯಾಕೆ ಮಾತು ತೆಗೆದೆನೋ ಎಂದು ರಾಮಣ್ಣನು ತನ್ನಷ್ಟಕ್ಕೆ ಗೋಳಾಡಿದನು; ಮುಂದೆ ಏನೂ ಆಡದೆ ತನ್ನ ಸ್ಥಳಕ್ಕೆ ಹೋಗಿಬಿಟ್ಟನು. ಸತ್ಯಕಾಮರು ಮಧ್ಯರಾತ್ರಿಯ ವರೆಗೆ ಹಾಗೇ ಕುಳಿತು ಅಲ್ಲಿಂದ ಹಾಸಿಗೆಗೆ ಹೋದರು.

ಮತ್ತೆ ಕೆಲವು ದಿನ ಜಾರಿದವು. ತನ್ನ ನೌಕರಿಯ ಶೋಧವನ್ನು ರಾಮಣ್ಣನು ಅವ್ಯಾಹತವಾಗಿ ನಡಸಿದ್ದನು. ಈಸಲ ಕೆಲವು ಇಂಗ್ಲಿಶ್ ಶಾಲೆಗಳಿಗೆ ಹೋಗಿ ಬಿನ್ನಹಮಾಡಿ ಬಂದನು. ಒಂದೆರಡು ಕಡೆ ಆಶ್ವಾಸನಗಳು ದೊರೆತವು. ಆದರೆ ಅವೆಷ್ಟು ನಿಜ, ಎಷ್ಟು ಪೊಳ್ಳು ಎಂಬುದೇ ಹೇಳಲಿಕ್ಕೆ ಬಾರದು. ಸತ್ಯಕಾಮರ ಸಹವಾಸ-ಸ್ಫೂರ್ತಿ ಇಲ್ಲದಿದ್ದರೆ ರಾಮಣ್ಣನು ಎಂದೋ ಮುಂಬೈ ಬಿಡಬೇಕಾಗುತ್ತಿತ್ತು. ಅವರ ಹತ್ತಿರವಿದ್ದ ಎಷ್ಟೋ ತತ್ವದ ಗ್ರಂಥಗಳನ್ನು ಅವನು ಮನವುಟ್ಟಿ ಓದಿದನು; ಅವರು ಮಾಡುತ್ತಿರುವ ಮಹತ್ವದ ಟಿಪ್ಪಣೆಗಳನ್ನು ಕದ್ದಾದರೂ ನೋಡಿದನು. ಅವನಿಗೆ ಜೀವನದ ಸಮಸ್ಯೆಗಳ ಸಮಗ್ರ ಕಲ್ಪನೆಯು ಆಗತೊಡಗಿತು; ಸತ್ಯವನ್ನು ಅರಿಯಲು ಹವಣಿಸಬೇಕೆಂಬ ಹವ್ಯಾಸವು ಹುಟ್ಟಿತು; ತನ್ನ ಕೊಡಕಿನಕಿಂತ ಇಡಿಯ ಜಗತ್ತಿನ ಜಂಜಾಟವು ಹೆಚ್ಚು ಕಠಿಣವೆಂದು ತೋರಿತು.

ತಾನು ಕಂಡಲ್ಲಿ ಬಾಳಿನ ಎಲ್ಲ ಪರಿಗಳನ್ನು ತಿಳಿದುಕೊಂಡು ಆ ತಿಳಿವಳಿಕೆಯಿಂದಲೇ ತನ್ನ ಜೀವಕ್ಕೆ ಹಗುರನ್ನು ಬೀರುವ ಬುದ್ಧಿಯು ಅವನಲ್ಲಿ ಬೇರೂರಹತ್ತಿತು. ದುಃಖವನ್ನು ಇದಿರುಗೊಂಡು ಸುಖದಲ್ಲಿ ಅದನ್ನು ರೂಪಾಂತರಗೊಳಿಸಬೇಕೆಂಬ ಆಶಾವಾದವು ಬಲಪಟ್ಟಿತು. ಸತ್ಯಕಾಮರಿಗೂ ಆನಂದಮೂರ್ತಿಗಳಿಗೂ ತನ್ನ ಮನಸದಲ್ಲಿಯೇ ನೂರಾರು ಸಲ ವಂದನೆಗಳನ್ನು ಸಲ್ಲಿಸಿದನು.

ಒಂದು ಆದಿತ್ಯವಾರ ಬೆಳಿಗ್ಗೆ ಸತ್ಯಕಾಮರು ತಮ್ಮ ನಿತ್ಯವಿಧಿಗಳನ್ನು ತೀರಿಸಿ ಓದುವ ಕುರ್ಚಿಗೆ ಬಂದರು. ಇಂದು ಶಾಲೆಯ ಅವಸರವಿರಲಿಲ್ಲ. ಎರಡು ಮೂರು ದಿನಗಳಿಂದ ಬಹಳ ಗಂಭೀರವಾಗಿ ಯೋಚಿಸುತ್ತಿದ್ದ ಯಾವುದೋ ಒಂದು ವಿಷಯವು ಇಂದು ಬಗೆಹರಿದಂತೆ ಮುಖಚರ್ಯೆಯು ತುಂಬಾ ಪ್ರಫುಲ್ಲವಾಗಿತ್ತು. ತಮ್ಮ ಆಸನದಲ್ಲಿ ಕುಳಿತು ಹರಿದಾಡುತ್ತಿರುವ ಹೊರಗಿನ ಜಗತ್ತನ್ನು ನೋಡುತ್ತ ನಡುನಡುವೆ 'ತಮೇವೈಕಂ ಜಾನಥ ಆತ್ಮಾನಂ' ಎಂದು ತಿರುತಿರುಗಿ ತಮ್ಮೊಳಗೆ ಗುಣುಗುಣಿಸುತ್ತಿದ್ದರು. ಹತ್ತಿರದ ಕುರ್ಚಿಯಲ್ಲಿ ಕುಳಿತ ರಾಮಣ್ಣನು 'ದೇವರ ಅಸ್ತಿತ್ವ'ದ ಬಗ್ಗೆ ಒಂದು ಇಂಗ್ಲಿಶ್ ಪುಸ್ತಕವನ್ನು ಲಕ್ಷ್ಯಪೂರ್ವಕವಾಗಿ ಓದುತ್ತಿದ್ದನು. ಓದಿದ ಹಾಗೆ ಸತ್ಯಕಾಮರಿಗೆ ತನ್ನ ಕೆಲವು ಸಂಶಯಗಳನ್ನು ಕೇಳಬೇಕೆಂದು ಜೀವ ಹಾತೊರೆಯಿತು. ಆದರೆ ಅವರು ಏನೆನ್ನುವರೋ ಎಂಬ ಭಯವು ಬಿಟ್ಟಿರಲಿಲ್ಲ. ಅವರ ಕಡೆ ಮುಖವೆತ್ತಿ ನೋಡಿದನು. ಪ್ರಸನ್ನ ಕಳೆಯೊಂದು ಮೂಡಿತ್ತು. ಅದರಿಂದ ಹುರಿಗೊಂಡು 'ಸತ್ಯಕಾಮರೇ, ನನ್ನದೊಂದು ಪ್ರಶ್ನೆಯಿದೆ, ಕೇಳಲೇ?' ಎಂದನು.

'ಕೇಳು.' ಎಂದು ಒಮ್ಮೆಲೆ ಉತ್ತರ ಬಂದಿತು. ಆದರೆ ಮರುಕ್ಷಣದಲ್ಲಿ ಸತ್ಯಕಾಮರು ಮುಂದೆ ಹೇಳಿದರು: 'ರಾಮಣ್ಣ, ನೀನು ಬರಬರುತ್ತ ನನ್ನನ್ನು ಮಾತಿಗೆ ಎಳೆಯುತ್ತಿರುವೆ. ಸತ್ಯದ ಮೇಲಿನ ಪ್ರೇಮದಿಂದ ಒಲ್ಲದಾಗಿದ್ದರೂ ಅಂದು ಮಾತಾಡಲಿಕ್ಕೆ ಒಪ್ಪಿ ಸಭೆಗೆ ಹೋದೆ. ಪೂರ್ವಪರಿಚಯ-ಸಮಾರೋಪಗಳು ಬೇಡವೆಂದು ನಿರ್ಬಂಧ ಹಾಕಿ ಮಾತಾಡಿ ಬಂದೆ. ಆದರೆ ಆ ಮಾತೇ ನನ್ನ ವ್ರತ ಮುರಿಯಿತು; ಅನುತಾಪ ಎಣಿಕ್ಕಿತು. ಅಂಥ ಹೊತ್ತಿನಲ್ಲಿ ನೀನು ಬೆಂಬತ್ತಿ ಬಂದೆ. ನನಗೆ ಯಾರೂ ಬೇಡವಾದಾಗ ನೀನು

ನನ್ನ ಅಂತಃಕರಣಕ್ಕೆ ಮುತ್ತಿಗೆ ಹಾಕಿದೆ. ಈಗ ನೀನು ಇಲ್ಲಿ ಇರಹತ್ತಿರುವೆ. ಅದೇಕೊ ನಿನ್ನೊಬ್ಬನ ಕೂಡ ಇರಬೇಕು, ಮಾತಾಡಬೇಕು ಎಂದು ಆಗೀಗ ಅನಿಸುತ್ತಿದೆ.'

ರಾಮಣ್ಣನಿಗೆ ಈ ನುಡಿಗಳನ್ನು ಕೇಳಿ ಆಕಾಶವಾಣಿಯನ್ನು ಕೇಳಿ ದಷ್ಟು ಹರುಷವು ರೋಮರೋಮದಲ್ಲಿ ಹರಿಯಿತು. 'ನನಗೆ ಕೆಲಸವು ದೊರೆಯದಿದ್ದರೂ ಸರಿ, ನನ್ನ ಗುರುಗಳ ಮನ್ನಣೆ ದೊರೆಯಿತು, ಸಾಕು' ಎಂದುಕೊಂಡು ಉಬ್ಬಿದನು. ಆದರೂ ತನ್ನಿಂದ ಸತ್ಯಕಾಮರ ನಿತ್ಯಕ್ರಮಕ್ಕೆ ಬಾಧೆಯುಂಟಾಗಬಾರದೆಂದು 'ಅವರಿಂದ ನಿಮ್ಮ ವ್ರತಕ್ಕೆ ಭಂಗ ಬರುವದಿ ಲ್ಲವೇ ?' ಎಂದು ಕೇಳಿದನು.

'ಬರುವದು, ರಾಮಣ್ಣಾ. ಹೇಗೋ ಬರುವದಕ್ಕಿಂತ ಹೀಗೆ ಬರಲಿ ಎನ್ನಬೇಕು. ನಾನೂ ಒಬ್ಬ ಮನುಷ್ಯ-ದುರ್ಬಲ ಮನುಷ್ಯ! ನನ್ನ ಜೀವನ ವೊಂದು ದೊಡ್ಡ ಶಾಪ! ಮನುಷ್ಯನಿಗೆ ಬರೀ ಬುದ್ಧಿಯಿದ್ದು ಪ್ರಯೋಜನ ವಿಲ್ಲ; ದೇವಕೃಪೆ ಬೇಕು, ದೇವಕೃಪೆ!' ಎಂದು ಸತ್ಯಕಾಮರು ಉತ್ತರ ಕೊಟ್ಟರು.

ಅವರ ಕೊನೆಯ ಮಾತು ಕೇಳಿ ತಾನು ಓದುತ್ತಿದ್ದ ಪುಸ್ತಕ, ತಾನು ಕೇಳಬೇಕೆಂದ ಪ್ರಶ್ನೆ ನೆನಪಿನಲ್ಲಿ ಮರಳಿದವು. 'ಹೌದು ಗುರುಗಳೇ, ದೇವನು ನಿಜವಾಗಿ ಇರುವನೆಂದು ನಿಮಗೆ ತೋರುವದೇ? ಇಂಗ್ಲಿಶಿನಲ್ಲಿ ಎರಡೂ ಕಡೆಯಿಂದ ವಾದಿಸುವ ಪುಸ್ತಕಗಳಿವೆ. ಸತ್ಯವು ಯಾವದು ಇದರಲ್ಲಿ ?'

'ಸತ್ಯ. ಅದೇ ನನ್ನ ನಿತ್ಯಶೋಧದ ಧ್ರುವತಾರೆ. ಅದಕ್ಕಾಗಿಯೇ ಈ ನನ್ನ ಜೀವನವೆಲ್ಲ ಅರ್ಪಿತವಾಗಿದೆ. ದೇವನನ್ನು ತಿಳಿಯುವ ಮೊದಲು ನಾವು ಸತ್ಯವನ್ನು ತಿಳಿಯಬೇಕು; ಸತ್ಯದ ಬಗ್ಗೆ ಸತ್ಯವನ್ನು ಕಾಣಬೇಕು. ಸತ್ಯ ಎಂದರೆ ಸ್ಥೂಲವಾದ ಒಂದು ವಸ್ತು, ಅದನ್ನು ನಾವು ತಿಳಿದಿದ್ದೇವೆ, ಎನ್ನುವವರೆಗೆ ಮಾನವಜಾತಿಯ ಉದ್ಧಾರವಿಲ್ಲ. ಸತ್ಯವು ಒಂದಾದರೂ ಸೂಕ್ಷ್ಮ, ಅನೇಕ, ಅಗಮ್ಯ ಎಂದು ತಿಳಿಯುವ ಯೋಗ್ಯತೆಯು ಮನುಷ್ಯ ಕೋಟಿಗೆ ಎಂದು ಬರುವದೋ ಅಂದೇ ಜಗತ್ತಿನ ಎಲ್ಲ ಅಸುಖ-ಅಶಾಂತಿ ಗಳು ಅದೃಶ್ಯವಾಗುವವು. ನಾನು ಓದಿ, ಬಗೆದು, ಅನುಭವಿಸಿ, ಕಂಡ ಮಾತಿದು ರಾಮಣ್ಣಾ. ವಿಶ್ವದ ಮುಂದೆ ನಾವು ನಮ್ರರಾಗಬೇಕು. ವಿಜ್ಞಾನದ ದರ್ಪವು

ಬೇಡ, ಅಜ್ಞಾನದ ವಿನಯವು ಬೇಕು. 'ಅವಿಜ್ಞಾತಂ ವಿಜಾನತಾಂ ವಿಜ್ಞಾತ-ಮವಿಜಾನತಾಂ' ಎಂದು ಉಪನಿಷತ್ತು ಸಾರಿಲ್ಲವೇ ? ಉಪನಿಷತ್ತಿನ ಋಷಿಗಳಿಗೆ ಮಾತ್ರ ಸತ್ಯದ ನಿಜವಾದ ತಿಳಿವು ಇತ್ತೆಂದು ನನಗೆ ಸಾವಿರ ಸಲ ಅನಿಸಿಹೋಗಿದೆ. ಆಗಳೆ ದೇವನ ಬಗ್ಗೆ ಕೇಳಿದಿಯಲ್ಲವೇ ? ಉಪನಿಷತ್ತಿನ ಋಷಿ ಅನಿಸಿ ಹೋಗಿದೆ, ಆಗಳೆ ದೇವನ ಬಗ್ಗೆ ಕೇಳಿದಿಯಲ್ಲವೇ ? ಅದರ ತೊಡಕೂ ಹೀಗೇ. ನಮ್ಮ ತಿಳಿವಳಿಕೆಯ ಕೊರತೆಯಿಂದ ನಮ್ಮ ದುಃಖಗಳು ಹುಟ್ಟಿವೆ. ದೇವರು ಇದ್ದಾನೆ ಎಂದು ಸಾಧಿಸುವವರ ತಲೆಯಲ್ಲಿ ನೂರಾರು ದೇವರುಗಳು ಇವೆ. ದೇವರು ಇಲ್ಲ ಎಂಬುವವರು ಆ ತಲೆಯಲ್ಲಿಯ ದೇವರುಗಳ ಕೂಡ ಹೋರಾಡಿ ಅವನ್ನು ಕಿತ್ತೊಗೆಯುವರು. ದೇವರು ಇದ್ದಾನೆ–ತಿಳಿಯುವವರಿಗೆ ಇದ್ದಾನೆ. ದೇವರು ಇಲ್ಲ–ನಾವು ತಿಳಿದಂತೆ ಇಲ್ಲ. ಇದು ಸತ್ಯದ ಸೂಕ್ಷ್ಮ ರಾಮಣ್ಣ, ಬರೀ ಯುಕ್ತಿಯ ಜಾಲವಲ್ಲ.'

ಸತ್ಯಕಾಮರು ಇಲ್ಲಿಗೆ ಯಾಕೋ ಸ್ತಬ್ಧರಾದರು. ಭಾವನೆಯಿಂದ ಮುಖ ಕೆಂಪೇರಿತು. ತಮ್ಮ ಮೌನವನ್ನು ಮುರಿದು ಬಹಳ ತಿಳಿದವರಂತೆ ನಾಲಿಗೆಯನ್ನು ಹರಿಬಿಟ್ಟೆನೆಂದು ಅವರಿಗೆ ತೋರಿತೇನೊ, ಕಣ್ಣ ತುದಿಗೆ ಮುತ್ತುಹನಿ ಹೊಳೆದವು. ರಾಮಣ್ಣನು ಅವರ ಸೂಕ್ಷ್ಮ ವಿಚಾರಸರಣಿಗೂ ವಾಣಿಯ ಪ್ರವಾಹಕ್ಕೂ ಬೆರಗಾಗಿ ತನ್ನ ಆಯುಷ್ಯದಲ್ಲಿ ಒಂದು ಅಮೃತ ನಿಮಿಷವನ್ನು ಅನುಭವಿಸಿದಂತೆ ಸುಮ್ಮನೆ ಕುಳಿತು ಕೇಳಿದನು. ತನ್ನಲ್ಲಿ ಹೊಸ ಒಂದು ತಿಳಿವಳಿಕೆಯ ಕಣ್ಣು ತೆರೆಯಿತೆಂದು ಕಂಡುಕೊಂಡನು. ಸತ್ಯಕಾಮರ ಭಾವಾವೇಶವನ್ನು ಅರಿತು ಮಾತನ್ನು ಮುಂದರಿಸದೆ ಅಲ್ಲಿಂದ ಎದ್ದುಹೋದನು.

ಈ ನಡುವೆ ಆನಂದಮೂರ್ತಿಗಳಿಗೆ ರಾಮಣ್ಣನು ಒಂದು ಉದ್ದಾದ ಪತ್ರ ಬರೆದು ತನ್ನ ಇತಿವೃತ್ತವನ್ನೂ ಮನಃಸ್ಥಿತಿಯನ್ನೂ ಅರುಹಿದ್ದನು. ಸತ್ಯಕಾಮರೊಡನೆ ಮೊನ್ನೆಯ ದೀರ್ಘಸಂವಾದವು ನಡೆದ ಕೆಲವು ದಿನಗಳ ತರುವಾಯ ಮೂರ್ತಿಗಳಿಂದ ಒಂದು ದೊಡ್ಡ ಉತ್ತರವು ಬಂದಿತು. ಅದು ಅವನಿಗೆ ಹಿಗ್ಗಿನ ಹಿರಿಮಳೆಯನ್ನೆ ತಂದಂತಾಯಿತು. ಹತ್ತು ಸಲ ಅದನ್ನು ಓದಿದನು. ಮೂರ್ತಿಗಳ ಶುದ್ಧ ಪ್ರೇಮ, ಕಾವ್ಯಶಕ್ತಿ, ಆಶಾವಾದ ಇವುಗಳಿಗೋಸ್ಕರ ಅವರನ್ನು ನೆನೆನೆನೆದು ನಲಿದನು. ಸತ್ಯಕಾಮರ ಸತ್ಯ, ಆನಂದಮೂರ್ತಿಗಳ

**ಆನಂದ** ಈ ಎರಡೂ ತನ್ನ ಬಾಳುವೆಯ ಸೊತ್ತುಗಳಿರುವಾಗ ಉಳಿದ ಒಡ ತನವೇನು ಮಾಡೀತು ಎಂದು ಕೊಂಡನು. ಈ ಪತ್ರದಲ್ಲಿ ಕನ್ನಡನಾಡಿನ ಬಗ್ಗೆ ಕೆಲವು ಆತ್ಮೀಯವಾದ ಮಾತುಗಳನ್ನು ಮೂರ್ತಿಗಳು ಬರೆದಿದ್ದರು: 'ಇಂದಿನ ಕನ್ನಡನಾಡು ಹೇಗೋ ಬದುಕಿದೆ, ಅದರ ಸತ್ವವೆಲ್ಲ ಹೋಗಿದೆ. ಭಾರತದ ಪುಣ್ಯದಿಂದ ರಾಜಕೀಯ ಜೀವನದ ಒಂದು ವಾಹಿನಿ ಹರಿಯುತ್ತಿದೆ. ಅದ ರೊಡನೆ ಕನ್ನಡ ಸಂಸ್ಕೃತಿಯ ಜೀವನವಿನ್ನೂ ಬೆರೆತಿಲ್ಲ. ಕನ್ನಡ ಮತ್ತು ಭಾರತ ಎರಡನ್ನೂ ಸೇವಿಸಲು ಸಾಧ್ಯವಿದೆ ಎಂದು ನಮ್ಮ ಜನ ತಿಳಿಯ ಲೊಲ್ಲದು. ಕನ್ನಡದರ್ಶನದಲ್ಲಿ ವಿಶ್ವದರ್ಶನವಿದೆ ಎಂದು ತಿಳಿದು ಹಾಗೆ ನಡೆದು ಜಗತ್ತಿಗೆ ಸಾರುವ ಮುಂದಾಳುಗಳಿಲ್ಲ, ಕೆಲಸಗಾರರಿಲ್ಲ. ಇದ್ದವರಲ್ಲಿ ಒಂದು ದೊಡ್ಡ ಗುಣ, ಒಂದು ದೊಡ್ಡ ದೋಷ. ಒಬ್ಬರೊಬ್ಬರಿಗೆ ಹೊಂದಿಕೆಯಿಲ್ಲ. ವಾಮಣ್ಣಾ, ನಿನಗೆಂದು ಆತ್ಮೀಯವಾದ ಓಲೆಯಲ್ಲಿ ಇದನ್ನು ಬರೆಯುತ್ತಿದ್ದೇನೆ. ಸಾರ್ವಜನಿಕರಲ್ಲಿ ಇಂದು ಈ ಮಾತನ್ನು ಹೇಳಿದರೆ ಸರಿಯಾಗಿ ತಿಳಿದು ಕೊಳ್ಳುವರೆಂಬ ಭರವಸೆಯಿಲ್ಲ. ನೀನು ಸತ್ಯಕಾಮರ ಹತ್ತಿರ ಇದ್ದುದು ನಿನ್ನ ಪುಣ್ಯವೆಂದೇ ತಿಳಿ. ಅವರಿಗೆ ಕೆಲಸವಿದೆ, ನಿನಗೂ ಕೆಲಸ ಸಿಕ್ಕಿತು. ಆದರೆ ಅವರೂ ನೀನೂ ಕನ್ನಡನಾಡಿನಲ್ಲಿದ್ದು ಕನ್ನಡಕ್ಕೆಂದು ಹೆಣಗಲು ಬರಬಾರದೇ? ಬರುವದೇಕೆ ಅಸಾಧ್ಯ?' ಈ ಪತ್ರಭಾಗವು ವಾಮಣ್ಣನ ಚಿತ್ತದಲ್ಲಿ ಉಜ್ಜೊತ್ತಿದಂತೆ ನಿಂತಿತು. ಹೊಸಭಾವಗಳನ್ನು ಕೆರಳಿಸಿ ಹೊಸಹಾದಿಗೆ ಅವನನ್ನು ಕರೆಯಿತು. ಆದರೆ ಪರಿಸ್ಥಿತಿಯು ಹೋಗಗೊಡಲಿಲ್ಲ. ತನ್ನ ಅಶಕ್ತಿಗಾಗಿ ಮರ ಮರ ಮರುಗಿದನು. 'ಕನ್ನಡವೇ, ನನ್ನನ್ನು ಕರೆಯಬೇಡ, ನಾನು ಕೈಲಾಗದ ಹೇಡಿ!' ಎಂದು ಗೋಳಿಟ್ಟನು. ಅಂದೇ ರಾತ್ರಿಯಲ್ಲಿ ಆನಂದಮೂರ್ತಿಗಳ ಪರಿಚಯವಿರುವುದೊ ಹೇಗೆಂದು ಸತ್ಯಕಾಮರನ್ನು ಕೇಳಿದನು. 'ನಾನು ಧಾರವಾಡದಲ್ಲಿ ಇದ್ದಾಗ ಕಂಡಂತಿದೆ, ಅದೆಲ್ಲ ಈಗ ಹೋದ ಜನ್ಮ' ಎಂದರು. ತನಗೆ ಅವರ ಪರಿಚಯವು ಚೆನ್ನಾಗಿರುವುದೆಂದೂ ಅವರಿಂದ ಒಳ್ಳೇ ಸ್ಫೂರ್ತಿ ದಾಯಕವಾದ ದೊಡ್ಡ ಪತ್ರವೊಂದು ಬಂದಿರುವುದೆಂದೂ ವಾಮಣ್ಣ ಹೇಳಿ ದನು. ಸತ್ಯಕಾಮರು ಅದನ್ನು ತೆಪ್ಪಗೆ ಕುಳಿತು ಕೇಳಿದರು. ವಾಮಣ್ಣನು ಅಷ್ಟಕ್ಕೆ ಆ ವಿಷಯವನ್ನು ಬಿಡಬೇಕಾಗಿತ್ತು. ಆದರೆ ಆ ಪತ್ರ ಬಂದ ಕ್ಷಣ ದಿಂದ ಅವನ ಮನಸ್ಸಿನ ಮೇಲಾದ ಗಾಢ ಪರಿಣಾಮದಿಂದಲೋ ತಾರುಣ್ಯದ

ಉತ್ಸಾಹದಿಂದಲೊ ಅವನು ಬಹಳ ಕಳಕಳಿಯಿಂದ ಆಡಿದನು. ' ಸತ್ಯಕಾಮರೇ, ಕನ್ನಡನಾಡಿಗೆ ನೀವು ಮರಳಿ ಹೋಗಿ ಕನ್ನಡದ ಸಲುವಾಗಿ ದುಡಿಯುವದು ಸಾಧ್ಯವಿಲ್ಲವೇ? '

ಇದನ್ನು ಕೇಳಿದೊಡನೆ ಸತ್ಯಕಾಮರು ಮೋರೆಯನ್ನು ಮೇಲೆತ್ತಿ ವಿಪರೀತ ವೇದನೆಯಾದಂತೆ ಗಂಟುಹಾಕಿ ತಡೆತಡೆದ ಆವೇಗದಿಂದ ಆಡಿದರು. 'ಬೇಡ ವಾಮಣ್ಣಾ, ಆ ಮಾತನ್ನೆತ್ತಬೇಡ, ಎಂದಿಗೂ ಎತ್ತಬೇಡ. ಅದನ್ನು ನೆನೆದರೆ ನನ್ನ ಎದೆಯಲ್ಲಿ ನೂರು ಜ್ವಾಲಾಮುಖಿಗಳು ಬಾಯಿ ತೆರೆಯುವವು. ಒಂದು ಕಾಲಕ್ಕೆ ಆ ಹಿರಿಯಾಸೆ ಇಟ್ಟುಕೊಂಡು ಪರದೇಶದಿಂದ ಸಿಡಿಲಿನಂತೆ ನಿಜಪ್ರಾಂತಕ್ಕೆ ಬಂದೆ. ತಿರುಗಿ ನಾನೇ ಸುಟ್ಟು ಬೂದಿಯಾಗಿ ಈಗ ಮೂಲೆ ಗುಂಪಾದೆ. ತಮಗೆ ಆಗದ ಮಾತು ಆಡಬಾರದು, ನೆನೆಯಬಾರದು! '

ವಾಮಣ್ಣನಿಗೆ ವಿದ್ಯುತ್ತಿನ ತೀವ್ರ ಚುರುಕ, ತಟ್ಟಿದಂತಾಯಿತು. ಆದರೂ ತಾಳ್ಮೆಯನ್ನು ಬಿಡದೆ 'ಆದರೆ ಸತ್ಯಕಾಮರೇ' ಆಗ ಉದಾಸೀನವಾದ ನಾಡು ಈಗ ನಿಮ್ಮನ್ನು ಬರಮಾಡಿಕೊಳ್ಳಲು ಸಿದ್ಧವಾಗಿದೆ. ' ಎಂದು ಹೆದರುತ್ತ ಹೇಳಿದನು.

' ಸಾಕು, ವಾಮಣ್ಣಾ ಸಾಕು. ಯಾರು ಉದಾಸೀನ, ಯಾರು ಉತ್ಸಾಹಿತ ಎಂಬುದು ನನಗೀಗ ಬೇಕಿಲ್ಲ. ನನ್ನ ದುಃಖ ನಿನಗೆ ತಿಳಿಯದು. ಆ ವಿಷಯ ನಿಲ್ಲಿಸು ' ಎಂದು ಸತ್ಯಕಾಮರು ಟೇಬಲ್ಲಿನ ಮೇಲೆ ಕೈಯೂರಿ ಮೊಗ ಮುಚ್ಚಿಕೊಂಡರು.

' ನನ್ನ ತಪ್ಪಾಯಿತು, ಕ್ಷಮಿಸಿರಿ ' ಎಂದು ವಾಮಣ್ಣನು ತಣ್ಣಗಾದನು. ಸತ್ಯಕಾಮರು ಅದೆಷ್ಟೋ ಹೊತ್ತು ಸ್ತಬ್ಧರಾಗಿಯೆ ಕುಳಿತರು. ಅವರ ಆಯುಷ್ಯದಲ್ಲಿಯ ಅಗಾಧವೈರಾಗ್ಯಕ್ಕೆ ಕಾರಣವಾದ ಮತ್ತೊಂದು ಮಹಾ ಸಂಗತಿಯನ್ನು ವಾಮಣ್ಣನು ಅರಿತುಕೊಂಡು ತನ್ನ ಸ್ಥಳಕ್ಕೆ ತೆರಳಿದನು.

ಮರುದಿವಸವೇ ಅವನ ಹೊಟ್ಟೆಪಾಡಿನ ಅಧಿದೇವತೆ ಕಡೆಗೊಮ್ಮೆ ಒಲಿದಳು. ಹಿಂದೆ ಅವನು ಬೆಟ್ಟಿಯಾಗಿ ಬಂದ 'ನಿರುದ್ಯೋಗಸಮಿತಿ'ಯ ಅಧ್ಯಕ್ಷರಿಂದ ತಮ್ಮನ್ನು ಕಾಣಬೇಕೆಂದು ಅವನಿಗೆ ಪತ್ರಬಂದಿತು. ಪರೇಳದಲ್ಲಿಯ ಮಂಗಲದಾಸ ಗಿರಣಿಯ ಕಾರಕೂನ ಜಾಗೆಯು ತಿಂಗಳ ೫೦ ರೂಪಾಯಿ ಸಂಬಳಕ್ಕೆ ದೊರೆಯುವುದೆಂದು ಅದರಲ್ಲಿ ಬರೆದಿತ್ತು. ಕೂಡಲೆ ಅವರನ್ನು

ಕಂಡು ಆ ಕೆಲಸಕ್ಕೆ ವಾಮಣ್ಣನು ತನ್ನ ಒಪ್ಪಿಗೆಯಿತ್ತನು; ಧಾರವಾಡಕ್ಕೆ ತಿಳಿಸಿದನು. ಆದರೆ ಕನ್ನಡತಾಯಿಯ ಕರೆಯು ಆನಂದಮೂರ್ತಿಗಳ ಎದೆಯಿಂದ ಹೊರಟು ಅವನ ಎದೆಯಲ್ಲಿ ಇನ್ನೂ ಮರುದನಿಯನ್ನು ಹುಟ್ಟಿಸುತ್ತಲೇ ಇತ್ತು.

---

## ಪ್ರಕರಣ ೬.

ಮುರಲಿಯು ಕಾಲೇಜಿನ ಮೊದಲನೆಯ ಟರ್ಮ್ ತೀರುವುದಕ್ಕೆ ಎಷ್ಟೋ ಮೊದಲು ತನ್ನ ಕಲ್ಲಳ್ಳಿಗೆ ಹೊರಟನು. ಹೇಳದೆ ಕೇಳದೆ ರಾತ್ರಿಯ ಗಾಡಿಗೆ ಓಡಿ ಹೋದನೆಂದು ಅವನ ಕಿಡಿಗೇಡಿ ಮಿತ್ರರು ಹೇಳಬಹುದು. ಅವನು ಮಾತ್ರ ಯುದ್ಧದಲ್ಲಿ ಗೆದ್ದ ವೀರನಂತೆ ಬಿಂಕದಿಂದಲೇ ಹೊರಟನು. ಕಲ್ಲಳ್ಳಿಗೆ ಹೋಗಬೇಕಾದರೆ ಒಂದು ಚಿಕ್ಕ ಸ್ಟೇಶನ್ನಿಗೆ ಇಳಿದು ಹತ್ತು ಮೈಲು ಬಂಡಿಯ ದಾರಿಯಿಂದ ಹೋಗಬೇಕು. ಮುಂಜಾನೆ ಎಂಟು ಗಂಟೆಗೆ ಮುರಲಿಯು ಉಗಿಬಂಡಿಯಿಂದ ಆ ಸ್ಟೇಶನ್ನಿನಲ್ಲಿ ಇಳಿದು ನಿಂತನು. ತನ್ನ ಪೆಟ್ಟಿಗೆ-ಹಾಸಿಗೆಗಳನ್ನು ಹೊರಲಿಕ್ಕೆ ಅಲ್ಲಿ ಹಮಾಲರು ಯಾರೂ ಇಲ್ಲ. ಗಾಡಿಯು ಹೋದಮೇಲೆ ಒಂದು ಡಬ್ಬಿಯಲ್ಲಿ ಕೊನೆಯದಾಗಿ ಉಳಿದ ಸಿಗರೇಟೊಂದು ಸೇದುತ್ತ ಸ್ಟೇಶನ್ನೆಲ್ಲ ತಿರುಗಿದನು. ತಲೆಯ ಮೇಲೆ ಟೊಪ್ಪಿಗೆಯಿಲ್ಲ. ಕ್ರಾಪಿನ ಕೂದಲೆಲ್ಲ ಚದರಿ ನಿಂತಿವೆ. ವಿಚಾರಹೀನವಾದ ತಲೆಯಲ್ಲಿ ಏನೇನೋ ವಿಚಾರಗಳು ಏಳುತ್ತಿವೆ. ಕಾಲೇಜ ಕನ್ನಿಕೆಯರನ್ನು ಒಮ್ಮೆ ನೆನಸುವನು, ಊರಿಗೆ ಹೋಗಿ ಏನು ಹೇಳಬೇಕೆಂಬುದನ್ನು ಒಮ್ಮೆ ಬಗೆಯುತ್ತಿರುವನು.

ಇಷ್ಟರಲ್ಲಿ ಸ್ಟೇಶನ್‌ಮೇಲಿನ ಪೋರ್ಟರ ಜನರೂ ತಮ್ಮ ಕಿರುಮನೆಗಳನ್ನು ಸೇರಿಬಿಟ್ಟಿದ್ದರು. ಮುರಲಿಯು ತನ್ನ ಸಾಮಾನುಗಳ ಹತ್ತಿರ ಹೋಗಿ ಸುತ್ತು ಮುತ್ತು ನೋಡಿದನು: ಪ್ರವಾಸಿಕರು ನಿಲ್ಲುವೆಡೆಯು ಹೊರಗಡೆ ತುಸು ದೂರದಲ್ಲಿತ್ತು. ಅಲ್ಲಿಗೆ ತಾನೇ ಹೇಗೆ ಸಾಮಾನು ಒಯ್ಯಬೇಕು ಎಂಬುದು ದೊಡ್ಡ ಪ್ರಶ್ನೆ ಅವನಿಗೆ. ಧಾರವಾಡ-ಹುಬ್ಬಳ್ಳಿ ಸ್ಟೇಶನ್ನುಗಳಲ್ಲಿ ಹಮಾಲರ ಮೇಲೆ ಸಾಮಾನು ಹೊರಿಸಿ ಕೈಬೀಸುತ್ತ ಬೆನ್ನು ಹಿಂದೆ

ಹೋದ ಮುರಲಿಗೆ ಈಗ ತಾನೇ ಹಮಾಲನಾಗುವುದೆಂದರೆ ಬಹಳ ನಾಚಿಕೆ ಗೇಡು ಎನಿಸಿತು. ಕ್ಷಣಹೊತ್ತು ರೇಲ್ವೆ ಅಧಿಕಾರಿಗಳನ್ನು ಶಪಿಸಿದನು. ಪ್ರತಿ ಯೊಂದು ಸಿಲ್ದಾಣದಲ್ಲಿಯೂ ಕೂಲಿಯವರನ್ನು ಯಾಕೆ ಇಡಬಾರದು? ಎನ್ನುತ್ತ ನಿರ್ವಾಹವಿಲ್ಲದೆ ಸಾಮಾನುಗಳನ್ನು ಎರಡು ಕೈಗಳಲ್ಲಿ ಎತ್ತಿ ಎಕ್ಕದ ಎತ್ತಿನಂತೆ ಮೆಲ್ಲಗೆ ನಡೆದನು. ಅಷ್ಟರಲ್ಲಿ ಇದಿರಿಗೆ ಸ್ಟೇಶನ್‌ಮಾಸ್ತರು ಸುಳಿದರು. ಕೂಡಲೆ ಸಾಮಾನು ಕೆಳಗಿಟ್ಟು ನಿಂತನು. ಜೀವಕ್ಕೆ ಖುಷೀಲಾ ಯಿತು.

'ಏನು ಸಾರ್, ಎಲ್ಲಿಗೆ ಹೋಗುತ್ತೀರಿ?' ಎಂದು ಮಾಸ್ತರರು ಸಹಜ ವಾಗಿ ಕೇಳಿದರು.

'ಎಲ್ಲಿಗೇನು, ನರಕಕ್ಕೆ!' ಎಂದು ಸಿಟ್ಟಿನಿಂದ ಉತ್ತರ ಕೊಟ್ಟು ಸಾಮಾನುಗಳನ್ನು ಅಲ್ಲಿಯೇ ಬಿಟ್ಟು ಹೊರಗೆ ವಾಹನವೇನಿದೆ ನೋಡ ಬೇಕೆಂದು ಹೋದನು. ಅವನ ಸುದೈವದಿಂದ ಕಲ್ಲಳ್ಳಿಗೆ ಚೀಲ ಹೇರಿಕೊಂಡು ನಡೆದ ಬಂಡಿಯೊಂದು ಇತ್ತು. ಅವನು ಕೇಳಿದ ಬಾಡಿಗೆಗೆ ಒಪ್ಪಿ ಅವನಿಂ ದಲೇ ಸಾಮಾನು ತರಿಸಿದನು. ತಾನು ಗುಣುಗುಟ್ಟುತ್ತಲೆ ಗಾಡಿಯೇರಿ ಚೀಲದ ಮೇಲೆ ತನ್ನ ಹಾಸಿಗೆ ಉರುಳಿಸಿ ಟ್ರಂಕಿಗೆ ಆತು ಕೂತು ಹೊಸ ಡಬ್ಬಿಯನ್ನು ಒಡೆದು ಸಿಗರೇಟು ಹೊತ್ತಿಸಿದನು. ಗಾಡಿ ಹೊರಟಿತು. ಏರು ತಗ್ಗುಗಳಲ್ಲಿಯು ಅದರ ಧಡಿಕೆಗೆ ಗಾಡಿಯವನನ್ನು ಬಯ್ಯುತ್ತ ಮುರಲಿಯು ಮಧ್ಯಾಹ್ನ ಎರಡು ಗಂಟೆಗೆ ಊರು ಸೇರಿದನು. ಕುಲಕರ್ಣಿ ರಾಘಪ್ಪನವರು ಆದೇ ಊಟಮಾಡಿ ಎಲೆ ಅಡಿಕೆ ಹಾಕಿಕೊಳ್ಳುತ್ತ ಬಂಕದಲ್ಲಿ ಕುಳಿತಿದ್ದರು. ಮುರಲಿಯು ಮೋರೆ ಬಾಡಿಸಿಕೊಂಡು ಮನೆಯೊಳಕ್ಕೆ ಕಾಲಿಡಲು ಅವರಿಗೆ ಅವನೇ ಹೌದೆಂದು ನಂಬಿಗೆ ಹುಟ್ಟಲಿಲ್ಲ, ಕೊನೆಗೆ ತಿಳಿಯಿತು. ಗಾಬರಿಯಾಗಿ ಕೇಳಿದರು 'ಈಗ ಯಾಕೆ ಒಂದ್ಯೋ? ಜಡ್ಡುಗಿಡ್ಡಾಗೇದೇನು?'

'ಅದೇನೂ ಇಲ್ಲ' ಎಂದಿಷ್ಟೆ ಹೇಳಿ ಮುಗಿಸಿ ಅವನು ಜಳಕ-ಊಟ ಗಳನ್ನು ಮಾಡಿದನು. ಅವನ ತಾಯಿಗೂ ತಂಗೆಂದಿರಿಗೂ ಅವನ ಬರವು ಒಂದು ಹಬ್ಬವೇ ಆಯಿತು. ಈಗ ಅಭ್ಯಾಸದ ನಡುವೆ ಯಾಕೆ ಬಂದನೆಂಬ ದಿಗಿಲು ಅವರಿಗೆ ಬೀಳಲಿಲ್ಲ. ಆದರೆ ರಾಘಪ್ಪನವರು ಮತ್ತೆ ಮತ್ತೆ ಅವನನ್ನು ಕೇಳಹತ್ತಿದರು. ಅವನ ಟರ್ಮು ಇನ್ನೂ ಪೂರ್ತಿಯಾಗಿಲ್ಲೆಂದು ಅವರಿಗೆ

ಗೊತ್ತಿತ್ತು. ಅವನೇ ತನ್ನ ಹಿಂದಿನ ಪತ್ರದಲ್ಲಿ ಇನ್ನೂ ಒಂದು ತಿಂಗಳು ತಾನು ಇರಬೇಕಾಗುವುದೆಂದು ಬರೆದು ಐವತ್ತು ರೂಪಾಯಿ ತರಿಸಿಕೊಂಡಿದ್ದನು. ಆರು ತಿಂಗಳ ಪರೀಕ್ಷೆಗಾಗಿ ತಾನು ಎಡೆಬಿಡದೆ ಅಭ್ಯಾಸಮಾಡುತ್ತಿರುವುದರಿಂದ ಇನ್ನು ಮುಂದೆ ಕಾಗದ ಬರೆಯುವಷ್ಟು ಸಮಯ ಸಹ ತನಗೆ ದೊರೆಯಲಾರದೆಂಬೂ ತಿಳಿಸಿದ್ದನು. ಇಂಥವನು ಈಗ ಬಂದದ್ದೇಕೆ? ಎಂಬ ಪ್ರಶ್ನೆಗೆ ಬೇಗನೆ ಉತ್ತರವು ಹೊರಡಲಿಲ್ಲ. ಊಟವಾದೊಡನೆ ಪ್ರವಾಸದ ದಣುವಿನಿಂದ ಮುರಲಿಯು ಹಾಸಿಗೆ ಹರವಿ ನಿದ್ದೆ ಹೋದನು. ತಿರುಗಿ ಏಳಬೇಕಾದರೆ ಸಂಜೆಯ ಆರು ಬಡಿಯಿತು. ಎದ್ದೊಡನೆ ಚಹ-ಅವಲಕ್ಕಿಯ ಸಂಭ್ರಮವೆದ್ದಿತು. ಅಣ್ಣನು ಊರಿಗೆ ಹೋದ ತರುವಾಯ ಚಹಾ ಕಾಣದೆ ಇದ್ದ ತಂಗೆಂದಿರಿಗೆ ಈಗ ಹೇಳಬಾರದಷ್ಟು ಹಿಗ್ಗು. ಚಹ ಆಗುವುದೆಂದು ಮೊದಲು ಕುಣಿದರು; ಚಹ ಕುಡಿದು ಮತ್ತೆ ಕುಣಿದರು. ಎಲ್ಲವೂ ಆದ ಕೂಡಲೆ ಮುರಲಿಯು ತನ್ನ ಕೋಟು ಹಾಕಿಕೊಂಡು ತಂಗಿಗಳ ಬಳಗವನ್ನು ತಪ್ಪಿಸಿ ಒಬ್ಬನೇ ತಿರುಗಾಡಲಿಕ್ಕೆ ಹೋದನು. ಸಿಗರೇಟು ಸೇದದೆ ಬಹಳ ಹೊತ್ತಾದ್ದರಿಂದ ಜೀವವು ಚುರುಚುರು ಎನ್ನುತ್ತಿತ್ತು. ಯಾರೂ ಕಾಣದ ಕೊಳ್ಳಕ್ಕೆ ಹೋಗಿ ಬಿಳಿ ಬತ್ತಿಯನ್ನು ಹೊರದೆಗೆದು ಹೊತ್ತಿಸಿ ಅಪಾರವಾದ ಸುಖದಲ್ಲಿ ಮುಳುಗಿ ಸಂಜೆ ಕಳೆದನು. ಆಗಳೆ ತಾನು ಬಂದದ್ದಕ್ಕೆ ಹೇಳಬೇಕಾದ ಕಾರಣವನ್ನು ಸ್ಫೂರ್ತಿಯಿಂದ ಕಂಡುಕೊಂಡನು.

ರಾತ್ರಿಯೂಟದ ಹೊತ್ತಿಗೆ ರಾಘಪ್ಪನವರು ಮರಳಿ ತಮ್ಮ ಪ್ರಶ್ನೆಯನ್ನು ಮುರಲಿಗೆ ಕೇಳಿದರು. ಅವನ ಉತ್ತರಕ್ಕೆ ತಡವೇ ಆಗಲಿಲ್ಲ. 'ನೀವು ಕೇಳೇ ಇಲ್ಲವೇನು? ಧಾರವಾಡದೊಳಗೆ ಪ್ಲೇಗಿನ ಇಲಿ ಬೀಳಲಿಕ್ಕೆ ಹತ್ತಿರತವೆ. ನನ್ನ ಮಗ್ಗಲಿನ ಕೋಣೆಯಲ್ಲೇ ಮೊನ್ನೆ ಒಂದು ಇಲಿ ಸತ್ತು ಬಿದ್ದಿತು. ಅದರಿಂದ ನಮ್ಮ ರೆಕ್ಟರರೇ ನಮಗೆ ಊರಿಗೆ ಹೋಗೆಂದು ಕಳಿಸಿಕೊಟ್ಟರು.'

ರಾಘಪ್ಪನವರಿಗೆ ಮಗನ ಮಾತೇ ವೇದವಾಕ್ಯ. 'ನೀ ಬಂದದ್ದು ಹಂಗಾರ ಭಾಳ ಛಲೋ ಆಯಿತು' ಎಂದರು. ಪ್ರಕರಣವು ಮುಗಿಯಿತೆಂದು ನೋಡಿ ಮುರಲಿಯು ಸಮಾಧಾನಪಟ್ಟನು.

ಮುರಲಿಯು ತನ್ನೂರಿಗೆ ಒಂದು ಮನೆಯ ಬಳಗದಲ್ಲಿ ಯುವರಾಜನಂತೆ ಮೆರೆಯಹತ್ತಿದನು. ಮೊದಮೊದಲು ಸಚಿತ್ರವಾದ ಇಂಗ್ಲಿಶ್ ಪತ್ರಿಕೆಗಳನೂ

ಆರು ಪೆನಿಯ ಕಾದಂಬರಿಗಳನ್ನೂ ತಿರುವಿ ಹಾಕುವುದರಲ್ಲಿ ಮೂರು ನಾಲ್ಕು ದಿನಗಳನ್ನು ಕಳೆದನು. ಮುಂದೆ ಬೇಸರವು ಬರತೊಡಗಿತು. ಹಳ್ಳಿಯೂರಲ್ಲಿ ಅವನಿಗೆ ಬೇಕಾಗುವ ಸುಖದ ಸಲಕರಣೆಗಳಿಲ್ಲ, ಹರಟೆಗೂ ಆಟಕ್ಕೂ ಗೆಳೆಯರಿಲ್ಲ. ಹಿಂದುಸ್ಥಾನದಲ್ಲಿ ಈ ಹಳ್ಳಿಗಳು ಇಷ್ಟು ಯಾಕಿವೆ ಎಂದು ಅವನು ಕನಲಿದನು. ಜಗತ್ತೆಲ್ಲಾ ಪಟ್ಟಣಮಯವಾದರೆ ಎಷ್ಟು ಚೆಂದಾಗುವುದೆಂದು ಕನವರಿಸಿದನು. ಕಲ್ಲಳ್ಳಿಯಲ್ಲಿ ಅವನ ಮೈ, ಮನಸ್ಸೆಲ್ಲಾ ಧಾರವಾಡದಲ್ಲಿ. ಕಾಲೇಜಿನ ಬಣ್ಣ ಬಣ್ಣದ ಆಟ-ನೋಟಗಳು ಅವನ ಕಣ್ಮುಂದೆ ಯಾವಾಗಲೂ ಸುಳಿಯುತ್ತಿದ್ದವು. ಅವನ ಕನಸುಗಳಲ್ಲಿ ಕಾಲೇಜ ರಮಣಿಯರ ಲೀಲೆಗಳ ಚಲಚ್ಚಿತ್ರಗಳೇ ತುಂಬಿರುತ್ತಿದ್ದವು. ಹುಚ್ಚು ಹರೆಯವು ತಿಳಿಯದೆ ಅವನನ್ನು ಮುತ್ತುತ್ತಿತ್ತು. ಹಳ್ಳಿಯ ಓಣಿಗಳಲ್ಲಿ ಒಮ್ಮೊಮ್ಮೆ ಬೆಡಗಿನ ವೇಷದಲ್ಲಿ ತಿರುಗುತ್ತ ಮನೆಮನೆಯ ಹೆಂಗಳೆಯರನ್ನು ಕಣ್ಣಿಟ್ಟು ನೋಡುತ್ತಿದ್ದನು. ಒಂದು ಸಲ ಚೆಲುವೆಯಾದ ಹಳ್ಳಿಯ ಹುಡುಗಿಯು ಎಣ್ಣೆ ಎರಕೊಂಡು ಕೂದಲ ಸ್ನಾರಿಸುತ್ತ ಕಟ್ಟೆಗೆ ಕೂತಿದ್ದಳು. ಅವಳನ್ನು ಕಣ್ತುಂಬ ನೋಡಿ ' ಇವಳು ಕಾಲೇಜಿನಲ್ಲಿ ಕಲಿತವಳಾದರೆ. . . . 'ಎಂದು ಮುರಲಿಯು ಧೇನಿಸುತ್ತಿದ್ದನು.

ಹತ್ತು ಹದಿನೈದು ದಿನಗಳಾದವು. ವರಶೋಧಕರಿಗೆ ಮುರಲಿಯ ಸುಳಿವು ಹತ್ತದೆ ಇರಲಿಲ್ಲ. ಕುಲಕರ್ಣಿಗಳ ಕೂಡ ಸಮೀಪದೂರಿನ ದೇಶಪಾಂಡೆಯವರೊಬ್ಬರು ಪತ್ರವ್ಯವಹಾರ ಮಾಡಿ ತಮ್ಮ ಮಗಳನ್ನು ಮುರಲಿಗೆ ತಗೊಳ್ಳಬೇಕೆಂದು ಬೇಡಿಕೊಂಡರು. ದೇಶಪಾಂಡೆಯವರು ದೊಡ್ಡ ವತನದಾರರೂ ರೊಕ್ಕಸ್ತರೂ ಎಂದು ರಾಘಪ್ಪನವರಿಗೆ ಗೊತ್ತಿತ್ತು. ಆದರಿಂದ ಅವರ ಬಾಯಲ್ಲಿ ನೀರೂರಿತು. ಕುಂಡಲಿಗಳನ್ನು ಮೊದಲು ಕೂಡಿಸಿನೋಡಿದರು. ಗುಣಗಳು ಸಾಧಾರಣವಾಗಿ ಕೂಡುವವೆಂದು ತಿಳಿಯಿತು. ಆಯಿತು, ಹುಡುಗಿಯನ್ನು ತೋರಿಸಲಿಕ್ಕೆ ಬರಬೇಕೆಂದು ಕೂಡಲೆ ಕಾಗದ ಬರೆದರು. ನಾಳೆ ಬೆಳಿಗ್ಗೆ ಅವರು ಬರುವವರು, ಮುನ್ನಾದಿನ ರಾತ್ರಿ ಮುರಲಿಗೆ ರಾಘಪ್ಪನವರು ತಿಳಿಹೇಳಿದರು. ನನ್ನನ್ನು ಕೇಳದೆ ನೀವು ಯಾಕೆ ಪತ್ರ ಬರೆದಿರೆಂದು ಮುರಲಿಯು ಊಟಕ್ಕೆ ಕೂತವನು ಎದ್ದು ಬಿಟ್ಟನು. ತಂದೆ ತಾಯಿ ಕ್ಷಮೆಬೇಡಿ ಊಟ ಮಾಡಿಸಬೇಕಾದರೆ ಸಾಕುಬೇಕಾಯಿತು. ರಾತ್ರಿಯೆಲ್ಲ ಮುರಲಿಯ ಹೃದಯಕ್ಕೆ ತಳಮಳವೇ ತಳಮಳ. ತನ್ನ ಪ್ರೇಮದ ಆದರ್ಶವು ನಷ್ಟವಾಯಿತೆಂದೂ

ಕಲಿತ ಹೆಂಡತಿಯು ತನಗಿನ್ನು ದೊರೆಯಲಾರಳೆಂದೂ ವಿಲಿವಿಲಿ ಒದ್ದಾಡಿದನು, ನಿದ್ದೆಯಿಲ್ಲದೆ ಹೊರಳಾಡಿ ರಾತ್ರಿ ಕಳೆದನು. ಮರುದಿನ ಮುಗಳಕೂಡ ದೇಶಪಾಂಡೆಯವರು ಬಂದು ಬೇರೆ ಕಡೆ ಇಳಿದುಕೊಂಡರು. ಹುಡುಗಿಯನ್ನು ತೋರಿಸುವ ವಿಧಾನವಾಯಿತು; ಮುರಲಿಯು ಬಿಮ್ಮನೆ ಬಿಕ್ಕೊಂಡು ನೋಡಿದನು. ಏನೂ ಕೇಳಲಿಲ್ಲ ಬಿಡಲಿಲ್ಲ. ಉಳಿದೆಲ್ಲರಿಗೆ ಹುಡುಗಿಯೂ ಅವಳಿಗಿಂತ ಹೆಚ್ಚಾಗಿ ಮನೆತನವೂ ತುಂಬಾ ಸೇರಿದವು. ದಿನ ಹೋದಂತೆ ರಾಘಪ್ಪನವರೂ ಲಕುಮವ್ವನವರೂ ಅದೇ ಹುಡುಗಿಯನ್ನು ಮಾಡಿಕೊಳ್ಳಬೇಕೆಂದು ಹಲವು ಬಗೆಯಿಂದ ಮುರಲಿಗೆ ಗಂಟುಬಿದ್ದರು. ಅವರು ಹೇಳುವ ಅನೇಕ ಕಾರಣಗಳಲ್ಲಿ ಎರಡು ಸಾವಿರ ವರದಕ್ಷಿಣೆ ಕೊಡುವರೆಂಬುದೇ ಮುಖ್ಯವಾದದ್ದು. ಅದು ತಿಳಿದಕೂಡಲೆ ಮುರಲಿಯು ವಿಪರೀತವಾಗಿ ಕೆರಳಿ ಹೇಳಿದನು: 'ಆ ಹುಡಿಗೆಯನ್ನು ನಾನೆಂದೂ ಮಾಡಿಕೊಳ್ಳುವದಿಲ್ಲ. ಒಂದು ಕಾಸು ಸಹ ವರದಕ್ಷಿಣೆ ತಕ್ಕೊಳ್ಳದೆ ನಾನು ಪ್ರೀತಿಮಾಡಿದ ಹುಡಿಗೆಯನ್ನೇ ಮಾಡಿಕೊಳ್ಳಬೇಕೆಂದು ನಾನು ಶಪಥ ಮಾಡಿದ್ದೇನೆ. ನೀವಿನ್ನು ಹಗಲೆಲ್ಲ ನನ್ನ ಕೇಳಬೇಡರಿ.'

ಮುರಲಿಯು ಬಿಚ್ಚುಮಾತಿನಿಂದ ಮನೆಯಲ್ಲಿ ಬಹಳ ಖಳಬಳವೆದ್ದಿತು. ದೇಶಪಾಂಡೆಯವರ ಹುಡುಗಿಯನ್ನು ಅವನು ಒಲ್ಲೆನೆಂದಿದ್ದರೆ ಅದಷ್ಟು ಹೆಚ್ಚಿನದಾಗುತ್ತಿರಲಿಲ್ಲ. ಆದರೆ ವರದಕ್ಷಿಣೆಯ ತಿರಸ್ಕಾರ, ಪ್ರೀತಿವಿವಾಹದ ಪುರಸ್ಕಾರಗಳನ್ನು ಅವನು ಮಾಡಿದ ಕೂಡಲೆ ಮನೆಯ ಹಿರಿಯರು ಮೂರನೆಯ ಕಣ್ಣನ್ನೇ ತೆರೆದರು. ಹಾಗೇ ಬಿಟ್ಟರೆ ಇವನ ಹುಚ್ಚುತನವು ತಲೆಗೇರೀತೆಂದು, ಅದೇ ಹುಡುಗಿಯೊಡನೆ ಮದುವೆಯನ್ನು ಗೊತ್ತುಪಡಿಸಬೇಕೆಂದು ಅನೇಕ ಹಂಚಿಕೆ–ಬೆದರಿಕೆಗಳನ್ನು ಹಾಕಿದರು. ಯಾಕೆ ಊರಿಗೆ ಬಂದೆನೋ ಎಂದು ಮುರಲಿಯು ಮಿಡುಕುವಂತಾಯ್ತು. ಈ ಮದುವೆಗೆ ಒಪ್ಪದಿದ್ದರೆ ತನ್ನ ಕಾಲೇಜ ಶಿಕ್ಷಣವೇ ನಿಲ್ಲುವುದೆಂದು ಅವನಿಗೆ ಎದೆನಡುಗು ಹುಟ್ಟಿತು. ಪುಸ್ತಕದಿಂದ ಕಲಿತ ನವಮತದ ತತ್ವಗಳೆಲ್ಲ ಕೈಬಿಡಲಿಕ್ಕೆ ಹತ್ತಿದವು. ಆದರೂ ಅವನಿಗೆ ಒಂದು ಯುಕ್ತಿಯು ತೋಚಿತು. ತಂದೆತಾಯಿಗಳಿಬ್ಬರೂ ಕೂಡಿ ಕುಳಿತಾಗ ಒಮ್ಮೆ ಹೇಳಿದನು: 'ನಾನಿನ್ನೂ ಬಿ. ಎ. ಕ್ಲಾಸಿನಲ್ಲಿ ಇರತೀನಿ. ಬಿ.ಎ. ಆಗಲಿಕ್ಕೆ ಒಂದುವರೆ ವರ್ಷವಾದರೂ ಬೇಕು. ಅದಾಗುವವರೆಗೆ

ನಾನು ಮದುವೆಯನ್ನೇ ಮಾಡಿಕೊಳ್ಳುವದಿಲ್ಲ, ನೀವು ಬೇಕಾದ್ದು ಹೇಳಿದರೂ ಮಾಡಿಕೊಳ್ಳುವದಿಲ್ಲ.

'ಅದ್ಯಾಕೆ? ಎಷ್ಟೋ ಹುಡುಗರು ಮದುವೆಯಾಗಿ ಬಿ. ಎ. ಆಗಿಲ್ಲವೇನು?' ಲಕುಮಮ್ಮ ಕೇಳಿದರು.

'ಆಗಿರಬಹುದು. ನನಗೆ ಆಗುವದಿಲ್ಲ. ಮದುವೆ ಆದರೆ ಬಿ. ಎ. ಇಲ್ಲ. ಬಿ. ಎ. ಆಗಬೇಕಾದರೆ ಮದುವೆ ಇಲ್ಲ!'

ಇದು ತನ್ನ ನಿಜವಾದ ಭಾವನೆ ಅಲ್ಲವೆಂದೂ ತನಗೊಬ್ಬ ಹೆಂಡತಿಯು ಬೇಗನೆ ಬೇಕೆಂದೂ ಅವನಿಗೆ ಗೊತ್ತಿತ್ತು. ಆದರೆ ಕಣ್ಣ ಮುಂದಿನ ಕಾಟವನ್ನು ತಪ್ಪಿಸಲಿಕ್ಕೆಂದು ಈ ಯುಕ್ತಿಯನ್ನು ಹೂಡಿದನು. ಆದರಿಂದ ಹಿರಿಯರ ಮೇಲೆ ಒಂದು ಕ್ಷಣ ಪರಿಣಾಮವೇನೋ ಆಯಿತು. ತಮ್ಮ ಒತ್ತಾಯದ ಸಂಧಾನವನ್ನು ಒಂದೆರಡು ದಿನ ತಡೆದರು. ಇಷ್ಟರಲ್ಲಿ ದೇಶಪಾಂಡೆಯವರ ಮನೆಯಲ್ಲಿ ವಧುವಿನ ಅಕ್ಕ ಒಮ್ಮೆಲೆ ಹಡೆದು ತೀರಿದಳೆಂಬ ವರ್ತಮಾನದಿಂದ ಮದುವೆಯ ಉಕ್ಕು ಸರ್ರನೆ ಇಳಿದುಹೋಯಿತು. ದೈವವು ತನ್ನ ನೆರವಿಗೆ ಬಂದಿತೆಂದು ಮುರಲಿಯು ತನ್ನಷ್ಟಕ್ಕೆ ಉಸ್ಸೆಂದನು.

ಕಾಲೇಜ ಟರ್ಮಿನ ಕೊನೆ ಬಂದಿತು. ಆದರೆ ತನ್ನ ಸಾಲಗಳಿಗೆ ಬೆದರಿದ ಮುರಲಿಯು ಧಾರವಾಡಕ್ಕೆ ಹೋಗುವ ಮನಸ್ಸನ್ನು ಮಾಡಲಿಲ್ಲ. ಇಷ್ಟು ದಿನಗಳ ವರೆಗೆ ರಾಘಪ್ಪನವರಿಂದ ಈ ಸಾಲದ ವಿಚಾರವನ್ನು ಯಶಸ್ವಿಯಾಗಿ ಬಚ್ಚಿಟ್ಟಿದ್ದನು. ತಾವಾಗಿ ರಾಘಪ್ಪನವರು ಅವನ ಆಯುವ್ಯಯದ ವಿವರಗಳನ್ನು ಎಂದೂ ನೋಡುತ್ತಿರಲಿಲ್ಲ. ನೋಡಿದರೆ ಅವರೇನು ಶ್ರೀಮಂತರಲ್ಲ. ತಮ್ಮ ಸಂಸಾರ ಸಾಗಿಸಿಕೊಂಡು ಹೇಗೊ ಕೂಡಿಟ್ಟ ಹಣವನ್ನು ಮುರಲಿಯ ಕಾಲೇಜ ವಿದ್ಯೆಗೆ ತೆರುತ್ತ ಬಂದರು. ಮೊದಲನೆಯ ವರ್ಷದ ಕೊನೆಗೆ ಅವರ ಉಳಿತಾಯವು ಕರಗಿಹೋಯಿತು. ಮುಂದಿನ ಅಭ್ಯಾಸವೆಲ್ಲ ಸಾಲದ ಹೊರೆಯಲ್ಲಿ ಸಾಗಿತ್ತು. ಮುರಲಿಯ ದುಂದುಗಾರಿಕೆಯಿಂದ ಆ ಹೊರೆಯು ಇನ್ನಿಷ್ಟು ಮಿಕ್ಕಿತು. ವರದಕ್ಷಿಣೆಯ ಧ್ರುವನಕ್ಷತ್ರವು ಅವರ ಕಣ್ಣ ಮುಂದೆ ಮಿನುಗದಿದ್ದರೆ ಅವರು ಕೈ ಚೆಲ್ಲಿಯೇ ಬಿಡುವವರು. ಯಾವಾಗಲೂ ಮಗನ ಮೇಲೆ ಮಿತಿಮೀರಿದ ವಿಶ್ವಾಸ. ಅವನು ಮಾಡಿದ್ದೆಲ್ಲವೂ ತನ್ನ ಹಿತಕ್ಕಾಗಿಯೇ ಎಂದು ಅವರ ಕಲ್ಪನೆ. ಅಂತೇ ಅವನು ಯಾವಾಗ ಎಷ್ಟು ಬೇಡುವನೋ

ಅಷ್ಟು ರಕವನ್ನು ಏದೆ ಬೆಂದರೂ ಸಿಟ್ಟುಸಿರು ಬಿಡದೆ ಕಳಿಸಿಕೊಡುತ್ತಿದ್ದರು. ಈ ಅವರ ಪುತ್ರಮೋಹದಿಂದ ಮುರಲಿಯ ಸ್ವೈರಾಚಾರವು ಹೆಚ್ಚುತ್ತಿದೆ ಯೆಂದು ಅವರಿಗೆ ಇನ್ನೂ ತಿಳಿದಿರಲಿಲ್ಲ. ಈ ಹೊತ್ತಿಗೆ ಕಲ್ಲಳ್ಳಿಗೆ ಧಾರವಾಡ ದಿಂದ ಒಂದು ಪತ್ರವು ಬಂದಿತು. ತಮ್ಮ ಕೈಯಲ್ಲಿ ಮೊದಲು ಬಂದದ್ದರಿಂದ ರಾಘಪ್ಪನವರು ಓದಿನೋಡಿದರು. ಮುರಲಿಗೆ ಅವನ ಕಾಲೇಜ ಮಿತ್ರನು ಬರೆದ ಪತ್ರವದು. ಅದರಲ್ಲಿ ಮುರಲಿಯ ಹುಳುಕುಗಳೆಲ್ಲ ಹೊರಬಿದ್ದವು.

"ನಿನ್ನ ಸಾಲಗಳ ಸುದ್ದಿ ಪ್ರಿನ್ಸಿಪಾಲರವರೆಗೆ ಹೋಗಿದೆ. ಒಮ್ಮೊಮ್ಮೆ ನಿನ್ನ ಹಾಜರಿ ಯನ್ನು ನಾನು ಹೇಳುತ್ತಿದ್ದೆ. ಅದರಿಂದ ನೀನು ಇಲ್ಲಿಯೇ ಇರಬಹುದೆಂದು ತಿಳಿದು ಪ್ರಿನ್ಸಿ ಪಾಲರು ನಿನ್ನನ್ನು ಕರೆಕಳಿಸಿದರು. ನೀನು ಇಲ್ಲದ್ದು ನೋಡಿ ಬಹಳ ತಪ್ತರಾಗಿರುವರು. ಕೂಡಲೆ ಈ ಪತ್ರವನ್ನು ತಾರಿಂದು ತಿಳಿದು ಹಣ ಸಹಿತ ಹೊರಟು ಬಾ."

ರಾಘಪ್ಪನವರಿಗೆ ಒಮ್ಮೆಲೆ ಮೈಮೇಲೆ ಬೆಂಕಿಯನ್ನು ತೂರಿದಂತಾ ಯಿತು. ತಮ್ಮ ಪ್ರೀತಿಯ ಮಗನ ತೆರೆಯ ಹಿಂದಿನ ನಾಟಕವು ಈಗ ಅರ್ಥವಾಯಿತು. ಟರ್ಮಿನ ನಡುವೆ ಯಾಕೆ ಬಂದನೆಂಬುದೂ ಹೊಳೆದು ಹೋಯಿತು. ಮುರಲಿಯು ಹೊರಗಿನಿಂದ ಬಂದ ಮೇಲೆ ಆ ಪತ್ರವನ್ನು ತೋರಿಸಿ ನೆಟ್ಟಗೆ ಛೀ ಥೂ ಅನ್ನಬೇಕೆಂದು ನಿಶ್ಚಯಮಾಡಿ ಅದರ ತಾಲೀ ಮನ್ನು ಹೆಂಡತಿಯ ಮುಂದೆ ಅರ್ಧಟಿಯಾಗಿ ಮಾಡಿದರು.

ಮುರಲಿಯು ಬಂದನು. ರಾತ್ರಿಯ ಊಟವಾಗಲಿ ಎಂದು ತಡೆದರು. ಊಟವಾದೊಡನೆ ಎಲೆಯಡಿಕೆಯನ್ನು ಸಹ ಹಾಕಿಕೊಳ್ಳದೆ 'ಮುರಲೀ, ಇದೇನು ಈ ಅನರ್ಥ?' ಎಂದು ಪತ್ರವನ್ನು ಅವನ ಮುಂದೆ ಬಿಸಾಡಿದರು. ಮುರಲಿಯು ಓದಿಕೊಂಡನು. ಮೈ ಬೆವತಿತು. ಕೆಲಹೊತ್ತು ಸುಮ್ಮನಾ ದನು. ರಾಘಪ್ಪನವರು ಉರಿಗಣ್ಣರಾಗಿ ಥಡಥಡ ಆಡಹತ್ತಿದರು. 'ನಾವಿಲ್ಲಿ ಜೀವ ತಿಯುದ್ದು ಸಾಲ-ಸಮ್ಮಂಧ ಮಾಡಿ ಕಳಿಸಿದ ರೊಕ್ಕ ಎಷ್ಟು ಕಳಿಸಿ ದರೂ ನಿಮಗ ಸಾಲೂದುಲ್ಲ, ಮತ್ತ ಮ್ಯಾಲ ನೂರಾ ಎಂಟು ಸಾಲಾ ಬ್ಯಾರೆ ಮಾಡೀದಿ, ತಿರಗಿ ಇಲ್ಲಿಗೆ ಓಡಿಬಂದು ನನಗ ಹೇಳದ ಬ್ಯಾರೆ ಇದ್ದೀ.'

ಈ ಉಗ್ರಭಾಷಣದಿಂದ ಏನಾದರೊಂದು ಉತ್ತರವನ್ನು ಸಿದ್ಧಪಡಿಸ ಲಿಕ್ಕೆ ಮುರಲಿಗೆ ಅವಕಾಶ ಸಿಕ್ಕಿತು. ಅಪ್ಪನ ಮಾತು ಮುಗಿದ ಮೇಲೆ

ಮೆತ್ತಗೆ ಆಡಿದನು: ' ಅಪ್ಪ, ನಿನಗೆ ಈ ಕಾಲೇಜ ಹುಡುಗರ ಗತ್ತು ತಿಳಿಯೂ ದುಲ್ಲ. ಈ ಪತ್ರ ಬರೆದ ರಮೇಶ ಬಹಳ ಹುಡುಗಾಟಕಿ ಸ್ವಭಾವದವ. ನಾ ಧಾರವಾಡಕ್ಕೆ ಬರಬೇಕೆಂದು ಹಿಂಗ ಬರೆದಾನೇಳು. '

' ಸುಳ್ಳಸುಳ್ಳೆ ಅಧೆಂಗ ಬರೀತಾನ ಅವ ? ನೀನs ಲುಚ್ಚಾ ಇದ್ದೀ. ? ಮುಂತಾಗಿ ಬೈಗಳು ಸುರುವಾದವು.

' ಅಪ್ಪ, ನಾ ಅಂಥಾ ಸಾಲಾನ ಮಾಡಿದ್ದರೆ ಇಷ್ಟು ದಿವಸ ಕಾಲೇಜ ದವರು ಸುಮ್ಮಗೆ ಕೂಡತಿದ್ದರs ? ಎಲ್ಲೊ ಒಂದಾಣೆ ಎರಡಾಣೆ ಅವಸರ ದಾಗ ಉಳಿಸಿ ಬಂದೀನಿ. '

ಹೀಗೆ ಒಂದೊಂದೆ ಕಾರಣವನ್ನು ಮುರಲಿಯು ಹೇಳಿದಂತೆ ರಾಘಪ್ಪ ನವರಿಗೆ ಖಾತ್ರಿ ಆಗದೆ ಹೋದರೂ ಸಿಟ್ಟಿನ ಆವೇಶವು ಇಳಿತರಕ್ಕೆ ಬರತೊಡ ಗಿತು. ಇಷ್ಟರಲ್ಲಿ ಒಳಗಿನ ಕೆಲಸ ತೀರಿಸಿ ಲಕುಮವ್ವನವರು ಹೊರಬಂದು ' ಏನದು ಒದರಾಟ ? ಏನಾರ ಕಾಲಕೆದರಿ ತಗದು ನಮ್ಮ ಮುರಲೀ ಮ್ಯಾಲ ಹರಿಹಾಯೋದು ? ' ಎಂದು ತಾಯ್ತನದ ಮೋಹಗೀತವನ್ನು ಹಾಡಲು ಅಂದಿನ ರುದ್ರನಾಟಕವು ಸುಖದಲ್ಲಿ ಕೊನೆಗಂಡಿತು. ಮರುದಿನ ಬೆಳಿಗ್ಗೆ ಎಲ್ಲಾ ಹೊರಡುವ ಸಿದ್ಧತೆಯನ್ನು ಮಾಡಿಕೊಂಡು ' ನಾ ಈ ಹೊತ್ತು ಹೊರಟು ಬಿಡತೀನಿ. ಈಗೊಂದು ತಿಂಗಳ ಸೂಟಿ ತಗೊಂಡ ಹಂಗ ಆತು. ಇನ್ನ ಸೂಟ್ಯಾಗ ಇದ್ದು ಅಭ್ಯಾಸ ಮಾಡತೀನಿ ' ಎಂದು ಹೇಳಿ ತಂದೆಯಿಂದ ನೂರು ರೂಪಾಯಿ ಸಂಪಾದಿಸಿ ಮಧ್ಯಾಹ್ನಕ್ಕೆ ಧಾರವಾಡಕ್ಕಾಗಿ ಹೊರಟು ಬಿಟ್ಟನು.

ಮುರಲಿಯು ಧಾರವಾಡ ಸೇರಿ ಹಾಸ್ಟೆಲ್ಲಿಗೆ ಹೋಗುತ್ತಲೆ ಎಲ್ಲಾ ಕಡೆಗೆ ಎಂ. ಆರ್. ನ ಸುದ್ದಿಯೋ ಸುದ್ದಿ. ಅವನ ಮೇಲೆ ಖಟ್ಲೆ ಹಾಕಿದ ರೆಂದು ಕೆಲವರು, ಕಾಲೇಜದಿಂದ ಹೊರತಳ್ಳಿದರೆಂದು ಹಲವರು, ಒಬ್ಬ ಹುಡುಗಿಯ ಕೂಡ ಅವನು ಉತ್ತರದ ಕಡೆಗೆ ಪಲಾಯನ ಮಾಡಿದನೆಂದು ಇನ್ನೂ ಕೆಲವರು, ಹೀಗೆ ರುಚಿಮಾಡಿ ಕಥೆ ಕಟ್ಟಿ ಕೋಣೆಕೋಣೆಗಳಲ್ಲಿ ಆಡುತ್ತಿದ್ದರು. ಮುರಲಿಯು ರಾತ್ರಿಯ ಹೊತ್ತು ಹೋಗಿದ್ದರಿಂದ ಮೊಟ್ಟ ಮೊದಲು ಯಾರ ಕಣ್ಣಿಗೂ ಬೀಳಲಿಲ್ಲ. ತನ್ನ ಕೋಣೆಗೆ ಹೋಗಿ ಹಣಿಕಿ ನೋಡಿದನು, ಹಾಸ್ಟೆಲ್ಲಿನ ಬೀಗವು ಬಿದ್ದಂತೆ ತೋರಿತು. ಕೂಡಲೆ ತನ್ನ ಮಿತ್ರ

ನಾದ ರಮೇಶನ ಕೋಣೆ ತೆರೆಯಿಸಿ ಅವನಲ್ಲಿ ಬೀಡುಬಿಟ್ಟನು. ರಾತ್ರಿಯೆಲ್ಲಾ ಸಿಗರೇಟು ಸೇದಿ ಉಳಿದ ಬೂದಿರಾಸಿಯ ಮುಂದೆ ಇಬ್ಬರೂ ಮಿತ್ರರ ಮಂತ್ರಾಲೋಚನೆ ನಡೆಯಿತು. ಮುಂದೆ ಏನು ಮಾಡಬೇಕು, ಪ್ರಿನ್ಸಿಪಾಲರಿಗೆ ಏನು ಹೇಳಿ ಕುತ್ತಿನಿಂದ ಪಾರುಗಾಣಬೇಕು ಎಂಬುದೇ ಅವರ ಆಲೋಚನೆಯ ವಿಷಯವಾಗಿತ್ತು. ಬೆಳಗಾಯಿತು, ಮುರಲಿಯು ರಮೇಶನೊಡನೆ ಚಹದಂಗಡಿಗೆ ಹೋಗಿ ಬಂದನು. ಅವನನ್ನು ನೋಡಿದ ವಿದ್ಯಾರ್ಥಿಗಳು ಅವನೇ ಹೌದೋ ಅಲ್ಲವೋ ತಿಳಿಯದಾದರು. ದಂತಕಥೆ ಕಟ್ಟಿದ ಕಲಾವಿದರು ತಮ್ಮ ಸಂವಿಧಾನದ ಸವಿಯು ಅಡಗುವುದೋ ಏನೊ ಎಂದು ಹಳಹಳಿಸಿದರು. ಮುರಲಿಯು ನಾಲ್ಕಾರು ಸಾರೆ ಕೋಣೆಯ ಇದಿರು ಗೆಳೆಯನೊಡನೆ ಹರಟುತ್ತ ತಿರುಗಾಡಿದ. ಎಮ್ಮಾರನೇ ಬಂದನೆಂದು ಎಲ್ಲರಿಗೂ ಮನಗಾಣಿಕೆಯಾಯಿತು. ಆದರೂ ಆರು ತಿಂಗಳ ಪರೀಕ್ಷೆ ನಡೆದದ್ದರಿಂದ ಎಷ್ಟೋ ಹುಡುಗರು ತಮ್ಮ ಓದಿನಲ್ಲಿಯೇ ತೊಡಗಿದರು.

ಕಾಲೇಜಿನ ಹೊತ್ತಿಗೆ ಮುರಲಿಯು ಪ್ರಿನ್ಸಿಪಾಲರನ್ನು ಕಾಣಲಿಕ್ಕೆ ಹೋದನು. ವಿದ್ಯಾರ್ಥಿಗಳೆಲ್ಲ ಅವನನ್ನು ಹುಳುಹುಳು ನೋಡಿ ಗುಜುಗುಜು ಆಡಿದರು. ದೇಹಾಂತ ಶಿಕ್ಷೆಗೆ ಸಿದ್ಧವಾಗಿ ಹೊರಟ ಅಪರಾಧಿಯಂತೆ ಕೆಲವು ದಯಾಳುಗಳಿಗೆ ಅವನು ಕಂಡಿರಬೇಕು. ಅವನ ಎದೆಯೂ ಹಾರುತ್ತಿತ್ತು. ಆದರೂ ಒಳಗೊಂದು ಧೈರ್ಯವೂ ಇತ್ತು. 'ಬಹಳಾದರೆ ಕಾಲೇಜದಿಂದ ಹೊರಗೆ ಹಾಕುತ್ತಾರೆ, ಇದಕ್ಕೂ ಹೆಚ್ಚೇನು ಮಾಡಬಲ್ಲರು?' ಎಂಬುದೇ ಅವನ ಧೈರ್ಯದ ಗುಟ್ಟು. ಪ್ರಿನ್ಸಿಪಾಲರನ್ನು ಸಮಯ ಸಾಧಿಸಿ ಕಂಡನು; ಅತ್ಯಂತ ರುಷ್ಟರಾಗಿ ಅವರು ಒದರಾಡಿದರು. ಎಲ್ಲಾ ಸುಮ್ಮನೆ ಕೇಳಿಕೊಂಡನು. ಕೊನೆಗೆ 'ನೀನು ಊರಿಗೆ ನಮ್ಮ ಪರವಾನಿಗೆಯಿಲ್ಲದೆ ಯಾಕೆ ಹೋದಿ?' ಎಂದು ಪ್ರಿನ್ಸಿಪಾಲರು ನೇಟಾಗಿ ಕೇಳಿದರು. ಅವನು ಅಣಿ ಮಾಡಿದ ಉತ್ತರವು ಈಗ ಹೊರಬಿದ್ದಿತು. 'ಒಮ್ಮಿಂದೊಮ್ಮೆ ನನ್ನ ತಂದೆಯವರಿಗೆ ವಿಷಮಜ್ವರ ಹೆಚ್ಚಾಗಿ ಬಂದಿದೆಯೆಂದು ತಾರು ಬಂತು, ಆದರಿಂದ ನಾನು ಅವಸರದಿಂದ ಹೋಗಬೇಕಾಯಿತು.'

'ಇದು ನಿಜವೇ? ಹಾಗಿದ್ದರೆ ಇಷ್ಟು ದಿನ ಏನು ಮಾಡಿದಿ?'

'ಜ್ವರ ಇಪ್ಪತ್ತೆರಡು ದಿನಗಳ ವರೆಗೆ ಇಳಿಯಲಿಲ್ಲ. ಈಗ ಅವರು ಗುಣಹೊಂದುತ್ತಿರುವರು. ಅವರ ಉಪಚಾರಕ್ಕೆ ನಾನು ಇರಬೇಕಾಯಿತು.'

'ಅಲ್ಲಿ ಹೋಗಿ ನೀನು ನಮಗೆ ಪತ್ರವನ್ನೇಕೆ ಒರೆಯಲಿಲ್ಲ?'

'ಅವರ ಜಡ್ಡಿನ ಕಾಳಜಿಯಲ್ಲಿ ಯಾವದೂ ನೆನಪಾಗಲಿಲ್ಲ. ನನ್ನ ತಪ್ಪಿಗೆ ಕ್ಷಮಿಸಬೇಕು.'

'ನಿನ್ನನ್ನು ಕ್ಷಮಿಸುವದು ಸಾಧ್ಯವಿಲ್ಲ. ನೀನು ಊರಿಗೆ ಹೋದದ್ದಲ್ಲದೆ ಇನ್ನೊಬ್ಬರಿಂದ ಹಜರಿಯನ್ನು ತುಂಬಿಸಿರುವಿ. ಯಾರು ಅವರು ಹೇಳು.'

'ದಯಮಾಡಿ ನನ್ನ ನಂಬಬೇಕು. ಅವರ್ಯಾರೋ ಗೊತ್ತಿಲ್ಲ. ನನ್ನ ಮೇಲೆ ಗಂಡಾಂತರ ತರಬೇಕೆಂದು ನನ್ನ ದ್ವೇಷಿಗಳೊಬ್ಬರು ಅದನ್ನು ಮಾಡಿರತಾರೆ.'

ಪ್ರಿನ್ಸಿಪಾಲರ ಸಿಟ್ಟಿನ ಆಯುಧಗಳೆಲ್ಲ ಮೊಂಡಾಗಹತ್ತಿದವು. ಸ್ವಭಾವದಿಂದ ಅತ್ಯಂತ ಸರಳರೂ ಕೋಮಲಹೃದಯರೂ ಆದದ್ದರಿಂದ ಅವರಿಗೆ ಮುರಲಿಯ ಬಗ್ಗೆ ತುಸು ಕರುಣೆಯೇ ಹುಟ್ಟಿತು. ಆದರೂ ಅವನು ತಪ್ಪುಗಾರನೆಂದು ಮನಸ್ಸಿನಲ್ಲಿ ನಟ್ಟುಹೋದ ಪೂರ್ವಗ್ರಹವು ಕರಗಲಿಲ್ಲ. 'ಆಯಿತು ಹೋಗು. ನಿನಗೆ ಹತ್ತು ರೂಪಾಯಿ ದಂಡ ಮಾಡಿದ್ದೇನೆ. ಇನ್ನು ಮೇಲೆ ನನ್ನ ಅಪ್ಪಣೆಯಿಲ್ಲದೆ ನೀನು ಎಲ್ಲಿಗೂ ಹೋಗಕೂಡದು. ಮತ್ತು ನಿನ್ನ ನಾಲಗಳನ್ನೆಲ್ಲ ಇಂದೇ ತೀರಿಸಿ ರೆಕ್ಟರರನ್ನು ಕಂಡು ನಿನ್ನ ಕೋಣೆಯಲ್ಲಿ ಇರು ಹೋಗು.'

'ಹಾಗೇ ಮಾಡುತ್ತೇನೆ ಸರ. ನನಗೆ ಈಗ ಪಶ್ಚಾತ್ತಾಪವಾಗಿದೆ. ಇನ್ನು ಮೇಲೆ ಸೂಟಿಗೆ ಎಲ್ಲಿಯೂ ಹೋಗದೆ ಇಲ್ಲಿಯೇ ಇದ್ದು ಅಭ್ಯಾಸ ಮಾಡುವೆನು.'

ಹೀಗೆ ಹೇಳಿ ಮುರಲಿಯು ಹೊರಬಿದ್ದನು. ಅವನ ಮುಗುಳ್ನಗೆಯ ಮೇಲಿಂದ ಸಂದರ್ಶನವು ಯಶಸ್ವಿಯಾಯಿತೆಂದು ರಮೇಶನಿಗೆ ತೋರಿತು. ಮುರಲಿಯು ಹತ್ತಿರ ಹೋಗಿ ನಡೆದ ಸಂಗತಿಯನ್ನು ಹೇಳಿದನು. ಅರ್ಧ ತಾಸು ಪರೀಕ್ಷೆಯ ಪೇಪರು ಬರೆದು ಅವನ ಜಾಲಿ ಕ್ಯಾಂಪಿನ ಗೆಳೆಯರು ಹೊರಬಂದರು. ಎಲ್ಲಾ ಸುಸೂತ್ರವಾಯಿತೆಂದು ತಿಳಿದು ಎಲ್ಲರೂ ಕೇಕೆ ಹಾಕಿದರು, ವಸ್ತ್ರ ತೂರಿದರು. ಕೂಡಲೆ ಕಾಲೇಜ ಕ್ಯಾಫೆಗೆ ಹೋಗಿ ಸಿಕ್ಕಾಪಟ್ಟಿ ಚಹಾಫರಾಳವನ್ನು ಹೊಡೆದು ಮುರಲಿಯಿಂದ ಒಂದೆರಡು ರೂಪಾಯಿಗಳನ್ನು ಉಚ್ಚಿಸಿದರು.

ಮುರಲಿಯು ತೀರ ಬೊಬ್ಬಾಟಕ್ಕೆ ಒಂದ ಸಾಲಗಳನ್ನೆಲ್ಲ ತೀರಿಸಿ ರೆಕ್ಟರರ ಅನುಮತಿ ಪಡೆದು ತನ್ನ ಮೊದಲಿನ ಖೋಲಿಯಲ್ಲಿ ತಳವೂರಿದನು. ಮತ್ತೆ ಸಿಗರೇಟಿನ ಹೊಗೆಮೋಡಗಳು ಅಲ್ಲಿ ಸುಳಿದಾಡಹತ್ತಿದವು. ಖೋಲಿಯು ಮೊದಲಿನಂತೆ ಸಿಂಗಾರವಾಯಿತು. ಇನ್ನು ನಿಜವಾಗಿಯೂ ಅಭ್ಯಾಸವನ್ನು ಕೈಕೊಳ್ಳಬೇಕೆಂದು ಮುರಲಿಯು ಮನಸ್ಸಿನ ಒಂದು ಭಾಗವು ಸಂಕಲ್ಪ ಮಾಡಿತು. ಹಾಗೇ ಆಗಲಿ ಎಂದು ಟೇಬಲ್ಲಿನ ಮೇಲೆ ಅಭ್ಯಾಸದ ಪುಸ್ತಕಗಳನ್ನೆಲ್ಲ ಅಂದವಾಗಿ ಇಟ್ಟುಕೊಂಡನು. ದಿನದ ವೇಳಾಪತ್ರಿಕೆಯನ್ನು ಗೊತ್ತು ಮಾಡಿಕೊಂಡನು. ಅದರ ಪ್ರಕಾರ ಓದಿಗೆ ದಿನವೂ ಎಂಟು ತಾಸುಗಳು ಮೀಸಲಾಗಿದ್ದುವು. ಜ್ಯೂನಿಯರದಲ್ಲಿ ಇಷ್ಟು ಓದಿದರೆ ತಾನು ಖಂಡಿತವಾಗಿ ಇಂಗ್ಲಿಶ್ ಆನರ್ಸ ಬರಬೇಕೆಂದು ಅಂದುಕೊಂಡನು. ಪರೀಕ್ಷೆ ತೀರಿ ಪಾಸಾಯಿತೆಂದರೆ ಮೆಚ್ಚಿನ ಮಡದಿಯನ್ನು ಮಾಡಿಕೊಂಡು ಒಂದು ಕೆಲಸ ಹಿಡಿದು ಸುಖದಿಂದ ಕಾಲಕಳೆಯಬೇಕೆಂದು ಕನಸು ಕಂಡನು. ಈ ಯೋಚನೆಗಳಲ್ಲಿ ಒಂದು ಹಗಲು ಒಂದು ಇರುಳು ಜಾರಿದವು. ಮರುದಿನ ಎದ್ದು ಮುಖಕ್ಷೌರ ಸ್ನಾನ ಮೊದಲಾಗಿ ತೀರಿಸಿ ಇನ್ನು ಓದಲಿಕ್ಕೆ ಕೂಡಬೇಕೆಂದು ಕುರ್ಚಿಗೆ ಬಂದನು. ಅಷ್ಟರಲ್ಲಿ ಒಂಬತ್ತು ಒಡಿದಿತ್ತು. ಟೇಬಲ್ಲಿನ ಮುಂದೆ ಕುಳಿತು ಒಂದು ಪುಸ್ತಕ ತೆರೆಯುವಷ್ಟರಲ್ಲಿ ಬಾಗಿಲನ್ನು ತಟ್ಟಿದ ಉಲವು ಕೇಳಿತು. ಎದ್ದು ತೆರೆಯಲು ರಮೇಶನು ಒಳಹೊಕ್ಕನು. ಮುಂಜಾವಿನಿಂದ ಮುರಲಿಯ ಭೆಟ್ಟಿಯಿಲ್ಲವೆಂದು ಅವನಿಗೆ ದೊಡ್ಡ ಅಚ್ಚರಿ. ಮುರಲಿಯು ನಿಜವಾದ ಕಾರಣವನ್ನು ಹೇಳಲಾರ. ಆಯಿತು, ರಮೇಶನು ಸಿಗರೇಟು ಬೇಡಿದ, ಮುರಲಿಯ ಹತ್ತಿರ ತೀರಿದ್ದುವು. ಇಬ್ಬರೂ ಜೊತೆಗೂಡಿ ತರಲಿಕ್ಕೆ ಹೊರಟರು. ನಿತ್ಯದಂತೆ ಚಹದಂಗಡಿಗೆ ಹೋಗದೆ ಗತಿಯಿಲ್ಲ, ಅಲ್ಲಿ ಕಂಪೂದ ಸಭಾಸದರೆಲ್ಲರೂ ಕೂಡಿದ್ದರು. ಜೊಳ್ಳು ಹರಟೆಯ ಮೇಳದಲ್ಲಿ ಎಲ್ಲಾ ಕಾರ್ಯಕ್ರಮವು ಯಥಾಸಾಂಗವಾಗಿ ನೆರವೇರಿತು.

ಮುಂದೆ ಊಟದ ಹೊತ್ತಿಗೆ ಮುರಲಿಯು ಸೆಟ್ಟಿಗೆ ಕ್ಲಬ್ಬಿಗೆ ಹೋದನು. ಹಸಿವೆಯಿಲ್ಲದ ಹೊಟ್ಟೆಯಲ್ಲಿ ಒಂದೇ ತರದೂಟದ ನಾಲ್ಕು ತುತ್ತು ಹಾಕಿಕೊಂಡು ಎದ್ದನು. ಧೂಮ್ರಪಾನವಾಯಿತು. ಇನ್ನು ವಿಶ್ರಾಂತಿಗೊಳ್ಳುವೆನೆಂದು ಹೇಳಿ ರಮೇಶನನ್ನು ಅವನ ಕೋಣೆಗೆ ಕಳುಹಿಸಿ ತನ್ನದನ್ನು ಹೊಕ್ಕು

ಚಿಲಕ ಹಾಕಿದನು. ತುಸು ಅಡ್ಡವಾಗಿ ಎದ್ದು ಓದಲೇಬೇಕೆಂದು ನಿಶ್ಚಯ ಮಾಡುತ್ತ ಹಾಸಿಗೆ ಉರುಳಿಸಿದನು. ಅವನ ಆಲಸ್ಯದ ಮೋರೆ ಅರಳಿತು, ಹಾಸಿಗೆಯ ಮೇಲೆ ಬಿದ್ದುಕೊಂಡನು. ರಾತ್ರಿ ಸವನಾಗಿ ನಿದ್ದೆ ಆಗಿರಲಿಲ್ಲ. ಆದರಿಂದ ಒಮ್ಮೆ ಹತ್ತಿದ ನಿದ್ದೆ ಬೆಳೆಯುತ್ತ ಹೋಗಿ ಐದು ಗಂಟೆಗೆ ಹಾರಿತು. ಎದ್ದು ಗಡಿಯಾಳ ನೋಡುತ್ತಾನೆ. ಎದೆ ಧಸ್ಸೆಂದಿತು. ಆಯಿತು, ಚಹ ಕುಡಿದು ಕುರ್ಚಿಗೆ ಹೊಲಿದುಕೊಂಡು ಕೂಡಬೇಕೆಂದು ಮಾಡಿದ. ಅಷ್ಟರಲ್ಲಿ ಅವನ ಕ್ಯಾಂಪಿನ ಟೆನಿಸ್ ಮಿತ್ರರು ಒಂದು ಕೂಗಿದರು. ಸಂಜೆಯೆಲ್ಲಾ ಆಟ–ಹರಟೆ ಗಳಲ್ಲಿ ಸರಸರ ಸರಿಯಿತು. ಹರಟೆಯ ಹೊತ್ತಿನಲ್ಲಿ ಒಂದು ವಿಷಯವು ಸಹಜ ವಾಗಿ ಹೊರಟು ಮುರಲಿಯ ಮನಸ್ಸನ್ನು ಕಲಕಿತು. ಯಾವನೋ ಒಬ್ಬನು ಆಡಿದ: ' ಏನು ಎಂ. ಆರ್., ನೀವು ಹೋದಾಗ ಒಂದು ತಿಂಗಳ ವಿರಹದಿಂದ ಒಂದು ಜೀವ ಮಾತ್ರ ಬಹಳ ಕೊರಗುತ್ತಿತ್ತು. '

ಉಳಿದವರೆಲ್ಲರೂ ಸಂದರ್ಭವೇನೂ ಗೊತ್ತಿಲ್ಲದೆ ' ಹೌದು ಹೌದು ' ಎಂದು ಗೋಣುಹಾಕಿದರು. ಮುರಲಿಯ ಆತುರವು ಹೆಚ್ಚಾಯಿತು. ಆದರೆ ಆ ವ್ಯಕ್ತಿ ಯಾರೆಂಬುವದನ್ನು ಯಾರೂ ಬೇಗನೆ ಹೇಳಲೊಲ್ಲರು.

' ನನ್ನ ಭೆಟ್ಟಿಯಾದೊಡನೆ ಆ ಪ್ರಾಣಿ ದಿನಾಲು ಕೇಳಬೇಕು. 'ಮುರಲಿ ಯವರು ಎಲ್ಲಿಗೆ ಹೋಗಿರುವರು, ಎಂದು ಬರತಾರೆ?' ಎಂದು. ನನಗೆ ಗೊತ್ತಿಲ್ಲ ಎಂದ ಕೂಡಲೆ ಸಣ್ಣ ಮೋರೆ ಮಾಡಿಕೊಂಡು ಹೋಗಬೇಕು.'

ಎಲ್ಲರೂ 'ಛೇ ಛೇ' ಎಂದು ಮರುಕ ತೋರಿದರು. ಮುರಲಿಗೆ ತಡೆಯ ದಾಯಿತು. 'ಆವರು ಯಾರೆಂಬದು ನೀವು ಹೇಳದಿದ್ದರೆ ನಾನು ಎದ್ದುಹೋಗ ತೀನಿ ' ಎಂದು ಜಬರಿಸಿ ಎದ್ದನು.

' ನೀನೇ ಅಜಮಾಸ ಹೇಳು ಯಾರಿರಬಹುದು ? '

ಮುರಲಿಯು ತನ್ನ ಕಾಲೇಜ ಗೆಳೆಯರನ್ನು ನೆನಸಿ ಅವರೇ ಇವರೇ ಎಂದು ಕೇಳಿದನು.

' ಗೆಳೆಯನಲ್ಲ, ಗೆಳತಿ ' ಎಂದು ಉತ್ತರ ಬಂದಿತು. ಈಗಂತೂ ಮುರ ಲಿಯ ಮುಖ ಉಬ್ಬುಬ್ಬಿತು. ' ನನ್ನ ಮರ್ಲಿನ್ ಡೀಟ್ರಿಚ್ ಏನು ?' ಅಂದನು.

' ಅವಳ್ಯಾರು ಮತ್ತೆ ? ' ಎಲ್ಲರೂ ಕುತೂಹಲಗೊಂಡರು.

'ನಿಮಗೆ ಗೊತ್ತಿಲ್ಲವೇನು, ಮಿಸ್ ಚಂದ್ರಾವತಿ. .' ನಾಚಿ ಹೇಳಿದನು.

'ಆಹ! ಅವಳೇ! ಆದೇ ಪ್ರಾಣಿ!' ಎಲ್ಲರೂ ಒಂದು ಕೊರಲಿನಿಂದ ಕೂಗಿದರು. ಮುರಲಿಯ ಹಿಗ್ಗಿಗೆ ಪಾರವಿಲ್ಲ. ಗೆಳೆಯರಿಂದ ನೆವತೆಗೆದು ಅಗಲಿ ಹೇಗೋ ಊಟ ತೀರಿಸಿ ರಾತ್ರಿ ಕೋಣೆ ಸೇರಿದನು. ಚಂದ್ರಾವತಿಯ ಭಾವ ಚಿತ್ರವೊಂದು ಅವನ ಹತ್ತಿರ ಇತ್ತು. ಟ್ರಂಕಿನಿಂದ ಅದನ್ನು ಹೊರದೆಗೆದು 'ಓ! ಡಿಯರ್' ಎನ್ನುತ್ತ ಮುದ್ದು ಕೊಟ್ಟು ಕುಣಿದಾಡಿದನು. 'ಇಷ್ಟು ನೀನು ನೆನಸುತ್ತಿದ್ದರೆ ನನಗೆ ಹೇಗೆ ತಿಳಿಯಬೇಕನು? ಒಂದು ಪತ್ರವನ್ನಾದರೂ ಬರೆಯಕೂಡದೇ? ನಾನು ಹಕ್ಕಿಯಂತೆ ಹಾರಿ ಬರುತ್ತಿದ್ದೆ' ಮುಂತಾಗಿ ಕನವರಿಸುತ್ತ ಅಲೆದನು. ಅಷ್ಟರಲ್ಲಿ ಚಂದ್ರಾವತಿಯು ಧಾರವಾಡದಲ್ಲಿಯೇ ಇರುವಾಕೆಯೆಂದು ತಿಳಿಯಿತು. ಅವಳಿಗೊಂದು ಪತ್ರಬರೆದು ಭೆಟ್ಟಿಗೆ ಸಮಯ ಕೇಳಬೇಕೆಂದು ತೋರಿತು. ರಾತ್ರಿಯೆಲ್ಲಾ ಕಳೆದು ಒಂದು ಉದ್ದನ್ನ ಪತ್ರ ಬರೆದು ಪಾಕೀಟಿನಲ್ಲಿ ಮುಚ್ಚಿಟ್ಟು ಮಲಗಿದನು. ದಿನದ ಅಭ್ಯಾಸಕ್ರಮವು ಈ ಪರಿ ಕೊನೆಗಂಡಿತು.

ಬೆಳಗಾಗ ರಮೇಶನು ಎಬ್ಬಿಸಿದಾಗಲೇ ಮುರಲಿಯು ಗಡಬಡಿಸಿ ಎದ್ದನು. ಚಹ-ಸಿಗರೇಟಿನ ವಿಧಾನವು ತೀರಿದ ಮೇಲೆ ಟೇಬಲ್ಲಮೇಲಿನ ಪತ್ರವನ್ನು ಕದ್ದು ನೋಡಿದ ರಮೇಶನು 'ನಾನು ಪೋಸ್ಟಿನ ಕಡೆ ಜರೂರ ಹೋಗಬೇಕಾಗಿದೆ' ಎಂದನು. ಹಾಗಿದ್ದರೆ ತನ್ನದೊಂದು ಪತ್ರವನ್ನು ಹಾಕಬೇಕೆಂದು ಸರಿಯಾಗಿ ಅಂಟು ಹಚ್ಚಿ ಮುಚ್ಚಿ ಮುರಲಿಯು ಚಂದ್ರಾವತಿಯ ಪತ್ರವನ್ನು ಕೊಟ್ಟನು. ರಮೇಶನ ಕೈಸೇರಿದ ಮೇಲೆ ಆ ಪತ್ರವು ಕ್ಯಾಂಪಿನ ಗುಪ್ತ ಸಭೆಯ ವಶವಾಯಿತು. ಎಲ್ಲರಿಗೂ ಒಂದು ನಗೆಯ ನಾಟಕದ ಸ್ವಪ್ನ ಬಿದ್ದಿತು. ಮರುದಿನ ಬೆಳಿಗ್ಗೆ ಚಂದ್ರಾವತಿಯಿಂದ ಮುರಲಿಗೆ ಪ್ರೇಮಪೂರ್ಣವಾದ ಒಂದು ಉತ್ತರವು ತಲುಪಿತು. ಅವಳ ಹೃದಯದ ಒಗ್ಗಿ ಅಲ್ಲಿಂದ ಅವನಿಗೆ ಸಂಶಯವೇ ಉಳಿಯಲಿಲ್ಲ. ಇಂಥ ಒಂದು ಒಣೆಯ ತನ್ನ ಅಭ್ಯಾಸದ ಕೋಣೆಗೆ ಅಂದು ಸಂಜೆಗೆ ಬಂದು ತನ್ನನ್ನು ಕಾಣಬೇಕೆಂದು ಅದರಲ್ಲಿ ಬರೆದಿತ್ತು. ಮುರಲಿಯ ಸಂತಸವು ಮುಗಿಲು ಮುಟ್ಟಿತು. ಗೊತ್ತಾದ ಹೊತ್ತಿಗೆ ಟಾಪುಟೇಪಿನ ವೇಷ ಹಾಕಿಕೊಂಡು ಮಲ್ಲಿಗೆ ಮಾಲೆಯ ಕಾಣಿಕೆಯೊಂದನ್ನು ದಾರಿಯಲ್ಲಿ ಕೊಂಡುಕೊಂಡು ಮುರಲಿಯು ಆಕೆ ತಿಳಿಸಿದ ಕೋಣೆಗೆ

ಹೋದನು. ಬಾಗಿಲು ಮುಚ್ಚಿತ್ತು. 'ಮಿಸ್ ಚಂದ್ರಾವತಿ' ಎಂದು ಕೂಗಿದನು.

'ನೂಕಿ ಒಳಗೆ ಬರ್‍ರಿ' ಎಂಬ ಎಳದನಿ ಕೇಳಿಸಿತು.

ಬಾಗಿಲ ನೂಕಿ ಉಬ್ಬಿಸಿಂದ ಒಳಹೊಕ್ಕನು. ಕೋಣೆಯು ವಿದ್ಯಾರ್ಥಿನಿಯ ಅಭ್ಯಾಸಮಂದಿರದಂತೆ ಚೆನ್ನಾಗಿ ಸಜ್ಜಾಗಿತ್ತು; ಆದರೆ ಚಂದ್ರಾವತಿಯೇ ಕಾಣಲಿಲ್ಲ. ಮಚ್ಛರದಾಣಿಯನ್ನು ಸುತ್ತು ಕಟ್ಟಿದ ಮಂಚವೊಂದರಲ್ಲಿ ಮಾತ್ರ ಯಾರೋ ಮಲಗಿರುವಂತೆ ಕಂಡಿತು.

'ಏನು ಎಲ್ಲಿದ್ದೀರಿ ?' ಎಂದನು.

'ಇಲ್ಲಿಯೇ ಮಲಗಿರತೀನಿ. ಏನೋ ಸ್ವಲ್ಪ ತಲೆ ನೋಯುತದೆ, ಅಲ್ಲಿ ಕೂಡರಿ' ಎಂಬ ಬೇನೆಯ ದನಿಯು ಹೊರಟಿತು.

'ಎಲ, ಹೀಗೇನು ?' ಎನ್ನುತ್ತ ಮುರಲಿಯು ಆರಾಮ ಕುರ್ಚಿಯಲ್ಲಿ ಕೂತುಕೊಂಡನು. 'ಏನು ಡಾಕ್ಟರರನ್ನು ಕರೆತರಲೇನು ? ತಲೆ ಬಹಳ ಹೊಡೆಯುತ್ತದೆಯೆ ?' ಎಂದನು.

'ಛೇ ಅಷ್ಟೇನೂ ಇಲ್ಲ. ಯಾರನ್ನೂ ಕರೆಯಬೇಡರಿ. ನೀವೊಬ್ಬರಿದ್ದರೆ ನನಗೆ ಸಾಕು. ಸುಡಗಾಡ ಇಷ್ಟು ದಿವಸ ಛೆಂದಾಗಿದ್ದು ನಿಮಗೆ ಬರಲಿಕ್ಕೆ ಹೇಳಿದ ಹೊತ್ತಿಗೆ ನಾನು ಹಾಸಿಗೆ ಹಿಡಿಯಬೇಕೆ ? ನೋಡಿರಿ.'

ಹೀಗೆ ಮಾತುಕತೆ ನಡೆದವು. ಚಂದ್ರಾವತಿಯು ಜಡ್ಡಿನಲ್ಲಿಯೂ ವ್ಯಕ್ತವಾದ ಒಲುಮೆಯ ಹೆಚ್ಚಳದಿಂದ ಮುರಲಿಯು ಹುರುಪುಗೊಳ್ಳುತ್ತಿದ್ದನು. ಕೊನೆಗೆ ಪ್ರೇಮಾವೇಶವು ಮಿಕ್ಕಿ ಬಾಗಿಲನ್ನು ಮುಂದೆಮಾಡಿ ಮಂಚದ ಹತ್ತಿರಹೋಗಿ 'ಜ್ವರಗಿರ ಬಂದಿರುವದೇನು ?' ಎಂದು ಕೇಳಿದನು.

'ಅದೇನೂ ಇಲ್ಲ. ನೀವು ಅಲ್ಲಿಯೇ ಕೂಡಿರಿ' ಎಂದರೂ ಕೇಳದೆ 'ಪ್ರಿಯೆ, ಚಂದ್ರಾವತಿ, ಹೀಗೆ ಸಂಕೋಚ ಮಾಡಿಕೊಳ್ಳಬೇಡ. ನಮ್ಮಿಬ್ಬರ ಹೃದಯ ಒಂದೇ ಅಲ್ಲವೇ ? ನಿನ್ನ ನೋವು ನನ್ನ ನೋವಲ್ಲವೇ ?' ಎಂದು ಪರದೆಯ ಒಳಕ್ಕೆ ಹೋಗಿ ಮೆಲ್ಲಗೆ ಮುಸುಗು ತೆರೆದು ಮುದ್ದು ಕೊಡಬೇಕೆಂದು ನೋಡುವಷ್ಟರಲ್ಲಿ ಮೋರೆಗೆಲ್ಲಾ ಇದ್ದಲಿಗಪ್ಪು ಬಡಿದುಕೊಂಡ ವಿಕರಾಳ ಗಂಡು ಮೂರ್ತಿ ಕಂಡಿತು ! ಅವನು ಟಣ್ಣನೆ ಹಿಂದಕ್ಕೆ ಹಾರಿ ಬಾಗಿಲು

ಬಗ್ಗಿ ತೆರೆದು ಹುಚ್ಚುಮೋರೆಯಿಂದ ಹೊರಬಿದ್ದನು. ಇದಿರಿಗಿನ ಕೋಣೆ ಯಿಂದ ಅದು ಹೇಗೋ ಅವನ ಜಾಲಿ ಕ್ಯಾಂಪಿನ ಸದಸ್ಯರೆಲ್ಲ ಹೊರನುಗ್ಗಿ 'ಇತ್ತಲಾಗ ಎಲ್ಲಿ ಹೋಗಿದ್ದಿರಿ ಎಂ. ಆರ್?' ಎಂದು ಖೊಳ್ಳನೆ ನಕ್ಕರು. ಅವನಿಗೆ ಸಾಕುಸಾಕಾಯಿತು, ಕೆಳಮೋರೆಮಾಡಿ ಮುಂದರಿದನು. ರಮೇಶನು ಅವನ ಹತ್ತಿರ ಹೋಗಿ 'ಮುರಲಿ, ನೀನು ಈಗ ಕಂಡದ್ದು ಮಿಸ್ ಚಂದ್ರಾ ವತಿ ಅಲ್ಲ, ನಮ್ಮ ಕ್ಯಾಂಪಿನ ಮಿಸ್ ರಾಮಚಂದ್ರ!' ಎನ್ನಲು ಉಳಿದೆಲ್ಲರೂ ಬಿದ್ದುಬಿದ್ದು ನಕ್ಕರು. ಮುರಲಿಗೆ ಒಳಒಳಗೆ ಪ್ರಾಣವನ್ನು ಹಿಂಡಿ ಒಗೆ ದಂತಾಯಿತು.

ಕೆಲವು ದಿನ ಹೋದವು. ಮೊನ್ನಿನ ಪ್ರಸಂಗದಿಂದ ಪೆಚ್ಚಾದ ಮುರ ಲಿಯು ಅದನ್ನು ಅಷ್ಟು ಲೆಕ್ಕಿಸದೆ ಗೆಳೆಯರೊಡನೆ ಕೂಡಿಕೊಂಡು ಆಟ ಪಾಟಗಳನ್ನು ನಡಸಿದನು. ಅದರಲ್ಲಿ ದಿನಕ್ಕೊಂದು ಅರ್ಧತಾಸು ಯಾವಾ ಗೊಮ್ಮೆ ಅಭ್ಯಾಸದ ಅಣಕಾಟವು ಆದರೆ ಹೆಚ್ಚಿನದು. ಪ್ರೇಮದ ವಿಷಯ ದಲ್ಲಿ ದೊಡ್ಡ ನಿರಾಶೆ ಆದದ್ದರಿಂದ ಅಂಥ ಸಾಹಸಗಳನ್ನು ಬಿಟ್ಟುಕೊಟ್ಟನು. ಆದರೆ ತನ್ನ ಕೋಣೆಯಲ್ಲಿ ತಾನಿರುವಾಗ ನಗ್ನ ಚಿತ್ರಗಳನ್ನು ಸಂಗ್ರಹಿಸಿ ನೋಡುವುದರಲ್ಲಿಯೂ ಮಿಸ್ ಚಂದ್ರಾವತಿಯ ಫೋಟೋ ಪೂಜೆ ಮಾಡಿ ಪ್ರೇಮಸ್ವಪ್ನಗಳನ್ನು ಕಾಣುವುದರಲ್ಲಿಯೂ ಎಷ್ಟೋ ನಿಮಿಷಗಳನ್ನು ಕಳೆ ಯುತ್ತಿದ್ದನು. ಈ ಹೊತ್ತಿಗೆ ದೀವಳಿಗೆಯಲ್ಲಿ ಕನ್ನಡ ನುಡಿಯ ಹಬ್ಬವೊಂದು ಧಾರವಾಡದಲ್ಲಿ ನಡೆಯಿತು. ಮೂರು ನಾಲ್ಕು ದಿನಗಳ ವರೆಗೆ ಕನ್ನಡದಲ್ಲಿ ಭಾಷಣಗಳೂ ಕಾವ್ಯವಾಚನಗಳೂ ವಿವಿಧ ವಿನೋದಗಳೂ ಗಾಳಿತುಂಬಿ ದವು. ಹೆಸರಾದ ಗ್ರಂಥಕಾರರೂ ಕನ್ನಡ ಪ್ರೇಮಿಗಳೂ ನೆರೆದಿದ್ದರು. ಜಾಲಿ ಕ್ಯಾಂಪಿನ ಪ್ರಭುಗಳು ಯಾರೂ ಭಾಷಣ-ಚರ್ಚೆ ಮುಂತಾದ ಒಣ ಸಭೆ ಗಳಿಗೆ ಹಣಿಕೆ ಹಾಕಲಿಲ್ಲ. ತಮ್ಮ ಸಂಜೆಯ ಟೆನಿಸ್ ಆಟವು ತೀರಿದ ಮೇಲೆ ತಾವು ಕೂಡಿಸುವ ಮಹಾಸಭೆಯೇ ಅವರಿಗೆ ಸರ್ವಸ್ವವೆಂದು ತೋರಿತ್ತು. ಮುರಲಿಯೂ ಪರಿಸೆಯ ಕೂಡ ಗೋವಿಂದ ಎನ್ನುವನು. ಹಬ್ಬದ ಕೊನೆಯ ದಿನದ ರಾತ್ರಿಯ ಕಾರ್ಯಕ್ರಮವೊಂದು ಉಳಿದಿತ್ತು. ಅಂದು ಸಂಜೆ ನೇರಿ ಕ್ಯಾಂಪಿನ ಸಭೆಯಲ್ಲಿ ಯಾರೋ ಒಬ್ಬರು ವಿಷಯ ತೆಗೆದರು: 'ಏನೇನಾಶರೀ ಈ 'ಕನ್ನಡ ಹಬ್ಬ' ಈ ಎರಡು ಮೂರು ದಿನ?'

'ಏನು ಹಬ್ಬೋ? ಗಬ್ಬೋ?' ಮುರಲಿಯು ಚೇಷ್ಟೆ ಮಾಡಿದನು. ಎಲ್ಲರೂ ಹುಚ್ಚೆದ್ದು ನಕ್ಕರು.

'ಕನ್ನಡ, ಕನ್ನಡ ಅಂತ ನಾಕು ತಲೆತಿರುಕ ಮಂದಿ ಒಲೆ ಪಿಡುಗು ಎಬ್ಬಿಸ್ಯಾರೆ ನೋಡರಿ!'

'ಗೊತ್ತದೆ ಏಳರಿ ಉದ್ಯೋಗ ಇಲ್ಲದ ಬಡಿಗ್ಯಾನ ಲೆಕ್ಕ. ಇವರಿಗೆ ನಮ್ಮಷ್ಟು ಇಂಗ್ಲೀಷು ಸಹಿತ ಬರೂದುಲ್ಲ, ಕನ್ನಡದ ಚಳವಳಿ ಮಾಡತಾರೆ!'

'ಬರಾಬರಿ. ಏನಿರೋ ಮೋಜೆಲ್ಲಾ ಇಂಗ್ಲಿಶದಾಗ ಅದೆ ನೋಡರಿ. ಏನು ಕಾದಂಬರಿ! ಎಂಥ ನಾಟಕ!' ಮುರಲಿಯು ಉದ್ಗಾರ ತೆಗೆದನು.

ಕೂಡಲೆ ರಾತ್ರಿಯ ವಿನೋದಾವಳಿಯು ಒಬ್ಬನಿಗೆ ನೆನಪಾಯಿತು. ನಾಟಕ–ನೃತ್ಯ–ಸಂಗೀತ ಇವುಗಳಿಂದ ಕೂಡಿದ ಕಾರ್ಯಕ್ರಮವಿದೆಯೆಂದು ಅವನು ಮಿತ್ರಮಂಡಳಿಗೆ ಆಕರ್ಷಕವಾಗುವಂತೆ ಹೇಳಿ ತನ್ನ ಹತ್ತಿರವಿದ್ದ ಪ್ರಕಟನಪತ್ರಿಕೆಯನ್ನು ತೋರಿಸಿದನು. ಅದರಲ್ಲಿ ಸ್ತ್ರೀಯರ ಹೆಸರುಗಳನ್ನು ನೋಡಿ ಮುರಲಿಯು ಹಾರಿ ನಿಂತನು. 'ರಮೇಶ, ಈವತ್ತು ನಾವೆಲ್ಲಾರೂ ಇದಕ್ಕೆ ಹೋಗಲಿಕ್ಕೆ ಬೇಕು.'

ರಮೇಶನೆಂದನು: 'ತಿಳಿಯಿತು ಬಿಡು. ಛಂದನ್ನ ಹೆಣ್ಣು ಕೆಲಸಮಾಡ ತಾವೆ ಹೌದಲ್ಲೊ!' ಎಲ್ಲರೂ ಹುಚ್ಚುನಗೆ ನಕ್ಕರು. ಮೊದಲೇ ಗೊತ್ತು ಮಾಡಿಕೊಂಡು ಎಲ್ಲರೂ ವಿನೋದಾವಳಿಗೆ ಹೋಗಿ ನೋಡಿ, ತಿರುಗಿ ಬರುವಾಗ ಆ ಹೆಣ್ಣು ಹೀಗೆ, ಇದು ಹೀಗೆ ಎಂದು ಸುಂದರ-ವಿಮರ್ಶೆಮಾಡುತ್ತ ತಮ್ಮ ಸ್ಥಳಗಳಿಗೆ ಹೋದರು.

ಮುರಲಿಯ ಯೂನಿಯರದ ಎರಡನೆಯ ಟರ್ಮ್ ಪ್ರಾರಂಭವಾಗಿ ವೇಗದಿಂದ ಕೊನೆಗಂಡಿತು. ಪರೀಕ್ಷೆಗೆ ಕುಳಿತ ರೋಗು ಹಾಕಿ ಬೇಸಗೆಯ ಸೂಟಿಗೆಂದು ಅವನು ಕಲ್ಲಳ್ಳಿಗೆ ಬಂದನು. ನೆಪೋಲಿಯನ್ನನ ಸಾಮ್ರಾಜ್ಯ ಲಾಲಸೆಯಂತೆ ಅವನ ಪ್ರೇಮಲಾಲಸೆಯು ನಷ್ಟವಾಗಿ ಹೋಗಿತ್ತು. ಹೇಗಾದರೂ ಮದುವೆಯ ಹೆಂಡತಿಯೊಬ್ಬಳು ಸಿಕ್ಕರೆ ಸಾಕೆಂದು ಅವನ ಹೃದಯವು ಹಾತೊರೆಯುತ್ತಿತ್ತು. ಇಷ್ಟರಲ್ಲಿ ಒಂದು ಸಾವಿರ ವರದಕ್ಷಿಣೆ ತೆರುವ ಕನ್ಯೆಯೊಂದನ್ನು ರಾಘಪ್ಪನವರು ಅವನಿಗೆ ಗೊತ್ತುಮಾಡಿಬಿಟ್ಟರು. ವರದಕ್ಷಿಣೆ ಬೇಡವೆಂದರೆ ಮುಂದೆ ಕಲಿಸೋದೇ ಸಾಧ್ಯವಿಲ್ಲವೆಂದು ಅವರು ಮುರಲಿಗೆ

ಸ್ಪಷ್ಟವಾಗಿ ಹೇಳಬೇಕೆಂದರು. ಆದರೆ ಸುದೈವದಿಂದ ಆ ಪ್ರಸಂಗವೇ ಬರ ಲಿಲ್ಲ. ಮೇ ತಿಂಗಳ ಮಧ್ಯಕ್ಕೆ ಹಳ್ಳಿಯ ಬಂಧುಗಳ ಇದಿರಲ್ಲಿ ಕನ್ನಡವನ್ನು ಸಹ ಸರಿಯಾಗಿ ಅರಿಯದ ಹಳ್ಳಿಯ ಹುಡುಗಿಗೆ ಮುರಲಿಯು ಗಂಡನಾದನು.

---

## ಪ್ರಕರಣ ೭.

ವಾಮಣ್ಣನು ಮುಂಬಯಿಯ ಮಂಗಳದಾಸ ಗಿರಣಿಯ ಕಾರಕೂನ ನಾಗಿ ಒಂದು ತಿಂಗಳಾಯಿತು. ಕೆಲಸದ ಬಗ್ಗೆ ತನಗೆ ಏನೇ ಅನಿಸಿದರೂ ಅದಕ್ಕೆ ಅಂಟಿಕೊಳ್ಳಲೇಬೇಕು ಎಂಬ ವೃತ್ತಿಯು ಅವನಲ್ಲಿ ದೃಢವಾಗಿತ್ತು. ಮೊದಲಿನ ತಿಂಗಳಲ್ಲಿ ಸತ್ಯಕಾಮರ ಹತ್ತಿರವಿದ್ದು ತನ್ನ ಕೆಲಸಕ್ಕೆ ಹೋಗಿ ಬರುತ್ತಿದ್ದನು. ಆದರೆ ಇನ್ನು ಮುಂದೆಯೂ ಹಾಗೆ ಮಾಡುವುದು ಅವನಿಗೆ ಯೋಗ್ಯ ಕಾಣಲಿಲ್ಲ. ಮೇಲಾಗಿ ತನ್ನ ಹೆಂಡತಿಯೊಡನೆ ತನ್ನದೊಂದು ಬಾಳುವೆ ಕಟ್ಟಬೇಕೆಂಬ ಹಿರಿಯ ಕನಸು ಬೇರೆ ಅವನನ್ನು ಕರೆಯುತ್ತಿತ್ತು. ಆದ್ದರಿಂದ ತಿಂಗಳ ಪಗಾರವು ಕೈಗೆ ಬಿದ್ದೊಡನೆ ಸುಮಾರು ದಿನದ ರಜೆ ಪಡೆದು ಧಾರವಾಡಕ್ಕೆ ಹೋದನು. ಆರು ತಿಂಗಳ ಹಿಂದೆ ತಾನು ಅಗಲಿದ ಧಾರ ವಾಡವು ಈಗ ಮಳೆಗಾಲದ ಹಸಿರುಬಟ್ಟೆಯಲ್ಲಿ ಕಂಗೊಳಿಸಿತು. ಹೊಸದಾಗಿ ಯಾವುದೋ ಒಂದು ಅಚ್ಚಹಸುರಿನ ನೆಲಕ್ಕೆ ಬಂದಂತೆ ವಾಮಣ್ಣನು ಆ ನೋಟವನ್ನು ಕಣ್ಣಲ್ಲಿ ತುಂಬಿಕೊಂಡು ನಲಿದಾಡಿದನು. ಅವನು ಬಂದದ್ದ ರಿಂದ ಭೀಮರಾಯರ ಮನೆ ಸಂತೋಷದಿಂದ ತುಂಬಿ ತುಳುಕಿತು. ಪದ್ದಕ್ಕನ ಹಿಗ್ಗಂತೂ ಹೇಳಲಾಸಲ್ಲ. ತನ್ನ ಗಂಡನು ಕೆಲಸ ಹಿಡಿದು ಬಂದಿರುವುದೆಂದರೆ ಹದಿನಾಲ್ಕು ಲೋಕಗಳನ್ನು ಸುತ್ತಿ ವೀರನು ಗೆದ್ದು ಬಂದಂತೆ ಅವಳಿಗೆ ತೋರಿರಬೇಕು. ಆದರೆ ಆ ಹಿಗ್ಗನ್ನು ವಾಮಣ್ಣನಿಗೆ ತಿಳಿಸಿ ಅವನೂ ಹಿಗ್ಗು ವಂತೆ ಮಾಡುವ ರೀತಿಯನ್ನು ಅವಳು ಅರಿಯಳು. ಸುಗುಣಾಬಾಯಿಯ ಕೂಡ ಏನೇನೂ ಸಂಬಂಧವಿಲ್ಲದ ಮಾತು ಆಡಿ ಆದರಿಂದ ಸೂಚ್ಯವಾಗಿ ತನ್ನ ತುಂಬಿದ ಹೃದಯವನ್ನು ಅವಳು ತೆರವುಗೊಳಿಸುತ್ತಿದ್ದಳು. ವಾಮ ಣ್ಣನು ತನ್ನ ಸ್ನಾನ–ಊಟಗಳು ತೀರಿದ ಮೇಲೆ ಮರುದಿನ ಮೇಲಿಗೆ ಪದ್ದಕ್ಕ ನೊಡನೆ ತಾನು ತಿರುಗಿ ಹೊರಡಲೇಬೇಕೆಂದೂ ಅಲ್ಲಿ ತನ್ನ ಹೊಸ

ಸಂಸಾರವನ್ನು ಹೂಡಬೇಕೆಂದೂ ತಿಳಿಸಿದನು. ಯಥಾಪ್ರಕಾರವಾಗಿ ಅದಕ್ಕೆ ಭೀಮರಾಯರೂ ಅವರ ಹೆಂಡತಿ ರಮಾಬಾಯಿರೂ ಮೊದಲು ವಿರೋಧ ಮಾಡಿದರು. ಆದರೆ ಕೊನೆಗೆ ಬಲುಮೆಯು ಒಪ್ಪಿಗೆ ಸಿಕ್ಕಿತು. ಪದ್ಮಕ್ಕನಿಗೆ ಒಂದು ತರದ ಎದೆಯುಬ್ಬು, ಒಂದು ಬಗೆಯ ಎದೆಗುದಿ ಎರಡೂ ಉಂಟಾದವು. ಆದರೂ ಹಿರಿಯರಿಂದ ಧೈರ್ಯ ಪಡೆದು ಮುಂಬಯಿಗೆ ಹೊರಡುವ ಸಂವರಣೆಯನ್ನು ನಡಸಿದಳು. ತನ್ನ ಮಾಟನ್ನ ಬಾಳುವೆಗೆ ಬೇಕಾಗುವ ಕೆಲವು ಪಾತ್ರೆಗಳನ್ನೂ ಉಳಿದ ಪದಾರ್ಥಗಳನ್ನೂ ಕೂಡಿಸತೊಡಗಿದಳು. ಮನೆಯಲ್ಲಿ ಎಲ್ಲರೂ ಅವಳಿಗೆ ತುಂಬ ನೆರವಾದರು. ವಾಮಣ್ಣನು ಸಂಜೆಗೆ ಆನಂದಮೂರ್ತಿಗಳ ತೋಟಕ್ಕೆ ಹೋಗಿ ಅವರೊಡನೆ ಮೂರು ನಾಲ್ಕು ತಾಸುಗಳನ್ನು ಕಳೆದನು. ತನಗೆ ಸಿಕ್ಕ ನೆಲೆಯನ್ನು ಅವರಿಗೆ ಬಣ್ಣಿಸಿ ಹೇಳಿದನು. ಅವರು ಹೊಸದಾಗಿ ಬರೆದಿರುವ ಕವಿತೆಗಳನ್ನು ಕೇಳಿ ಹೃಷ್ಟಪುಷ್ಟನಾದನು. ಸತ್ಯಕಾಮರ ಅಗಾಧ ಜೀವನದ ಸುಖದುಃಖವನ್ನು ವಿವರಿಸಿ, ಅವರ ಸಹವಾಸದಿಂದ ತನಗೆ ದೊರೆತ ಸೂಕ್ಷ್ಮದೃಷ್ಟಿಯನ್ನು ತಿಳಿಸಿದನು. ಕೊನೆಗೆ ಮೂರ್ತಿಗಳು ಅವನನ್ನು ಕಳಿಸಲಿಕ್ಕೆಂದು ಅರ್ಧದಾರಿ ನಡೆದು ಬಂದು ತೀರ ಕತ್ತಲಾಯಿತೆಂದು ಬೀಳ್ಕೊಡುವಾಗ ಗಟ್ಟಿಯಾಗಿ ಕೈ ಕುಲುಕಿ ಹೇಳಿದರು:

'ವಾಮಣ್ಣಾ, ಎಲ್ಲಾದರೂ ಹುಲ್ಲಾಗಿ ಬೆಳೆಯಲಿ ಅನ್ನುವಂತೆ ನೀನು ದೂರ ಹೋಗಿ ಸಾಹಸ ಮಾಡಿ ಕಾಲೂರಿ ನಿಂತೆ ಎಂದು ನನಗೆ ಸಂತೋಷವೇ ಆಗಿದೆ. ಆದರೆ ಈ ನಾಡಿನ ಒಳ್ಳೆಯ ಜೀವಗಳೆಲ್ಲ ಹೊರಗೆ ಹೋದರೆ ಈ ಹಾಳು ನೆಲದಲ್ಲಿ ಯಾರು ಬಿತ್ತಿ ಬೆಳೆಯಬೇಕು? ಎಂಬ ಯೋಚನೆ ನನ್ನನ್ನು ಬಿಡವೊಲ್ಲದು. ಅದೇಕೊ ನನ್ನ ಅಂತರಾತ್ಮ ಹೇಳುತ್ತದೆ 'ನೀನು ತಿರುಗಿ ಇಲ್ಲಿಗೆ ಬರುವಿ, ನಿನ್ನ ಕೆಲಸವಿಲ್ಲಿಯೇ ಇದೆ....'

ಮೂರ್ತಿಗಳು ಭಾವಪರವಶರಾಗಿ ತಡೆದರು. ವಾಮಣ್ಣನು ಮೂಕನಾಗಿ ನಿಂತುಬಿಟ್ಟನು. ಸಂಜೆಯ ಮೌನದಲ್ಲಿ ಜಿರೆತು ಹೋದ ಬೊಂಬೆಗಳಂತೆ ಇಬ್ಬರೂ ಕೆಲ ನಿಮಿಷ ನಿಂತು 'ಒಳ್ಳೇದು' ಎನ್ನುತ್ತ ಅಗಲಿದರು.

ವಾಮಣ್ಣನು ಎಲ್ಲ ಸಿದ್ಧತೆ ಮಾಡಿಕೊಂಡು ಪದ್ಮಕ್ಕನ ಕೂಡ ತನ್ನ ಆಯುಷ್ಯದ ಮೊದಲನೆಯ ಪ್ರವಾಸವನ್ನು ಕೈಕೊಂಡು ಮರುದಿನ ಮುಂಬಯಿಗೆ ತೆರಳಿದನು.

ಮುಂಬಯಿಗೆ ಒಂದು ಬೆಳಿಗ್ಗೆ ಸೇರಿದಾಗ ಪದ್ಮಕ್ಕ ಹೌಹಾರಿ ಹೋದಳು. ಹೊಸ ಅನುಭವಲೋಕದ ಮೊದಲ ದರ್ಶನವು ಅವಳ ಇಡಿಯ ಜೀವವನ್ನು ಗಾಬರಿ ಮಾಡಿತು. ಮುಗ್ಧಳಾಗಿ ರಾಮಣ್ಣನು ಕರೆದುಕೊಂಡು ಹೋದತ್ತ ಹೊರಟಳು. ಮೊದಲು ಸತ್ಯಕಾಮರ ಮನೆಯಲ್ಲಿಯೇ ಅವರ ಇಚ್ಛೆಯ ಮೇರೆಗೆ ರಾಮಣ್ಣ ಇಳಿದುಕೊಂಡನು. ಒಂದೆರಡು ದಿನಗಳಾದ ಮೇಲೆ ಪರೇಳದಲ್ಲಿಯ ಅಡ್ಡಬೀದಿಯ ಬಳಿಯೊಂದು ಕಟ್ಟಡದ ನಾಲ್ಕನೆಯ ಅಂತಸ್ತಿನ ಮೇಲೆ ತಾನು ಗೊತ್ತುಮಾಡಿದ ಮನೆಗೆ ಪದ್ಮಕ್ಕನ ಕೂಡ ಹೋಗಿ ಅಲ್ಲಿ ನೆಲಸಿದನು. ಮನೆಯೆಂದರೆ ಅದೇನು ಬಿಡಿಯಾದ ಹರವಾದ ಮನೆಯಲ್ಲ; ಒಂದು ಕಟ್ಟಡದ ನೂರು ಗೂಡುಗಳಲ್ಲಿ ಒಂದು ಗೂಡು. ಅದರ ಮುಖ್ಯಭಾಗವೆಂದರೆ ಮೂರಂಕಣದ ಚಿಕ್ಕ ನಡುಮನೆ; ಅದೇ ಮಲಗುವ ಮನೆ, ಅದೇ ಪಡಸಾಲೆ. ಅದರ ಹಿಂಗಡೆ ತೀರ ಚಿಕ್ಕ ಅಡುಗೆಮನೆ; ಅಲ್ಲಿಯೆ ಮೂಲೆಯಲ್ಲಿ ಬಚ್ಚಲು. ಅದರ ಮುಂಗಡೆ ಅಟ್ಟದ ಕಟಾಂಜನವುಳ್ಳ ದಾ ಯಂಗಳ. ಇಷ್ಟಕ್ಕೆ ತಿಂಗಳ ಬಾಡಿಗೆ ಹದಿನೈದು ರೂಪಾಯಿ. ದೊಡ್ಡ ಮನೆಯಲ್ಲಿ ಬೆಳೆದು ಸುಳಿದು ಬಂದ ಪದ್ಮಕ್ಕನಿಗೆ ಮೊದಮೊದಲು ಪಾರಿವಾಳದ ಗೂಡಿನಲ್ಲಿ ಹಾಕಿದಂತೆ ಆಯಿತು. 'ಇಷ್ಟು ಚೋಟು ಮನೆಯೊಳಗೆ ಅದು ಹೆಂಗಿರಬೇಕು?' ಎಂದು ಜೋರಾಗಿ ತಕರಾರು ಮಾಡಿದಳು.

ರಾಮಣ್ಣ ಹೇಳಿದ: 'ಇದಕ್ಕೂ ದೊಡ್ಡ ಮನೆ ಬೇಕಾದರೆ ನಾವು ಮುಂಬಯಿಯನ್ನೇ ಬಿಡಬೇಕಾಗುವದು. ಬರಬರುತ್ತ ನಿನಗೆ ಎಲ್ಲಾ ರೂಢಿ ಆಗುವದು.' ಪದ್ಮಕ್ಕ ನಿರ್ವಾಹವಿಲ್ಲದೆ ಸುಮ್ಮನಾದಳು. ಕಪಾಟುಗಳನೂ ಗೋಡೆಯ ಮೇಲಿನ ಫಳಿಗಳನ್ನೂ ಉಪಯೋಗಿಸಿ ಇಬ್ಬರೂ ಕೂಡಿ ಸವಧ ದಂತೆ ಸಾಮಾನುಗಳನ್ನು ಇರಿಸಿದರು. ತನ್ನ ಉಳಿತಾಯದ ಹಣದಲ್ಲಿ ತೀ ಅಗತ್ಯವಾದ ಪಾತ್ರೆ ಪಡಗಗಳನ್ನು ರಾಮಣ್ಣನು ಕೊಂಡು ತಂದನು. ಒಂದ ವಾರದೊಳಗೆ ಎಲ್ಲವೂ ಹೊಂದಿಕೊಂಡಿತು; ಹೊಸ ಸಂಸಾರವು ಮೊ ಲಾಯಿತು. ರಾಮಣ್ಣನು ೧೦ ಗಂಟೆಗೆ ಊಟ ತೀರಿಸಿ ೧೧ಕ್ಕೆ ಗಿರಣಿ ಹೋದವನು ಸಂಜೆ ಆರಕ್ಕೆ ಮರಳುತ್ತಿದ್ದನು. ಅವನು ನಡುವೆ ಬರುವುದ ಸಾಧ್ಯವಿಲ್ಲವೆಂದು ತಿಳಿದು ಪದ್ಮಕ್ಕನು ಏನಾದರೂ ತಿನಿಸು ಮಾಡಿ ಡ ಯಲ್ಲಿ ಹಾಕಿಕೊಡುತ್ತಿದ್ದಳು. ಸುತ್ತುಮುತ್ತಿನ ಜನರ ಪರಿಚಯವಿಲ್ಲದ್ದರಿ

ಊಟ-ಕೆಲಸವಾದ ಮೇಲೆ ಅವಳಿಗೆ ಹೊತ್ತು ಹೋಗುವುದೆಂದರೆ ಬಿಗಿಯಾಯಿತು. ಒಮ್ಮೊಮ್ಮೆ ತನ್ನ ಹೆಣಿಕೆಯ ಕೆಲಸವನ್ನು ಮಾಡುತ್ತ ಇಲ್ಲವೆ ಕಟಾಂಜನಕ್ಕೆ ಆತು ನಿಂತು ಕೆಳಗಿನ ಮಂದಿಯನ್ನು ನೋಡುತ್ತ ಹೊತ್ತು ಗಳೆಯುವಳು. ಒಂದು ಆದಿತ್ಯವಾರದ ದಿವಸ ಟ್ರಾಮಿನಲ್ಲಿ ಅವಳೊಡನೆ ತಿರುಗಿ ಮುಂಬಯಿಯಲ್ಲಿ ನೋಡಬೇಕಾದ ಸ್ಥಳಗಳನ್ನು ವಾಮಣ್ಣನು ತೋರಿಸಿಕೊಂಡು ಬಂದನು. ಎಲ್ಲಾ ನೋಡಿಕೊಂಡು ಸಂಜೆಯ ಹೊತ್ತಿಗೆ ಇಬ್ಬರೂ 'ಮಲಬಾರ ಹಿಲ್ಲಿ'ಗೆ ಬಂದರು. ದಿಬ್ಬವನ್ನೇರಿ ದಣುವಾದದ್ದರಿಂದ 'ತೂಗುವ ತೋಟ'ದ ಬೆಂಚುಗಳ ಮೇಲೆ ಇಬ್ಬರೂ ಒಂದೊಂದು ತುದಿಗೆ ಕೂತರು. ಪಶ್ಚಿಮಕ್ಕೆ ಸಮುದ್ರದಲ್ಲಿ ಮುಳುಗುವ ಸೂರ್ಯನು ಕಾಣುತ್ತಿದ್ದ. ತೆರೆಗಳು ಲಕಲಕಿಸಿ ಹೊಳೆಯುತ್ತಿದ್ದವು. ತಿರುಗಾಟಕ್ಕೆಂದು ಗುಂಪು ಗುಂಪಾಗಿ ಹಿರಿಯರೂ ಹುಡುಗರೂ ಬರತೊಡಗಿದರು. ಕೈಯಲ್ಲಿ ಕೈಹಾಕಿ ಅನೇಕ ತರುಣ ದಂಪತಿಗಳು ಇದಿರು ಹಾಯ್ದುಹೋದರು. ಬೇರೆ ಬೇರೆ ವೇಷ-ಭಾಷೆಗಳ ಈ ತಿರುಗಾಡುವ ಪ್ರದರ್ಶನವು ಪದ್ದಕ್ಕನಿಗೆ ಹೊಸ ಅನುಭವವೇ ಸರಿ. ಗಂಡ-ಹೆಂಡರ ಸಲಿಗೆಯ ಸಲ್ಲಾಪವು ನೂರು ಮಂದಿಯಲ್ಲಿ ನಡೆಯುವುದನ್ನು ಕಂಡು ಮೂಗುಮುರಿದು ಅವಳು ಮೋರೆ ತಿರುವುತ್ತಿದ್ದಳು. ವಾಮಣ್ಣನು ಅವಳನ್ನು ಸೂಕ್ಷ್ಮವಾಗಿ ನಿರೀಕ್ಷಿಸಿ ಮುಗುಳ್ನಗೆ ನಗುತ್ತಲಿದ್ದನು. ತುಸು ವಿಶ್ರಾಂತಿ ಹೊಂದಿ ಇಬ್ಬರೂ ಎದ್ದು ಸುತ್ತೆಲ್ಲ ಅಲೆದರು. ಆದರೆ ವಾಮಣ್ಣನು ಎಷ್ಟು ಮೆಲ್ಲಗೆ ನಡೆದರೂ ಪದ್ದಕ್ಕನು ಹಿಂದೆ ಹಿಂದೆಯೆ ಇರುತ್ತಿದ್ದಳು. ಕಡೆಗೊಮ್ಮೆ ಅವಳನ್ನು ಕೂಡಿಕೊಂಡು ಅವಳಂತೇ ಹೆಜ್ಜೆಯಿಡುತ್ತ ವಾಮಣ್ಣ ಅಂದನು 'ಅಲ್ಲ, ಪದ್ಮ....

ಪದ್ದಕ್ಕನು ಬೆಚ್ಚಿನಿಂತು 'ಇದೇನು ಅಸ್ಯೆ!' ಎಂದು ಹುಬ್ಬುಗಂಟಿಕ್ಕಿದಳು.

'ಏನಾಯಿತು? ನಡೆ ಮುಂದೆ. ಅಲ್ಲ, ಈಗ ನೀನು ಧಾರವಾಡ ಬಿಟ್ಟು ಮುಂಬಯಿಗೆ ಬಂದಿರುವಿ. ಇನ್ನಾದರೂ ಈ ನಾಚಿಕೆ ಕಡಿಮೆ ಮಾಡು. ನಾವಿಬ್ಬರೂ ಇನ್ನು ಸ್ವತಂತ್ರವಾಗಿ ಇರಬೇಕು ನೋಡು.'

'ಸಾಕು ಬಿಡಿರಿ. ಮನಿಗೆ ಹೋಗಿ ಮಾತಾಡೋಣ.' ಪದ್ದಕ್ಕ ವಾಮಣ್ಣನನ್ನು ತಡೆದಳು.

‘ಆದರೆ ಇಲ್ಲಿ ಕನ್ನಡ ಯಾರಿಗೂ ತಿಳಿಯುವದಿಲ್ಲ. ನೀನು ಹೆದರಬೇಡ ಪದ್ಮ.’

‘ತಿಳಿಲಿ ಬಿಡಲಿ, ಮುಂದ್ಯಾಗ ಯಾಕ ಮಾತಾಡಹೂದು?

ವಾಮಣ್ಣನ ಉತ್ಸಾಹಕ್ಕೆ ತಣ್ಣೀರನ್ನು ಎರಚಿದಂತಾಯಿತು. ಸಿಟ್ಟು ಸಿರು ಬಿಟ್ಟು ಆ ಮಾತು ನಿಲ್ಲಿಸಿದನು. ಇಬ್ಬರೂ ಸ್ತಬ್ಧರಾಗಿ ದಿನ್ನೆಯನ್ನು ಇಳಿದು ಮತ್ತೆ ಟ್ರ್ಯಾಮನ್ನೇರಿ ತಮ್ಮ ಸ್ಥಳಕ್ಕೆ ಹೋದರು.

ಕೆಲವು ದಿನ ಹೋದವು. ಈಗ ನೆರೆಹೊರೆಯ ಹೆಣ್ಣುಮಕ್ಕಳ ಕೂಡ ಪದ್ಮಕ್ಕನ ಬಳಕೆಯು ಹೆಚ್ಚುತ್ತಲಿದೆ. ಆ ಚಾಳದಲ್ಲಿ ಇರುವವರು ಹೆಚ್ಚಾಗಿ ಮರಾಠೀ ಇಲ್ಲವೆ ಗುಜರಾಥಿಯಾಡುತ್ತಿದ್ದರು. ಮೊದಲು ಅವರೊಡನೆ ಮೂಕಸನ್ನೆಯಿಂದ ಪ್ರಾರಂಭಮಾಡಿ ಮುಂದೆ ಕೆಲವು ಕಣ್ಣೆದುರಿನ ಪದಾರ್ಥಗಳ ಶಬ್ದಗಳನ್ನು ಪದ್ಮಕ್ಕ ಕೇಳಿಸಿಕೊಂಡಳು. ಬರಬರುತ್ತ ತಪ್ಪುತಟಿಯಾಗಿ ಊಟ ಉಡಿಗೆಯ ಮಾತು ಆಡಹತ್ತಿದಳು. ಮುಂದೆ ಮುಂದೆ ಆಯಾ ಭಾಷೆಗಳಲ್ಲಿ ಹುಟ್ಟಿ ಬೆಳೆದಂತೆ ಕೆಲವು ವಾಕ್ಯಗಳನ್ನೂ ನುಡಿಯುವಳು. ತನ್ನ ಸ್ನೇಹದ ಸ್ವಭಾವದಿಂದ ಆ ಅಂತಸ್ತಿನಲ್ಲಿ ಎಲ್ಲರಿಗೂ ಬೇಕಾದವಳಾಗಿ ಅವರವರ ಕೆಲಸಗಳಲ್ಲಿ ಅವಳು ನೆರವಾಗುತ್ತಿದ್ದಳು. ಕನ್ನಡ ಜನ, ಕನ್ನಡ ನುಡಿ ಎಂದರೇ ಅಲ್ಲಿಯ ಜನಕ್ಕೆ ಹೊಸದು. ಅವರು ಎಷ್ಟೋ ಹೊಸ ವಿಷಯಗಳನ್ನು ಅವಳಿಂದ ಕೇಳಿ ತಿಳಿದುಕೊಂಡರು. ಕನ್ನಡದ ಕೆಲವು ನುಡಿಗಳನ್ನೂ ಕುತೂಹಲದಿಂದ ಕೇಳಿಕೊಂಡರು. ಆದರೆ ಭಾಷೆಯನ್ನೇ ಕಲಿತುಕೊಳ್ಳುವ ಗೊಡವೆಗೆ ಅವರು ಹೋಗಲಿಲ್ಲ. ಅವರ ಮನೆಯ ಅಚ್ಚುಕಟ್ಟನ್ನು ನೋಡಿ ಪದ್ಮಕ್ಕ ತನ್ನ ಮನೆಯನ್ನೂ ಓರಣಗೊಳಿಸುತ್ತಿದ್ದಳು. ಅದರಂತೆ ತನ್ನ ಹತ್ತಿರ ತುಸು ಹಣವನ್ನಿಟ್ಟುಕೊಂಡು ಸಂತೆಪೇಟೆ ಮಾಡುವುದನ್ನೂ ಅರಿತಳು. ಆದರೆ ಅವರನ್ನು ಎಲ್ಲ ಮಾತಿನಲ್ಲಿಯೂ ಅನುಕರಣ ಮಾಡುವುದು ಅವಳಿಗೆ ಸಾಧ್ಯವಿರಲಿಲ್ಲ. ತನ್ನ ನಡೆ-ನುಡಿಗೆ ಬೇರೆ, ಅವರದು ಬೇರೆ. ಒಬ್ಬಿಬ್ಬರಲ್ಲಿ ದೇವರು-ಪೂಜೆ ಎಂಬುದೇ ಇರಲಿಲ್ಲ. ಅವಳ ಸಂಸ್ಕಾರಕ್ಕೆ ಇದು ಒಗ್ಗದ ಮಾತು. ತಾನು ಬರುವಾಗ ಒಂದು ಸಣ್ಣ ದೇವರ ಪೆಟ್ಟಿಗೆಯನ್ನೂ ಮಂಡಪವನ್ನೂ ತಂದಿದ್ದಳು. ಮಂಡಪದಲ್ಲಿ ದೇವರನ್ನು ಕೂಡಿಸಿ ದಿನವೂ ಎಣ್ಣೆದೀಪ ಹಚ್ಚುತ್ತಿದ್ದಳು. ಆಗೀಗ ವಾಮಣ್ಣನಿಂದ

ಪೂಜೆಯನ್ನು ಮಾಡಿಸುತ್ತಿದ್ದಳು. ಅವನ ಮನಸ್ಸು ಅದಕ್ಕೆ ಅನುಕೂಲವಲ್ಲದಿದ್ದರೂ ದೇವನಲ್ಲಿ ಅವನಿಗೆ ನಂಬಿಕೆಯಿತ್ತು, ಪದ್ದಕ್ಕನಲ್ಲಿ ಒಲುಮೆಯಿತ್ತು; ಅಂತೇ ತನ್ನ ಬಗೆಯಿಂದ ಅವನು ಪೂಜೆಮಾಡುತ್ತಿದ್ದನು. ಪದ್ದಕ್ಕನ ಹಳೆಯ ಸಂಸ್ಕಾರದ ಬಗ್ಗೆ ಬಹಳ ಸಲ ಮನಸ್ಸು ನೋಯುತ್ತಿತ್ತು. ಆದರೂ ಮುಂಬಯಿಯಂಥ ಸುಧಾರಿಸಿದ ಪಟ್ಟಣದಲ್ಲಿ ತಾವಿಬ್ಬರೂ ಕೂಡಿ ಇರುವುದರಿಂದ ತನ್ನ ವಿಚಾರಗಳೂ ಕೂಡಬಹುದೆಂಬ ಶ್ರದ್ಧೆಯು ಅವನಿಗೆ ಹುರುಪು ಕೊಡುತ್ತಿತ್ತು. 'ಸುತ್ತುಮುತ್ತಿನ ಜನರನ್ನು ನೋಡು; ಹೊಸ ರೀತಿಯಿಂದ ಇರಲಿಕ್ಕೆ ಕಲಿ' ಎಂದು ಅದೆಷ್ಟೋ ಸಾರೆ ಅವನು ಪದ್ದಕ್ಕನಿಗೆ ತಿಳಿಹೇಳಿದ್ದನು. ಅವಳು ತಟ್ಟನೆ 'ಹೂ' ಎಂದುಬಿಡುತ್ತಿದ್ದಳು. ಅದರ ಅರ್ಥವೇನೊ ಅವಳಿಗೆ ತಿಳಿಯದು.

ಮಾಮಣ್ಣನು ಊಟಮಾಡಿ ಕೆಲಸಕ್ಕೆ ಹೋದ ಮೇಲೆ ಪದ್ದಕ್ಕನು ತನ್ನ ಕೆಲಸ-ಬೊಗಸೆಗಳನ್ನು ಮುಗಿಸಿಕೊಂಡು ಒಮ್ಮೊಮ್ಮೆ ಗುರುತಿನವರಲ್ಲಿ ಹೋಗಿ ಕೂಡುತ್ತಿದ್ದಳು. ಹೀಗೆ ಒಂದು ದಿನ ಶಾಲಿನೀಬಾಯಿ ಎಂಬವರಲ್ಲಿ ಹೋಗಲಾಗಿ ಬಾಗಿಲು ಮುಂದೆ ಮಾಡಿತ್ತು. ವಿಚಾರ ಮಾಡದೆ ಬಾಗಿಲು ನೂಕಿ ಒಳಹೊಕ್ಕಳು. ಕೂಡಲೆ ಅವಳಿಗೆ ಒಂದು ನೋಟ ಕಣ್ಣಿಗೆ ಬಿದ್ದಿತು. ಶಾಲಿನೀಬಾಯಿಯು ತನ್ನ ಗಂಡನೊಡನೆ ಹರಟೆ ಹೊಡೆಯುತ್ತ ಇದಿರುಬದಿರಾಗಿ ಮಣೆಯ ಮೇಲೆ ಊಟಕ್ಕೆ ಕುಳಿತಿದ್ದಳು. ನಡುವೆ ಇಟ್ಟ ಪಾತ್ರೆಗಳಿಂದ ಒಬ್ಬರಿಗೊಬ್ಬರು ಎಡಗೈಯಿಂದ ಬಡಿಸುತ್ತಿದ್ದರು. ಇದು ಪದ್ದಕ್ಕನ ಆಯುಷ್ಯದಲ್ಲಿಯೇ ಅದ್ಭುತ ಸಂಗತಿ. ಅಲ್ಲಿ ನಿಲ್ಲದೆ ತನ್ನ ಮನೆಗೆ ತಿರುಗಿದಳು. ಆದರೆ ಶಾಲಿನೀಬಾಯಿ ಕೇಳುವಳೇ? ಊಟ ಬಿಟ್ಟು ಎದ್ದುಹೋಗಿ ಬಲಾತ್ಕಾರದಿಂದ ಕರೆತಂದು 'ಕೂಡರಿ' ಎಂದಳು. ಅವಳ ಗಂಡನೂ 'ಕೂಡಿಸು' ಎಂದನು. ಆದರೆ ಪದ್ದಕ್ಕನಿಗೆ ಅದು ಅಸಾಧ್ಯವಾಗಿತ್ತು. ಇನ್ನೊಮ್ಮೆ ಬರುವೆನೆಂದು ಹೇಳಿ ಓಟಬಿಟ್ಟಳು. ಇದರಂತೆ ಒಂದೆರಡು ದಿನಗಳ ಮೇಲೆ ಇನ್ನೊಂದು ಕಡೆ ಹೋದಾಗ, ಬಾಗಿಲು-ಕಿಡಿಕಿಗಳನ್ನು ತೆರೆದಿಟ್ಟು ಗಂಡ-ಹೆಂಡತಿ ತಮ್ಮ ಮಂಚದ ಮೇಲೆ ಹತ್ತಿರ ಹತ್ತಿರ ಕುಳಿತು ಹಿತದ ಮಾತು ನಡೆಸಿದ್ದರು. ಅದನ್ನು ನೋಡಲಾರದೆ ಪದ್ದಕ್ಕನು 'ಇಶ್ಶ!' ಎನ್ನುತ್ತ ತಿರುಗಿದಳು. ಮುಂಬಯಿಯಲ್ಲಿ ತಾನು ಕಾಣುವ ಜೀವನವೆಲ್ಲ ವಿಪರೀತವಾಗಿದೆಯೆಂದು ಅವಳಿಗೆ ತೋರಹತ್ತಿತು.

ಪದ್ಮಕ್ಕನು ಮುಂಬಯಿಗೆ ಬಂದು ಸುಮಾರು ಎರಡು ತಿಂಗಳಾದವು. ತನ್ನ ಕೆಲಸದ ಬೇಸರವನ್ನು ಹೋಗಲಾಡಿಸಲಿಕ್ಕೆಂದು ವಾಮಣ್ಣನು ನಡುನಡುವೆ ಸತ್ಯಕಾಮರ ಬಳಿಗೆ ಹೋಗಿ ಶಾಂತವಾಗಿ ಕುಳಿತು ಬರುತ್ತಿದ್ದನು. ಅವರು ಒಮ್ಮೆ ಅವನೊಡನೆ ಮಾತಾಡುತ್ತಿದ್ದರು, ಒಮ್ಮೆ ಸ್ತಬ್ಧವಾಗಿಯೇ ಇರುತ್ತಿದ್ದರು. ಅದೇನೆ ಇರಲಿ, ಅವರ ಸಾನ್ನಿಧ್ಯದಲ್ಲಿ ವಾಮಣ್ಣನಿಗೆ ತೃಪ್ತಿ ದೊರೆಯುತ್ತಿತ್ತು. ಒಂದೊಂದು ಬಾರಿ ಮಾತ್ರ ಅವರ ಏಕಾಂತಜೀವನದಿಂದ ಅವನು ಕಳವಳಪಡುವನು. ಅವರ ಪ್ರಣಯಕಥೆಯ ಘೋರ ಚಿತ್ರವು ಅವನ ಕರುಳನ್ನು ಇರಿಯುತ್ತಿತ್ತು. ದಾಂಪತ್ಯಸುಖವಿಲ್ಲದಿದ್ದರೆ ಏನಿದ್ದರೇನು, ಎಲ್ಲ ಹಾಳು ಎನ್ನುತ್ತಿದ್ದನು. ಮರುಕ್ಷಣದಲ್ಲಿ ಅವನ ಕಲ್ಪನೆಯು ತನ್ನ ಪತ್ನಿಯ ಕಡೆ ತಿರುಗುತ್ತಿತ್ತು. ಸತ್ಯಕಾಮರಂತೆ ತನ್ನ ಗತಿಯೂ ಆದೀತು ಎಂದು ಅನಿಸಿ ಎದೆ ಝುಲ್ಲೆಂದು ಮನೆಯುತ್ತ ಮರುಗುತ್ತಿದ್ದನು. ಒಂದು ದಿನ ಸಂಜೆ ಗಿರಣಿಯ ಕಚೇರಿಯಲ್ಲಿ ಬರೆಬರೆದು ಕೈಸೋತು ತೀರ ನಿರ್ವಿಣ್ಣನಾಗಿ ಮನೆಗೆ ಬಂದನು. ಸೋತ ಜೀವವು ಅಂತಃಕರಣದ ಮಾತಿಗಾಗಿ ಹಂಬಲಿಸುತ್ತಿತ್ತು. ಜಗತ್ತು ತನ್ನನ್ನು ಬೀಸುಕಲ್ಲಿನಲ್ಲಿ ಹಾಕಿ ತಿರುವಿದರೇನು, ತನ್ನ ಮನೆಗೆ ಬಂದರೆ ಕಾವ್ಯದಂತೆ ರಮಿಸುವ ಹೆಂಡತಿಯಿರುವಳಲ್ಲ ಎಂದು ಸಹಜವಾದ ಭಾವನೆ ಅವನಿಗೆ ಹೊರಗೆ ಕತ್ತಲೆಯಾಗುತ್ತಿತ್ತು; ಕಾಲೆಳೆಯುತ್ತ ತನ್ನ ಕಟ್ಟಡವನ್ನು ಮುಟ್ಟಿದನು. ಮುಂದೆ ತಿರುಪತಿಯ ಬೆಟ್ಟದಂತೆ ನಾಲ್ಕು ಅಟ್ಟಗಳ ಮೆಟ್ಟಲನ್ನೇರಬೇಕು. ಒಲ್ಲದಾಗಿ ಕಾಲು ಒಗೆಯುತ್ತ ಅದನ್ನು ಮಾಡಿ ಮನೆಯೊಳಗೆ ಹೋಗಿ ಕೋಟುಗೀಟು ತೆಗೆಯದೆ ನೆಲದ ಮೇಲಿನ ಹಾಸಿಗೆ-ಸುರುಳಿಗೆ ಆತುಕೊಂಡು ಬಿದ್ದು ಉಸ್ಸೆಂದನು. ತನ್ನ ಪತ್ನಿಯು ಇಷ್ಟರಲ್ಲಿ ಧಾವಿಸಿ ಬರುವಳೆಂದು ಅವನ ಕಲ್ಪನೆ. ಅರ್ಧ ತಾಸಾಯಿತು, ಅವಳು ಬರಲೇ ಇಲ್ಲ. ಬಹಳ ಸಿಟ್ಟು ಬಂದಿತು; ತಡೆದುಕೊಂಡನು. 'ಮನೆಯೊಳಗೆ ಯಾರೂ ಇಲ್ಲವೆ?' ಅಂದನು.

ಬಾಗಿಲನ್ನು ಬರೀ ಮುಂದೆ ಮಾಡಿ ತಾನು ಬಂದದ್ದರಿಂದ ಯಾರು ಬಂದರು ಏನೋ ಎಂದು ಗಾಬರಿಗೊಂಡು ಪದ್ಮಕ್ಕ ಓಡಿ ಬಂದಳು. ಒಳಗೆ ಸಂಜೆಯ ಅಡಿಗೆಗೆಂದು ಇದ್ದಲಿ ಒಲೆಯನ್ನು ಅವಳು ಹೊತ್ತಿಸುತ್ತಿದ್ದುದರಿಂದ ಕೈ ಕಪ್ಪಾಗಿತ್ತು. ವಾಮಣ್ಣ ಬಂದನೆಂದು ಗೊತ್ತಾಯಿತು. 'ನೀವೆ' ಅಂದು ತಿರುಗಿ ಹೊರಟಳು.

ರಾಮಣ್ಣನು ಭಾವನಾವಶನಾಗಿ 'ಪದ್ಮ' ಎಂದನು.

'ಏನು?' ಎನ್ನುತ್ತ ತಲೆಬಾಗಿಲನ್ನು ಪದ್ಮಕ್ಕ ಮುಚ್ಚಿದಳು.

'ಇಲ್ಲಿ ಕೂಡು ಸ್ವಲ್ಪ' ಎಂದು ರಾಮಣ್ಣ ಬೇಡಿಕೆಯ ದನಿಯಲ್ಲಿ ಅಂದನು.

'ಏನು ಕೂಡತೀರಿ ಸುಡಗಾಡ. ಅಲ್ಲಿ ಇದ್ದಲಿ ಹೊತ್ತವೊಲ್ಲವು. ಈ ಸಾರೆ ಎಂಥಾ ಇದ್ದಲಿ ತಂದೀರ್‍ಯೊ ಏನೊ!'

ಪದ್ಮಕ್ಕನು ಸರಸರ ಒಳಗೆ ಹೋಗಿಬಿಟ್ಟಳು. ರಾಮಣ್ಣನ ಎದೆಗೆ ಚುಚ್ಚಿದಂತಾಯಿತು. ಪ್ರೇಮವನ್ನು ಬೇಡಬಹುದು, ಆದರೆ ಪಡೆಯುವುದು ಎಷ್ಟು ಅಸಾಧ್ಯ ಎಂದುಕೊಂಡು ಅವನು ಅನೇಕ ಬಗೆಯ ಹಾಳು ವಿಚಾರ ಗಳನ್ನು ಮಾಡುತ್ತ ಕೊನೆಗೊಮ್ಮೆ ಕಣ್ಣೀರಿಟ್ಟನು.

ರಾತ್ರಿ ಹೆಚ್ಚಿತು. ಮಾತುಕತೆಯಿಲ್ಲದೆ ಇಬ್ಬರೂ ಊಟ ಮಾಡಿದರು. ಊಟಕ್ಕೆ ಬಡಿಸುವಾಗ ಒಂದೆರಡು ನಿತ್ಯದ ಮಾತುಗಳನ್ನು ಪದ್ಮಕ್ಕ ಆಡ ಬೇಕೆಂದು ಹವಣಿಸಿದಳು. ಅವಕ್ಕೆ ಉತ್ತರವೇ ದೊರೆಯಲಿಲ್ಲ. ಏನೋ ಸ್ವಲ್ಪ ದಣುವಾಗಿರಬೇಕೆಂದು ತಿಳಿದು ಅವಳೂ ಸುಮ್ಮಗಾದಳು. ರಾಮಣ್ಣನು ಉಸಿರಾಡುವ ಬೊಂಬೆಯಂತೆ ಹಾಸಿಗೆಯ ಮೇಲೆ ಉರುಳಿದನು. ತಲೆಯು ಹೆಚ್ಚೆಚ್ಚು ಕಾಯಿತು. ಒಳಗಿನ ಬೇಗುದಿಯು ಮಿಕ್ಕಿತು. ಪದ್ಮಕ್ಕನು ಕೆಲಸ ತೀರಿಸಿ ಬಂದು ಹತ್ತಿರದ ಹಾಸಿಗೆಯಲ್ಲಿ ಒರಗಿಕೊಂಡಳು. ತನ್ನ ಹೃದ್ಗತ ವನ್ನೆಲ್ಲ ಈಗಲಾದರೂ ಹೇಳಬೇಕೆಂದು ರಾಮಣ್ಣನಿಗೆ ತೋರಿತು. ಆದರೆ ಅವಳಾಗಿಯೆ ಏನು ಕೇಳುವಳು ನೋಡಬೇಕೆಂದು ಕಣ್ಣು ಮುಚ್ಚಿದನು. ನಾಲ್ಕೈದು ಮಿನಿಟುಗಳಾದವು. ಪದ್ಮಕ್ಕನು ಆಚೆ ಮೋರೆ ಮಾಡಿ ಮಲಗಿ ರುವಳು; ರಾಮಣ್ಣನು ಎದ್ದು ಬಾಗಿ ನೋಡಲು ನಿದ್ದೆಯ ಜೊಂಪು ಹತ್ತಿ ಬಿಟ್ಟಿದೆ. ಅವನಿಗೆ ಇನ್ನಿಷ್ಟು ಹೊಟ್ಟೆಯಲ್ಲಿ ಕಲಮಲವಾಯಿತು. ದೊಪ್ಪನೆ ತನ್ನ ಗಾದಿಯ ಮೇಲೆ ಬಿದ್ದನು. ಆ ಸಪ್ಪಳಕ್ಕೂ ಅವಳು ಏಳಲಿಲ್ಲ. ಅವಳ ನಿದ್ದೆ ಹಾಗೇ ಸಾಗಿತು. ಅವನ ಜೀವ ಹಾಗೇ ಕುದ್ದಿತು. ಒಂದೆರಡು ತಾಸು ಗಳು ತಲೆ ಭಾರವಾಗಿ ಕಳೆದವು. ತಾಳಲಾರದೆ ಹೊರಳುತ್ತಲೆ ಹತ್ತಿರ ಸರಿದು ರಾಮಣ್ಣನು 'ಪದ್ಮ!' ಎಂದು ಆಚೆ ಕರೆದನು. ಎಷ್ಟೋ ಕರೆಗಳಾದ ಮೇಲೆ ಪದ್ಮಕ್ಕ ಜುಲುಮೆಯಿಂದ ಎದ್ದಳು. ಅವಳಿಗೆ ಹೊಂದಿ ಮಲಗಿ

ರಾಮಣ್ಣನು ಕಂಬನಿಗರೆದನು. ಬಹಳ ಹೊತ್ತಿನ ಮೇಲೆ, 'ಅದ್ಯಾಕೆ? ಏನಾಗಿದೆ?' ಎಂಬ ಪ್ರಶ್ನೆಯು ಪದ್ಮಕ್ಕನಿಂದ ಬಂದಿತು. ಮುಂದೆ ತನ್ನ ಹೃದಯಗೀತವನ್ನು ರಾಮಣ್ಣ ಆರಂಭಿಸಿದನು: 'ಪ್ರೀತಿಯ ಪದ್ಮ, ನಾವಿಬ್ಬರೂ ಕೂಡಿ ಇರಬೇಕು. ನಮ್ಮ ಹೃದಯ ಒಂದಾಗಬೇಕು. ಹೊರಗೆ ಹೊಟ್ಟೆಗಾಗಿ ಭಿಕ್ಷೆ ಬೇಡುತ್ತೇನೆ, ನಿನ್ನ ಹತ್ತಿರ ಮನೆಯೊಳಗೆ ಪ್ರೇಮಕ್ಕಾಗಿ ಭಿಕ್ಷೆ ಬೇಡುತ್ತೇನೆ. ಹೊರಗಿನ ಜಗತ್ತು ಒದೆದರೂ ತಾಳಬಲ್ಲೆ, ನೀನು ಮೋರೆ ತಿರುವಿದರೆ ಮಾತ್ರ ತಾಳಲಾರೆ....' ಹೀಗೆ ಮಾತುಹೊಳೆ ಹರಿಯಿತು.

ಪದ್ಮಕ್ಕ ಆ ಎಲ್ಲ ಮಾತುಗಳ ಅರ್ಥವನ್ನು ತಿಳಿದುಕೊಳ್ಳಲಿಲ್ಲ. ಆದರೆ ಅವುಗಳಲ್ಲಿ ಹರಿಯುವ ಅಂತಃಕರಣದ ಲಹರಿಯು ಅವಳ ಎದೆ ತಟ್ಟಿತು. 'ನಾ ಏನು ಅಂಥದನ್ನು ಮಾಡಿದೆ? ನನ್ನ ತಪ್ಪು ಕ್ಷಮಿಸಿರಿ' ಎಂದು ಕೇಳಿಕೊಂಡಳು. ಪ್ರೇಮದ ಅಪ್ಪುಗೆಯಲ್ಲಿ ಕಳವಳವೆಲ್ಲ ಕರಗಿತು. ಇಬ್ಬರೂ ನಲಿಗೆಯ ಮಾತುಕತೆಯಿಂದ ಕೆಲ ಹೊತ್ತು ಕಳೆದರು. ಕೊನೆಗೆ ರಾಮಣ್ಣನು ಅಬ್ಬರಿಸು ಹೇಳಿದ: 'ಪದ್ಮ, ನಿನಗೊಂದು ಹೇಳುವೆ. ನನ್ನ ನಂಬು. ಹೊಸದಾಗಿ ಇರಹತ್ತು; ಹಳೆಯದಕ್ಕೆ ಅಂಟಿಕೊಳ್ಳಬೇಡ. ನನ್ನ ಕೂಡ ನಾಚಿಕೆ ಬೇಡ, ನೋಡು. ನಾವಿಬ್ಬರೂ ಸ್ವತಂತ್ರವಾಗಿ ಸುಖದಿಂದ ಇರೋಣ!'

ಅದಕ್ಕೆ ಪದ್ಮಕ್ಕನು ನವಿಮಾತಿನ ಆವೇಶದಲ್ಲಿ 'ನೀವು ಅಂದಂತೇ ಆಗಲಿ' ಎಂದುಬಿಟ್ಟಳು. ರಾಮಣ್ಣನ ಮೋರೆ ಹಿಗ್ಗಿನಿಂದ ಅರಳಿತು. ಘೋರವೆಂದು ತೋರಿದ ರಾತ್ರಿ ಕೊನೆಗೆ ರಮಣೀಯವಾಗಿ ಕೊನೆಗಂಡಿತಲ್ಲವೇ?

ರಾಮಣ್ಣನ ನಿತ್ಯಕ್ರಮವು ಮುಂದರಿಯಿತು. ಮಂಗಲದಾಸ ಗಿರಣಿಯಲ್ಲಿ ತನ್ನ ಮುಖ್ಯ ಕೆಲಸವು ಕಾರಕೂನಿಕೆಯಾಗಿದ್ದರೂ ಹೊತ್ತು ದೊರೆತಾಗ ಗಿರಣಿಯ ಒಳಭಾಗಗಳನ್ನು ಸುತ್ತಾಡಿ ಬರುವುದೆಂದರೆ ಅವನಿಗೆ ಬಹಳ ಮೆಚ್ಚು. ಒಂದು ದಿನ ಇಳಿಹೊತ್ತು ಒಂದೇ ಸವನೆ ಟೇಬಲ್ಲಿಗೆ ಕುಳಿತು ಕಾಲು ಜುಂಯ್ ಹಿಡಿದಿವೆ. ದುಡಿದು ಬೇಸರ ಬಂದಿದೆ, ಬನಿಗೆ ಕೈಸೋತಿವೆ. ಇನ್ನೊಂದು ತಾಸಿಗೆ ಅಂದಿನ ಕಾರ್ಯಚಕ್ರವು ನಿಲ್ಲುತ್ತಿತ್ತು. ಆದರೂ ಅವನಿಗೆ ಅಷ್ಟು ಕೂಡ ತಡೆಯುವುದು ಅಶಕ್ಯವಾಯಿತು. ತನ್ನ ಮೇಲಿನ ಅಧಿಕಾರಿಯ ಹತ್ತಿರ ಹೋಗಿ ತನ್ನನ್ನು ತುಸು ಮೊದಲು ಬಿಡಬೇಕೆಂದು ಬೇಡಿಕೊಂಡನು. 'ಅದು ಸಾಧ್ಯವಿಲ್ಲ' ಎಂದು ಆ ಅಧಿಕಾರಿಯು ಖಂಡಿತವಾದ

ಉತ್ತರಕೊಟ್ಟನು. ಕುರುಡುಕಾಂಚಾಣದ ಈ ಬಗೆಯು ಇತ್ತೀಚೆ ವಾಮಣ್ಣ-
ನಿಗೆ ಗುರುತಾಗಿದ್ದ ಕಾರಣ ಅವನಿಗೆ ಆಶ್ಚರ್ಯವೇನೂ ಆಗಲಿಲ್ಲ. ಹಣವುಳ್ಳ
ವರ ಈ ಸೊಕ್ಕಿನಿಂದಲೇ ಕೂಲಿಕಾರರ ಚಳವಳಿಯೂ ಸಂಪುಗಳ ಹಾವಳಿಯೂ
ನಡೆದಿರುವುದನ್ನು ಅವನು ಕಂಡುಕೊಂಡಿದ್ದನು. ಆದರೂ ಮತ್ತೊಮ್ಮೆ
ಮೊರೆಯಿಟ್ಟು ತನ್ನ ಕಾಲೆಳೆಯುತ್ತ ತಿರುಗಿದನು. ಆದರೆ ನಿಷ್ಠುರ ನ್ಯಾಯ
ದೇವತೆಗೆ ಅಪರೂಪವಾದ ಕರುಣೆಯ ಕಣ್ಣು ತೆರೆದಂತೆ ಆ ಅಧಿಕಾರಿಯಲ್ಲಿ
ಮರುಕ ಹುಟ್ಟಿತು. ಆದರೂ ಮೊದಲಿನ ಹಟವೇನು ಮಾಯವಾಗಲಿಲ್ಲ.
'ಒಳ್ಳೇದು, ಟೇಬಲ್ಲಿನ ಕೆಲಸ ಬಿಡು, ಆದರೆ ಗಿರಣಿಯ ಆವಾರದಿಂದ ಆರು
ಬಡಿಯುವವರೆಗೆ ಹೋಗಬೇಡ' ಎಂದು ಅಪ್ಪಣೆಯಾಯಿತು. 'ಆಗಲಿ' ಎಂದು
ವಾಮಣ್ಣನು ಕೋಟನ್ನು ತನ್ನ ಸ್ಥಳದಲ್ಲಿ ಬಿಟ್ಟು ಗಿರಣಿಯ ಒಳಗಡೆಗೆ ನಡೆ
ದನು. ಅದರ ಭವ್ಯ ರಾಕ್ಷಸಸ್ವರೂಪವೂ ಕರಾಳ ಸಪ್ಪಳವೂ ಅವನ ಕಣ್ಣು
ಕಿವಿಗಳಿಗೆ ತುಂಬಾ ಪರಿಚಿತವಾಗಿತ್ತು. ಅವನ್ನು ಹಿಂದಿರಿಸಿ ಅವನು ಮನೆಗೆ
ಹೋದರೇನೇ ಏನೋ ಕಳಕೊಂಡಂತೆ ಕೆಲಹೊತ್ತು ತೋರುತ್ತಿತ್ತು.
ಈಗ ಅವನು ಉರಿಬಾಯಿಯ ದೊಡ್ಡ ಬಾಯಿಲರದ ಮುಂಗಡೆ ಹಾಯ್ದು
ಅರಳೆಯನ್ನು ಹಿಂಜಿ ನೂಲುವ ಮತ್ತು ನೇಯುವ ಉದ್ದುದ್ದಾದ ಮಹಾ
ಮನೆಗಳೊಳಗೆ ಸೇರಿದನು. ಅಲ್ಲಿ ಒಬ್ಬರ ಮಾತು ಒಬ್ಬರಿಗೆ ಕೇಳಿಸದು.
ಯಂತ್ರದ ಓಡಓಡಾಟವು ನಡೆದಿದೆ. ಅರಳೆಯ ಎಳೆಗಳ ಮಂಜು ಸುತ್ತಿದ
ಗೊಂಬೆಗಳಂತೆ ಕೂಲಿಕಾರರು ತಮ್ಮ ತಮ್ಮ ಕೆಲಸಗಳಲ್ಲಿ ತೊಡಗಿದ್ದರು.
ನಿರ್ಜೀವ ಯಂತ್ರದೊಡನೆ ಸಜೀವ ಯಂತ್ರದ ಸಹಕಾರವೂ ನಡೆದ ನೋಟ
ವದು! ಈ ಸಹಕಾರವು ಹೊಟ್ಟೆಪಾಡಿಗಾಗಿ ಕೈಕೊಂಡ ದಾಸ್ಯವೇ ಸರಿ.
ಕೆಲಸಗಾರರಿಗೆ ಅಂತಃಕರಣ, ಆತ್ಮ ಎಂಬುದಾವುದೂ ಇಲ್ಲೆಂದರೆ ಅವರೂ
ಒಪ್ಪುವರು, ಎಲ್ಲರೂ ಒಪ್ಪುವರು. ಆ ಯಂತ್ರಸೃಷ್ಟಿಯಲ್ಲಿ ಅದು ಅಷ್ಟು
ಒಡೆದುಕಾಣುವ ಮಾತು! ಅವರನ್ನು ವಾಮಣ್ಣನು ಕನಿಕರದಿಂದ ನೋಡುತ್ತ
ಹೊರಟನು. ನಡುನಡುವೆ ನಿಂತು ಹರಕು ಅರೆಬಟ್ಟೆಯ ಹೆಂಗಳೆಯರನ್ನು
ನೋಡಿ ಅವನ ಎದೆಕರಗಿ ಬಿಸಿಸುಯ್ದನು. ಒಂದು ಕಡೆ ಒಂದು ಹೆಣ್ಣಿನ
ಸುತ್ತು ಕಲೆತು ಕೆಲವು ಗಂಡಾಳುಗಳು ಕಿಸಿಕಿಸಿ ನಗುತ್ತಿರುವುದು ಕಂಡಿತು.
ಆ ಹೆಣ್ಣಿನ ಮೈಮೇಲೆ ಮೊದಲೇ ಬಡತನದಿಂದ ಪೂರಾ ಸೀರೆಯಿಲ್ಲ. ಅದರಲ್ಲಿ

ಕೆಲಸದ ಅವಸರದಲ್ಲಿ ಎದೆಯ ಮೇಲಿನ ಸೆರಗು ಕೆಳಜಾರಿದೆ, ಕೂದಲು ಕೆದರಿದೆ. ಅವಳ ಬಡ ನೋಟವೇ ಹಸಿದ ಗಂಡಿಗೆ ಕಾಮ ಒದಿಸಿದ ಊಟ ವಾಗಿತ್ತು. ಅದೂ ಒಂದೆರಡು ಕ್ಷಣ ಮಾತ್ರ. ವಾಮಣ್ಣನು ಮೊದಲು ಕಣ್ಮರೆದು ನೋಡಿದನು, ಮುಂ ಕಣ್ಣನೆಯು ತಾನೆ ಕೆಳಜಿದ್ದಿತು.

ವಾಮಣ್ಣನು ಎಲ್ಲ ಅಟ್ಟಗಳಲ್ಲಿ ತಿರುಗಾಡಿದನು. ಯಂತ್ರದ ಚಕ್ರದಲ್ಲಿ ಸಿಕ್ಕು ಒದ್ದಾಡುತ್ತಿರುವ ಭಾರತದ ಬಡತನವನ್ನೆ ಕಂಡಂತಾಯಿತು. ತನ್ನ ಬವಣೆಗಿಂತ ತನ್ನ ದೇಶದ ಜನರ ದುಃಖವು ಸಾವಿರ ಪಾಲು ಮಿಗಿಲು ಎಂದು ಕೊಂಡು ಮರುಗಿದನು. ಇದಕ್ಕೆ ಉಪಾಯವಿಲ್ಲವೇ? ಎಂದು ಯೋಚಿಸುತ್ತ ಹೊರಬಂದನು; ಕೆಳಮನೆಯ ಬಾಗಿಲಲ್ಲಿ ಶೂನ್ಯವನ್ನು ನೋಡುತ್ತ ನಿಂತನು. ಅಷ್ಟರಲ್ಲಿ ಒಂದು ಕಡೆಯಿಂದ 'ಎಪ್ಪ! ಎಪ್ಪ!' ಎಂದು ಕೂಗು ಹೊರಟು ಅವನ ಕಿವಿಗೆ ಅಪ್ಪಳಿಸಿತು. ಮುಂಬಯಿಯಂಥ ಪಟ್ಟಣದಲ್ಲಿ ಎಲ್ಲಿಯೋ ಒಂದು ಮೂಲೆಯಲ್ಲಿ ಕನ್ನಡ ಕೂಗು! ಅಪರೂಪವಾದ ಅಮೃತವು ಆಕಾಶದಿಂದ ಇಳಿದಂತಾಯಿತು. ಯಾವ ನುಡಿಯನ್ನು ತನ್ನ ಊರಲ್ಲಿ ನೂರು ಸಾರೆ ಕೇಳಿ ದರೂ ಅವನಿಗೆ ಏನೂ ಅನಿಸುತ್ತಿರಲಿಲ್ಲವೊ ಅದನ್ನು ಇಲ್ಲಿ ಕೇಳಿ ರೋಮಾಂಚ ವೆದ್ದಿತು. ಸುತ್ತೆಲ್ಲ ಕಣ್ಣು ಹರಿಸಿ ನೋಡಿದನು. ಬಾಗಿಲಿಂದ ಹತ್ತು ಹೆಜ್ಜೆಯ ನೆರಳಿನಲ್ಲಿ ಒಂದು ತಟ್ಟಿನಮೇಲೆ ಏಳೆಂಟು ವರುಷದ ಕೂಲಿಕಾರ ಹುಡುಗನು ಕುಳಿತಿರುವನು. 'ಎಪ್ಪ! ಎಪ್ಪ! ಗಡಾನೆ ಬಾ,' ಎನ್ನುತ್ತ ಒದರಿ ದಣಿದು ಅಳುಮೋರೆ ಮಾಡಿರುವನು. ವಾಮಣ್ಣನು ಅವನ ಹತ್ತಿರ ಹೋಗಿ ಮೈದಡವಿ 'ನೀ ಯಾರು? ನಿಮ್ಮಪ್ಪ ಎಲ್ಲಿದ್ದಾನೆ?' ಎಂದು ಕೇಳಿದನು. ಹುಡುಗನು ಪ್ರಶ್ನೆಗೆ ಸರಿಯಾಗಿ ಉತ್ತರ ಕೊಡಲಿಲ್ಲ. ಆದರೆ ಅವನ ನನ್ನೆಯ ಮೇಲಿಂದ ಅವನ ತಂದೆಯು ಕೂಲಿ-ಕೆಲಸಕ್ಕೆ ಅದೇ ಗಿರಣಿಯಲ್ಲಿ ಹೋಗಿರ ಬೇಕೆಂದು ತಿಳಿಯಿತು. 'ನಿಮ್ಮಪ್ಪ ಈಗ ಬರತಾನ ನಿಂದರು, ಅಳಬ್ಯಾಡ' ಎಂದು ವಾಮಣ್ಣನು ಹೆಚ್ಚಿನ ಮಮತೆಯಿಂದ ಹೇಳಿ ತಾನು ಅಲ್ಲೇ ನಿಂತನು. ಇಷ್ಟರಲ್ಲಿ ಹಗಲು ಪಾಳಿಯ ಕೆಲಸ ಮುಗಿದದ್ದರಿಂದ ತಮ್ಮ ಹೊಲಸು ಬಟ್ಟೆ ಗಳನ್ನು ಜಾಡಿಸುತ್ತ ಕೂಲಿಕಾರರು ಬುದುಬುದು ಹೊರಬಿದ್ದರು. ಅವರಲ್ಲಿ ಒಬ್ಬನು ಈ ಹುಡುಗನ ಹತ್ತಿರ ಬರಲು, ಹುಡುಗನು ಟಣ್ಣನೆ ಹಾರಿ ಅವನನ್ನು ಅಪ್ಪಿಕೊಂಡನು. ವಾಮಣ್ಣನಿಗೆ ಕನ್ನಡಿಗರಾದ ಆ ತಂದೆ-ಮಕ್ಕಳನ್ನು

ತಾನೂ ಅಪ್ಪಿಕೊಳ್ಳಬೇಕು ಎಂದು ತೋರಿತು. ಅಷ್ಟು ಸಂತೋಷ ಆವನಿಗೆ! ತಂದೆಯು ಬಳಿ ಹೋಗಿ ಏನೂ ಉಪಚಾರವಿಲ್ಲದೆ 'ನಿನ್ನ ಮಗ ಎಷ್ಟು ಹಲಬತಿದ್ದನಲ್ಲೋ, ಹಿರಿಯ' ಎಂದನು. ಒಳ್ಳೇ ಬಟ್ಟೆ ಹಾಕಿದ ತರುಣನೊಬ್ಬನು ಆ ಭವ್ಯ ಗಿರಣಿಯಲ್ಲಿ ಕನ್ನಡವನ್ನು ಮಾತಾಡಿದ್ದು ಕೇಳಿ ಬಡವನ ಮೋರೆ ಹಿಗ್ಗಿತು. 'ಇದೇನು ಎಪ್ಪ, ಕನಡ ಮಾತು ಆಡತೀರಿ, ಯಾವ್ರೂರಾವರು?' ಎಂದು ಕೇಳಿದನು. ತಾನು ಧಾರವಾಡ ಕಡೆಯವನೆಂದೂ ಅದೇ ಗಿರಣಿಯಲ್ಲಿ ಕಾರಕೂನನಾಗಿರುವನೆಂದೂ ವಾಮಣ್ಣನು ತಿಳಿಹೇಳಿದನು. ಕೂಲಿಕಾರನಿಗೆ ಇನ್ನಿಷ್ಟು ಎದೆಯುಬ್ಬಿತು. ಭಾಷೆಯ ಒಂದುತನವು ಇಬ್ಬರನ್ನೂ ಐದು ನಿಮಿಷದಲ್ಲಿ ಚಿರಪರಿಚಿತರಂತೆ ಮಾಡಿತು. ಕೂಲಿಕಾರನು ವಾಮಣ್ಣನ ಮುಂದೆ ಅವನು ಕೇಳಿದಂತೆ ತನ್ನ ಹೆಸರುದೆಸೆಯನ್ನೂ ಸುಖದುಃಖವನ್ನೂ ತೋಡಿಕೊಂಡನು. "ಎಪ್ಪ, ನನ್ನ ಹೆಸರು ನರಸರಿ. ಸೊಲ್ಲಾಪುರ ಕಡಿ ನಮ್ಮ ಊರು ಐತರಿ. ಮಳಿಬೆಳಿ ಹೋಗಿ ಬರಗಾಲ ಬಿತ್ತರಿ. ಗುಳೆ ಕಟಿಗೊಂಡು ಇತ್ತ್ಯಾಕ ಬಂದಿವರಿ ಕೂಲೀ ಮಾಡಾಕ. ನಾಳೆ ಬರೊ ಉಗಾದಿ ಅಮಾಸಿಗೆ ಎಡ್ಡು ವರ್ಷ ಅಕ್ಕ್ಯಾವರಿ ನಾವು ಬಂದು. ಊರು ಉದ್ಯಾನ ಎಲ್ಲಾ ಮರತುಹೋಗೇತರಿ. ಸಿವಾ ಕೊಟ್ಟಲ್ಲೆ ಇರಾಕಬೇಕಲ್ಲರಿ?'

'ಹೌದು. ನಾನೂ ಊರು ಬಿಟ್ಟು ಈ ಶಹರಕ್ಕ ಬಂದೀನಿ ನೋಡು. ಮತ್ತ, ನಿಮ್ಮ ಮನಿ ಎಲ್ಲ್ಯದ? ಮನ್ಯಾಗ ಯಾರ್‍ಯಾರು ಇದ್ದಾರ?'

'ಮನಿ ಎತ್ತಲಾಗರಿ ದೇವರು? ಅದೇನು ಮಾತಂಗಿ ಅಂತಾರ ನೋಡರಿ, ಅದರ ಅತ್ತ್ಯಾಕ ಸಮುದರದ ದಂಡೀಮ್ಯಾಗ ನಾಕ ಮೊಳ ಗುಡಸಲೈತಿ. ಅಲ್ಲಿ ನೋಡಿರಿ, ನಾನು, ನನ್ನ ಹೆಣ್ತಿ, ಮುದಕಿ ಎವ್ವ, ಎಡ್ಡು ಹೆಣ್ಣು, ಎಡ್ಡು ಗಂಡು ಹುಡುಗೂರು, ಈಟು ಮಂದಿ ಇರತೀವಿ ನೋಡಿರಿ.'

'ಮತ್ತ ನಿನ್ನ ಹೆಂಡತಿ ದಗದಕ್ಕ ಹೋಗತಾಳೇನು?'

'ಹೊಕ್ಕಿರತಾಳರಿ. ಈಗಿಲ್ಲರಿ. ಹಡದು ಎಂಟು ದಿನಾ ಆತರಿ. ಗಂಡು ಹುಟ್ಟೇತರಿ. ಈ ಹುಡುಗ ಆಕೀ ಜೀವಾ ಅರೀತೈತಂತ ನನ್ನ ಸಂಗಾಟ ಕರಕೊಂಡು ಬರತೀನರಿ. ಎಲ್ಲಾ ಬಡತನ ಐತಿ ಎಪ್ಪ, ಮಕ್ಕಳಿಗೇನು ಬಡತನ ಇಲ್ಲ ನೋಡರಿ. ಗಿರಣ್ಯಾಗಿನ ಬಟ್ಟೆಹಂಗ ಹುಟ್ಟೇ ಹುಟ್ಟತಾವರಿ.'

ನರಸನು ಒಂದು ಒಣನಗೆಯನ್ನು ನಕ್ಕನು. ಅದರ ಪ್ರಭಾವದಿಂದ

ರಾಮಣ್ಣನೂ ನಕ್ಕನು; ಆದರೆ ಹೊಟ್ಟೆಯಲ್ಲಿ ಕಾರವನ್ನು ಕಲಸಿದಂತಾಯಿತು. ತನ್ನ ಹೊಟ್ಟೆಯೊಂದನ್ನು ತುಂಬಿಸಲಿಕ್ಕಾಗದ ಈ ಬಡಜೀವಿಗೆ ಇಷ್ಟು ಮಕ್ಕಳು ಹುಟ್ಟಿದರೆ ಏನು ಗತಿ ಎಂದು ಮರುಗಿದನು.

ಸಂಜೆಯ ಮಬ್ಬು ಹೆಚ್ಚಿತು. ನರಸನು ಎಷ್ಟು ದೂರ ಹೋಗಬೇಕೊ ಎಂದು ಎಣಿಸಿ ರಾಮಣ್ಣನು ಹೊರಡುವ ಹೆಜ್ಜೆಯಿಟ್ಟನು. ಆದರೆ ಅವನು ಹೇಗೆ ಹೋಗುವನೆಂದು ಕೇಳುವ ಕುತೂಹಲವು ಅವನನ್ನು ತಡೆಯಿತು. ಹಿಂದಿರುಗಿ ಕೇಳಿದನು. 'ಹೋಕ್ಕಿವೇಳು ಎಪ್ಪ, ಟಿರಾಯಿನ್ನಾಗ ದಾದರ ತಕ್ಕ ಹೋಗಿ ಮುಂದ ಒಂದೆಡ್ಡು ಕೂಗಳತಿ ನಡೀತೀವರಿ' ಎಂದು ನರಸನು ಮಗನ ಕೂಡ ಹೊರಡಲನುವಾದನು. ರಾಮಣ್ಣನು ಹುಡುಗನ ಕೈಯಲ್ಲಿ ಒಂದಾಣೆ ಕೊಟ್ಟು 'ನರಸ, ಹೋಗಿ ಬಾ. ದಿನಾಲು ನಿನ್ನ ಭೆಟ್ಟಿ ಆಗತೀನಿ, ಆಂ' ಎಂದು ತನ್ನ ಕಚೇರಿಯ ಸ್ಥಳಕ್ಕೆ ಮರಳಿ ಹೋಗಿ ಕೋಟು ತಗಲಿಸಿ ತನ್ನ ಮನೆಯ ಹಾದಿ ಹಿಡಿದನು. ನರಸನ ಜೀವನಚಿತ್ರವು ಹೋದಹೋದಲ್ಲೆಲ್ಲ ಅವನ ಕಣ್ಣುಕಟ್ಟಿ ಬಾಳುವೆಯ ಕರುಣಾಪನ್ನು ಎತ್ತಿಎತ್ತಿ ತೋರಿತು.

ಮುಂದಿನ ದಿನಗಳಲ್ಲಿ ರಾಮಣ್ಣನ ದಿನಚರಿಯಲ್ಲಿ ನರಸನ ಭೆಟ್ಟಿ, ಅವನೊಡನೆ ಮಾತುಕತೆ ಒಂದು ಅವಶ್ಯ ಭಾಗವಾಯಿತು. ಗಿರಣಿಯ ನಗರಾರಣ್ಯದಲ್ಲಿ ಅದೊಂದೆ ಜವಳುನೆಲವೆಂಬಂತೆ ಅವನಿಗೆ ಎನಿಸುತ್ತಿತ್ತು. ಕೆಲಸ ತೀರಿಸಿ ಮನೆಗೆ ಹೋದೊಡನೆ ನರಸನ ಸಮಾಚಾರವನ್ನು ತನ್ನ ಪದ್ಮೆಗೆ ಹೇಳುತ್ತಿದ್ದನು. ಅವಳೂ ಆಪ್ತೇಷ್ಟರ ಸುದ್ದಿ ಕೇಳಿದಂತೆ ನರಸನ ಹೆಂಡತಿಯ ವಿಷಯವನ್ನು ಕೇಳಿ ತಿಳಿಯುತ್ತಿದ್ದಳು. ಹಡೆದು ಮೂರು ತಿಂಗಳಾಗುವಷ್ಟರಲ್ಲಿ ತನ್ನ ಹೆಂಡತಿಗೆ ಉರಿ ಬರುತ್ತಿರುವವೆಂದು ನರಸನು ಒಮ್ಮೆ ಹೇಳಿದನು. 'ಅದಕ್ಕೆ ಔಷಧ ಕೊಡಿಸು' ಎಂದು ರಾಮಣ್ಣ ಹೇಳಿದ್ದಕ್ಕೆ ನರಸನು ನಕ್ಕು 'ಎಲ್ಲೀ ಔಸದ ಎಪ್ಪ, ನಿವಸ ಕಾಯಬೇಕರಿ!' ಎಂದನು. ರಾಮಣ್ಣನ ಕರುಳನ್ನು ಹಿಂಡಿದಂತಾಯಿತು. ತಾನೇ ಕ್ವಿನಾಯಿನಿನ ಗುಳಿಗೆಗಳನ್ನು ತಂದು ಅವನ್ನು ಕೊಡಲಿಕ್ಕೆ ಹೇಳಿದನು. ಆದರೆ ಮೂರು ನಾಲ್ಕು ದಿನವಾದರೂ ಜ್ವರವು ಆರಲಿಲ್ಲವಂತೆ. ಹೆಂಡತಿಯ ಆರೈಕೆಯಲ್ಲಿ ರಾತ್ರಿಯೆಲ್ಲ ನಿದ್ದೆಯಿಲ್ಲದೆ ನರಸನಿಗೂ ದಣುವಾಯಿತು. ಆದರೂ ಅದನ್ನು ಲೆಕ್ಕಿಸದೆ ಕೂಲಿ ಕೆಲಸಕ್ಕೆ ಬರುತ್ತಿದ್ದನು. ರಾಮಣ್ಣನು ಒಮ್ಮೆ ಅವನನ್ನು ಮಾತಾಡಿಸಬೇಕೆಂದು

ಗಿರಣಿಯೊಳಗೆ ಹೋದನು. ನೈನಡುಗುತ್ತಿದ್ದರೂ ಒಂದು ಭಾರವಾದ ಬುಟ್ಟಿಯನ್ನು ಹೊತ್ತು ನರಸನು ನಡೆದಿದ್ದನು. ಮುಖದ ಮೇಲೆ ಬಡ್ಡಿನ ಕಳೆ ಸುರಿಯುತ್ತಿತ್ತು. 'ಇದೇನು ನರಸ ?' ಎಂದು ಪಾಮಣ್ಣನು ಬುಟ್ಟಿ ಯೆತ್ತಿದ ಕೈಯೊತ್ತಿ ನೋಡಿದನು. ಕಾದು ಕೆಂಡವಾಗಿದೆ. 'ಬುಟ್ಟಿಯನ್ನು ಇಲ್ಲೇ ಇಳಿಸು, ಮನೆಗೆ ನಡೆ' ಎಂದನು. ನರಸನು 'ಅದು ಆಗಾಣಿಲ್ಲರಿ' ಎಂದು ಅಲ್ಲೇ ಕುಪ್ಪರಿಸಿ ಬಿದ್ದನು. ಗಿರಣಿಯಲ್ಲಿ ಗದ್ದಲವೆದ್ದಿತು. ಎಲ್ಲರೂ ಬಂದು ನರಸನನ್ನು ಬಯ್ಯುವವರೇ. ಹೇಗೋ ಸಾವರಿಸಿಕೊಂಡು ಮತ್ತೆ ತನ್ನ ಕೆಲಸಕ್ಕೆ ನರಸನು ಹೋದನು. ಅದನ್ನು ನೋಡಲಾರದೆ ಪಾಮಣ್ಣನು ಮರಳಿದನು. ಮಾಲಕರಿಗೆ ಹೇಳಬೇಕೆಂದರೆ ತನ್ನ ಮಾತು ನಡೆಯುವುದೆಂಬ ಆಶೆಯಿಲ್ಲ. ಅಲ್ಲದೆ ತನ್ನ ಮಾತಿನಿಂದ ನರಸನನ್ನು ಬಿಡುಗಡೆ ಮಾಡಿದರೆ ಅವನ ದಿನದ ಕೂಲಿಗೆ ಚಕ್ಕರ ಬಂದೀತು. ಯಾವುದೂ ಬಗೆ ಹರಿಯದೆ ಪಾಮಣ್ಣನು ಕಂಗೆಟ್ಟನು.

ಒಂದೆರಡು ದಿನ ಕಳೆದವು. ಪಾಮಣ್ಣನಿಗೆ ಗಿರಣಿಯಲ್ಲಿ ನರಸನ ದರುಶನವೇ ಇಲ್ಲ. ತನ್ನ ಕಣ್ಣು ತಪ್ಪಿ ಎಲ್ಲಿಯೋ ಮೂಲೆಯಲ್ಲಿ ಕೆಲಸ ಮಾಡುತ್ತಿರಬಹುದೆಂದು ಮೊದಲು ತಿಳಿದನು. ಅದಕ್ಕಾಗಿ ಎಲ್ಲಕಡೆ ಹುಡುಕಿದನು, ಜೊತೆಯ ಕೆಲಸಗಾರರನ್ನು ಕೇಳಿದನು. ಅವನು ಕೆಲಸಕ್ಕೆ ಬಂದಿಲ್ಲವೆಂಬುದು ದಿಟವಾಯಿತು. ಅವನ ಹೆಂಡತಿಯ ಜ್ವರವು ವಿಕೋಪಕ್ಕೆ ಹೋಯಿತೋ, ಅವನ ಬೇನೆಯೆ ಹೆಚ್ಚಿತೋ ಎಂಬ ಗಸಣಿಯಲ್ಲಿ ಪಾಮಣ್ಣನು ಬೆಂಡುಬೆಂಡಾದನು. ಸಂಜೆಯ ಆರಕ್ಕೆ ತನ್ನ ಕೆಲಸವು ಮುಗಿದದ್ದೇ ತಡ, ನೆಟ್ಟಗೆ ಗಾಡಿ ಹತ್ತಿ ಮಾತುಂಗಾಕ್ಕೆ ಹೊರಟನು. ನಿತ್ಯದಂತೆ ತನ್ನ ಬೀಡಿಗೆ ಹೋಗುವ ವಿಚಾರವು ಅವನಿಗೆ ಅಸಹ್ಯವಾಯಿತು. ಮಾತುಂಗಾಕ್ಕೆ ಹೋಗಿ ಕಟ್ಟಡಗಳ ಹಿಂಭಾಗದ ಹುಲ್ಲುಕಂಟಿಯಲ್ಲಿ ಹೊಕ್ಕು ಸಾಗಿದನು. ನರಸನ ಗುಡಿಸಲು ಇಂಥ ದಿಕ್ಕಿನಲ್ಲಿ ಎಂದು ಮಾತ್ರ ಗೊತ್ತು. ಇದೇ ಎಂದು ಗುರುತಿಸುವ ಬಗೆಯೇನು ? ನರಸನು ಮಾಡಿದ ವರ್ಣನೆಯಿಂದಲೂ ತನ್ನ ಭಾವನೆಯ ಆವೇಗದಿಂದಲೂ ಹೆಚ್ಚುತ್ತಿರುವ ಕತ್ತಲೆಯಲ್ಲಿ ಬೆಳಕು ಕಂಡಂತೆ ನಡೆದನು. ಒಂದೆರಡು ಕಡೆ ದಾರಿಯ ನೀರುಗುಂಡಿಗಳಲ್ಲಿ ಕಾಲು ಜಾರಿತು; ಅರ್ಧ ಮೈಯು ತೊಯ್ಯಿತು; ಮತ್ತೆ ಎದ್ದು ಸಮುದ್ರದ ಒತ್ತಿನ ದಂಡೆಗೆ ಇರುವ

ಹರಮುರುಕು ಗುಡಿಸಲುಗಳನ್ನು ಸಿಟ್ಟಿಸುತ್ತ ಮುಂದರಿದನು. ಇರಡು ತಾಸು ರಾತ್ರಿಯಾಯಿತು. ಏನೂ ಸುಳಿವಿಲ್ಲ. ಲೋಕಲ್ ಗಾಡಿಗಳ ಧಡಧಡ ಸಪ್ಪಳವು ಆಗಾಗ ಕೇಳಿಸುತ್ತಿದೆ. ಹಿಂದೆ ವಿದ್ಯುತ್ತಿನ ದೀಪಗಳು ಮಿನುಗುತ್ತಿವೆ; ಮುಂದೆ ಗುಡಿಸಲುಗಳ ನಿಸ್ತೇಜ ಕಣ್ಣುಗಳಂತೆ ಅಲ್ಲಲ್ಲಿ ಮಿಣಿಮಿಣಿ ಬೆಳಕಿದೆ. ಮುಂಬಯಿಗೆ ಬಂದ ಮೇಲೆ ಎಷ್ಟೋ ಸಾರೆ ವಾಮಣ್ಣನು ದಾರಿ ತಪ್ಪಿ ಅಲೆದಿದ್ದನು. ಆದರೆ ಇಂದಿನಷ್ಟು ದಿಙ್ಮೂಢತೆಯು ಅವನಿಗೆ ಎಂದೂ ಉಂಟಾಗಿರಲಿಲ್ಲ. ಕಡೆಗೆ ಒಂದು ಬಂಡೆಗಲ್ಲಿನ ಆಸರೆ ಹೊಂದಿ ಆಕಾಶವನ್ನು ನೋಡುತ್ತ ತುಸು ಹೊತ್ತು ಕುಳಿತನು. ಮನೆಯ ನೆನವು ನುಗ್ಗಿತು; ಮನೆಯತ್ತ ಮೋರೆ ತಿರುವಿದನು. ತನ್ನ ಪದ್ಮೆಯು ಒಂದೇ ಸವನೆ ತನ್ನ ದಾರಿ ಕಾಯುತ್ತ ಎಷ್ಟು ಚಿಂತೆ ಮಾಡುತ್ತಿರಬಹುದು ಎಂಬ ವಿಚಾರದಿಂದ ಕಲಮಲಗೊಂಡನು. ಕೂಡಲೆ ಎದ್ದು ನಾಲ್ಕು ಹೆಜ್ಜೆಗಳನ್ನು ವಿದ್ಯುದ್ದೀಪದ ದಿಕ್ಕಿಗೆ ಇಟ್ಟನು. ಆದರೆ ಅವನ ಅಂತಃಕರಣವು ಅದಕ್ಕೊಪ್ಪಲಿಲ್ಲ. ಗೊತ್ತುಗುರಿಯಿಲ್ಲದೆ ಮತ್ತೆ ಸಾಗಿದನು. ಅಷ್ಟರಲ್ಲಿ ಒಂದು ಕಡೆಯಿಂದ ಚಿಕ್ಕ ಮಕ್ಕಳು ಅಳುವ ದನಿ ಕೇಳಿತು. ಹತ್ತಿರ ಹತ್ತಿರ ಹೋದಂತೆ, 'ಅಪ್ಪ, ಅಪ್ಪ' ಎಂಬ ಮಾತುಗಳು ಅಳುವಿನಲ್ಲಿ ಬೆರೆತಂತೆ ತೋರಿತು. ವೇಗದಿಂದ ಅಡಿಯಿಡುತ್ತ ಆ ಕಡೆ ಹೋಗಲಾಗಿ ಆ ಅಳುತ್ತಿರುವ ಗುಡಿಸಲಿನ ಹಿಂಬದಿಗೆ ಬಂದು ಮುಟ್ಟಿದನು. ಬಿಣ ಪೊರಕೆಗಳ ಪೊಳ್ಳು ಗೋಡೆಗೆ ಕಿವಿ ಹಚ್ಚಿ ಕೇಳಿದನು. ಎಲ್ಲರೂ ಗೊಳೋ ಎಂದು ಅಳುತ್ತಿರುವರು. ಯಾರೋ ಸತ್ತಿರಬೇಕೆಂದು ತೋಚಿತು. 'ನರಸನಿಗೇ ಸಾವು ಅಡರಿತೇ? ಅಯ್ಯೋ ಅವನ ಪ್ರಪಂಚದ ಗತಿಯೇನು?' ಎಂದು ಅವನು ನಡುನಡುಗಿ ಬಗೆಯುವಷ್ಟರಲ್ಲಿ ನರಸನ ಅಳುದನಿಯೇ ಕೇಳಿತು. ಆಗ ತುಸು ಧೈರ್ಯವು ಒಂದು ಮುಂಗಡೆಗೆ ಹೋದನು. ಮೊದಲು ಅವನನ್ನು ಯಾರೂ ನೋಡಲಿಲ್ಲ. ಗುಡಿಸಲ ನಡುವೆ ಒಂದು ಹೆಂಗಸಿನ ಹೆಣವಿದೆ. ಸುತ್ತು ಮುಗಿಬಿದ್ದು ನರಸನೂ ಅವನ ತಾಯಿಯೂ ಮಕ್ಕಳೂ ಹುಯ್ಯಿಡುತ್ತಿರುವರು. ವಾಮಣ್ಣನಿಗೆ ಶೋಕವು ತಡೆಯದಾಯಿತು. 'ನರಸ!' ಎನ್ನುತ್ತ ಒಳನುಗ್ಗಿ ತಲೆಗೆ ಕೈಹಚ್ಚಿ ಕುಳಿತನು. ನರಸನಿಗೆ ಇವನು ಯಾರೆಂಬುದು ಮೊದಮೊದಲು ಗೊತ್ತಾಗಲಿಲ್ಲ ಮುಂದೆ ಗುರುತು ಸಿಕ್ಕಿತು. 'ಅಪ್ಪ, ನನ್ನ ಮುತ್ತಿನಂತ ಹೇಣ್ತೈನ್ನ ಸಿವನ

ಹತ್ತ್ಯಾಕ ಕಳಿಸಿದೆ, ನನ್ನ ಗಾಡಿ ಒಗ್ಗ್ಯಾಲಿ ಆತು ' ಎಂದು ಹಾಡಿ ಹಾಡಿ ಅ
ಹತ್ತಿದನು. ವಾಮಣ್ಣನ ಮಾತಿಲ್ಲದ ಕಳವಳವು ಮಿತಿಮೀರಿತು. ಆದರೂ
ಎದೆಗೆಟ್ಟ ನರಸನಿಗೆ ತಾನು ಧೈರ್ಯ ಕೊಡಬೇಕೆಂದು ತೊದತೊದಲುತ್ತ
ಹೇಳಿದನು: ' ನರಸ, ಶಿವ ಮಾಡಿದ್ದಕ್ಕ ಮಾಡೋದೇನು ? ಸುಮ್ಮನಾಗು
ನಿಮ್ಮಪ್ಪನ್ನ, ಮಕ್ಕಳನ್ನ ಸಂಭಾಳಿಸಿಕೋ. ನೀ ನಾಕೊಪ್ಪತ್ತು ಬಾ
ದುಡಿದು ತಂದು ಹಾಕಿದರ ನಿನ್ನ ಸಂಸಾರೆಲ್ಲ ಒದಕೀತು.'

' ಅದೆಲ್ಲಾ ಸತ್ಯೇವು ದೇವರ. ನನ್ನ ಹೇಣ್ತಿ ಹೆಂಗ ನನಗ ಸಿಕ್ಯಾಳರಿ
ನೀವು ಏಟು ಹೇಳಿದಿರಿ, ಔಸದ ಕೊಡಲಿಲ್ಲ ನೀಚ ಮನಸ್ಯಾ ನಾ. ಉರಿಯೇ
ಬಿಟ್ಟವು, ಕೆಯ್ ಬಿಟ್ಟಕ್ಯಾಸ ಹೊಂಟಳು. ಮಲೀ ಕೂಸು ಉಳದೈತಿ.'

ಹೀಗೆ ಕೆಲ ಹೊತ್ತು ಎದೆಯುಳಲು ಹೊರಹೊಮ್ಮಿತು. ಇಷ್ಟರ
ಸುತ್ತುಮುತ್ತಿನ ಕೊಂಪೆಗಳಿಂದ ಕೆಲವು ಜನರು ಕೂಡಿದ್ದರು. ವಾಮಣ್ಣನ
ಅವರಲ್ಲಿ ಮೊರೆಯಿಟ್ಟು ಹೆಣಕ್ಕೆ ಮಣ್ಣು ಕೊಡಬೇಕೆಂದು ಕೇಳಿಕೊಂಡನು
ಒಂದು ತಾಸಿನಲ್ಲಿ ಆ ಕೆಲಸವು ಮುಗಿಯಿತು. ಇಷ್ಟೊತ್ತಿಗೆ ಹತ್ತು ಒಡಿದ
ಹೋಗಿದ್ದಿತು. ತನ್ನ ಮನೆಯ ಧ್ಯಾನವು ಮತ್ತೆ ಜೋರಿನಿಂದ ವಾಮಣ
ನನ್ನು ತಿವಿದೆಳೆಯಿತು. ಇನ್ನೂ ಅಳುತ್ತಲೇ ಇರುವ ನರಸನ ಹತ್ತಿರ ಹೋ
' ನರಸ, ಏಳಿನ್ನು, ಇಲ್ಲಿ ಹೊರಗೆ ಬಾ ' ಎಂದು ವಾಮಣ್ಣನು ಕರೆದು ಅವ
ಕೈಯಲ್ಲಿ ಒಂದು ರೂಪಾಯಿಯನ್ನಿಟ್ಟು ' ತಗೊ, ಕೂಸು-ಕುನ್ನಿಗೆ ಹಾ
ಕುಡನು. ನಾಕು ದಿನ ಬಿಟ್ಟು ಕೆಲಸದ ಮ್ಯಾಲೆ ಹಜರಾಗು. ನಾ ಮಾಲ
ರಿಗೆ ಹೇಳತೀನಿ, ತಿಳೀತಿಲ್ಲೊ ? ನಾ ಇನ್ನ ಮನಿಗೆ ಹೋಗತೀನಿ, ಆ
ಎಂದು ಹೊರಟನು.

' ಎಪ್ಪಾ, ದೇವರು ಬಂದಂಗ ಬಂದರಿ ' ಎಂದು ನರಸನು ಕಂಬನಿದುಂ
ವಾಮಣ್ಣನನ್ನು ಬೀಳ್ಕೊಟ್ಟನು. ತಾನು ಕಂಡ ಸಂನಿವೇಶದಿಂದ ಇನ್ನಿಷ
ಭಯಾನಕವಾದ ಕಗ್ಗತ್ತಲೆಯಲ್ಲಿ ಎಡವುತ್ತ ಮುಗ್ಗುತ್ತ ವಾಮಣ್ಣನ
ಮಾತುಂಗಾದ ಬೀದಿಯೊಂದನ್ನು ಸೇರಿ ನಡೆಯುತ್ತಿರಲು ಸುದೈವದಿಂ
ಒಂದು ಟ್ಯಾಕ್ಸಿಯು ಸುಳಿಯಿತು. ಅದರಲ್ಲಿ ಕುಳಿತವನೆ ತನ್ನ ಮನೆ ಸೇ
ನೋಡುತ್ತಾನೆ, ಹನ್ನೆರಡು ಹೊಡೆದಿದೆ! ಬಾಗಿಲು ತೆರೆದು ಗೋಡೆಗೆ ಆತ
ಕೊಂಡು ಹುಚ್ಚುಸುರಿಯುತ್ತ ಪದ್ದಕ್ಕನು ಕುಳಿತಿರುವಳು. ' ನಾ ಬಂದ

ಏಳು ' ಎಂದು ರಾಮಣ್ಣ ಹೇಳಿದರೂ ಅವಳಿಗೆ ಬೇಗನೆ ಪರಿವೆ ಬರಲೊಲ್ಲದು. ಕಡೆಗೊಮ್ಮೆ ತಿಳಿದೆದ್ದು ಉಸಿರ್ಗರೆದಳು, ಇನ್ನೂ ಮಾತು ಬರಲೊಲ್ಲವು.

' ಕ್ಷಮಿಸು ಪದ್ಮ. ಈವತ್ತು ಅದ್ಭುತ ಆಗಿಬಿಟ್ಟಿತು. ಬೇಗನೆ ಬರಲಿಲ್ಲ. '

' ಅದೇನು ಸುಡುಗಾಡೋ. ಚಾಳದಾಗಿನ ಮಂದಿಗೆಲ್ಲ ಒಪ್ಪಿಸಿ ಹುಡುಕಲಿಕ್ಕೆ ಹಚ್ಚಿದೆ. ಅದೆಷ್ಟು ತಡ ಮಾಡುವುದು ? '

' ಹೌದು ಪದ್ಮ. ಸುಡುಗಾಡಿಗೇ ಹೋಗಿ ಬಂದೆ. ನನ್ನ ಪ್ರೀತಿಯ ನರಸನ ಹೆಂಡತಿ ಸತ್ತುಹೋದಳು.'

' ಪದ್ಮಕ್ಕನಿಗೆ ಒಂದು ಕ್ಷಣ ಕನಿಕರವೆನಿಸಿತು. ಆದರೆ ತನ್ನ ಸುಖ ದುಃಖದ ಮುಂದೆ ಅದು ಹೆಚ್ಚಿನದಾಗಲಿಲ್ಲ; ತಟ್ಟನೆ ಅಂದಳು: ' ಇಲ್ಲಿ ಮನೆಯ ಹೆಂಡತಿ ಸಾಯುತ್ತಿದ್ದಳಲ್ಲ ! ದೆವ್ವನಂಥಾ ಈ ಊರಾಗ ಹಿಂಗ ತಿರಗಿದರೇನು ಗತಿ ನನ್ನದು ! '

ರಾಮಣ್ಣನಿಗೆ ಏನು ಅನಬೇಕೋ ತಿಳಿಯಲಿಲ್ಲ. ಮನೆಯ ಹೊರ ಒಂದು ಕಟಾಂಜನಕ್ಕೆ ಹೊಂದಿ ನಿಂತು ಘೋರವಾದ ಜೀವನ ಪ್ರವರವನ್ನು ನೋಡಿ ' ಅಯ್ಯೋ ಸಂಸಾರವೇ ! ' ಎಂದು ದೊಡ್ಡ ನಿಟ್ಟುಸಿರು ಬಿಟ್ಟನು.

---

## ಪ್ರಕರಣ ೮.

ರಾಮಣ್ಣನ ಭಾವನೆಯಲ್ಲಿ ಕೂಲಿಕಾರ-ನರಸನ ಬಾಳು ನೆಲೆಗೊಂಡು ನಿಂತಿತು. ಅದು ಬರೀ ಮಿಂಚಿಹೋದ ಬೆಳಕಾಗಲಿಲ್ಲ; ಯಾವಾಗಲೂ ಕಣ್ಣ ಮುಂದೆ ಕಟ್ಟುವ ಬಿಂಬವಾಯಿತು. ನರಸನಿಗೆ ಆಗುವ ಸುಖದುಃಖಗಳೆಲ್ಲ ತನಗೇ ಆಗುತ್ತಿರುವಂತೆ ಅವನು ಭಾವಿಸುತ್ತಿದ್ದನು. ಮನೆಯಲ್ಲಿ ತಾನು ಸವಿಯೂಟ ಮಾಡಿದರೆ ಗುಡಿಸಲಲ್ಲಿ ತಂಗಳನ್ನುಣ್ಣುವ ನರಸನ ನೋಟವು ಅವನಿಗೆ ಕಾಣುವುದು; ಕಣ್ಣಂಚಿನವರೆಗೆ ನೀರು ತರಿಸಿಬಿಡುವುದು. ಆಗ ಊಟವನ್ನು ತಡೆದು ಅವನು ತುಸು ಹೊತ್ತು ಯೋಚಿಸುವನು. ಒಬ್ಬ ನರಸನ ಕೂಡ ನೂರಾರು ' ನರಸ ' ರು ಇದಿರು ನಿಲ್ಲುವರು. ಅವರ ಮುಖದಲ್ಲಿ ಕಂಗೆಟ್ಟ ಕನ್ನಡವೂ ಕಂಗಾಲವಾದ ಭಾರತವೂ ಮೂಡುವವು. ' ನಮ್ಮ

ದೇಶದ ಬಡತನವು ಎಂದಿಗೂ ಹೋಗಲಾರದೇ ? ಎಂದು ಕಸಿಪಿಸಿಯಿಂದ ತನ್ನಷ್ಟಕ್ಕೆ ಅವನು ಕೇಳಿಕೊಳ್ಳುವನು; ಮತ್ತೆ ಊಟವು ಮುಂದರಿಯು ವುದು. ಅವನ ಮನಸ್ಸಿನಲ್ಲಿ ನಡೆದ ಮಂಥನವನ್ನು ಅರಿಯಲಾರದ ಪದ್ದಕ್ಕನು 'ಯಾಕ ? ಸಾರು ನೆಟ್ಟಗಾಗಿಲ್ಲೇನು ?' ಎಂದು ಕೇಳುವಳು. ಅವನು ಏನೂ ಉತ್ತರ ಕೊಡದೆ ಅವಳನ್ನು ನಿಟ್ಟಿಸಿ ಒಂದು ಮುಗುಳುನಗೆಯನ್ನು ನಕ್ಕು ಬಿಡುವನು.

ಹೀಗೆ ಇರುತ್ತಿರಲು ಒಂದು ದಿನ ಅವನ ಹಳೆಯ ಗೆಳೆಯನಾದ ಮುರಲಿಯಿಂದ ಇಂಗ್ಲಿಶಿನಲ್ಲಿ ಪತ್ರವೊಂದು ಬಂದಿತು. ಕಾಲೇಜಿನ ಕೊನೆಯ ವರ್ಷದಲ್ಲಿ ಇದ್ದರೂ ತನ್ನ ಅಭ್ಯಾಸದ ಬಗ್ಗೆ ಅವನು ಬಹಳೇನೂ ಬರೆದಿರಲಿಲ್ಲ. ಬೇಸಿಗೆ ಬಿಡುವಿನಲ್ಲಿ ತನ್ನ ಮದುವೆ-ಫಲಶೋಭನಗಳು ನಡೆದ ಸಮಾಚಾರವನ್ನು ಬಹಳ ಉತ್ಸಾಹದಿಂದ ತಿಳಿಸಿ, ಒಂದೆರಡು ಸ್ವಾರಸ್ಯವಾದ ಅನುಭವಗಳನ್ನು ವರ್ಣಿಸಿದ್ದನು. ಕೊನೆಯಲ್ಲಿ 'ಕಲಿತ ಹೆಣ್ಣಿಗಿಂತ ಹಳ್ಳಿಯ ಹುಡಿಗಿಯೇ ಹೆಂಡತಿಯಾಗಲು ಯೋಗ್ಯಳೆಂದು ನನ್ನ ಈಗಿನ ಮತವು. ಯಾಕಂದರೆ ಕಲಿತವಳು ಮನಸ್ಸಿಗೆ ಬಂದಂತೆ ನಡೆಯುವಳು, ಹಳ್ಳಿಯವಳು ಹೇಳಿದಂತೆ ಕೇಳುವಳು. ನಾನು ಅಪೇಕ್ಷಿಸುವ ಸಂಸಾರಸುಖವೆಲ್ಲ ಅವಳಿಂದ ಸಿಗುತ್ತದೆ' ಮುಂತಾಗಿ ಮಾತುಗಳಿದ್ದವು. ಪತ್ರವೆಲ್ಲ ಇಂಥ ವಿಚಾರಗಳಿಂದ ತುಂಬಿತ್ತು. ಅದರ ಇಂಗ್ಲಿಶ್ ಶೈಲಿಯಂತೂ ಅಪ್ರತಿಮವಾಗಿಯೆ ಇತ್ತು ! ವಾಮಣ್ಣನಿಗೆ ಬಹಳ ಕಲಮಲವಾಯಿತು. ಪತ್ರವನ್ನು ಕೆಳಗಿಟ್ಟು ಉಸಿರುಗರೆದನು. ತೀರ ಕಡೆಗೆ ಟೀಪೊಂದು ಕಂಡಿತು. 'ನೀನಿತ್ತ ಬರುವಾಗ ನನ್ನ ಸಲುವಾಗಿ ಒಳ್ಳೆಯ ಅತ್ತರವನ್ನೂ ಪ್ರಿಯೆಗಾಗಿ ಬ್ಲೌಜಿನ ಅರಿವೆಯನ್ನೂ ತಗೊಂಡು ಬಾ. ನನ್ನವಳನ್ನು ಸುಧಾರಿಸಬೇಕಾಗಿದೆ, ಸಂತುಷ್ಟಗೊಳಿಸಬೇಕಾಗಿದೆ.'

ಆಯಿತು, ಇದನ್ನೋದಿಯಂತೂ ವಾಮಣ್ಣನಿಗೆ ಹುಚ್ಚುನಗೆ ಬಂದಿತು; ಕೆಟ್ಟ ಸಂಕಟವೂ ಆಯಿತು. ಹಿಂದುಸ್ತಾನದಲ್ಲಿ ಈಗಿರುವುದು ರಾಗಿಯ ಬರವೂ ಅಲ್ಲ, ಡೌಗಿಯ ಬರವೂ ಅಲ್ಲ, ನಗೆಯ ಬರ ಎಂದುಕೊಂಡನು. ಒಂದು ಕಡೆ ಸರಸ, ಇನ್ನೊಂದು ಕಡೆ ಮುರಲಿ !

ಹೀಗೆ ಕೆಲವು ದಿನಗಳು ಹೋದವು. ಪದ್ದಕ್ಕನು ಮೂರು ನಾಲ್ಕು ತಿಂಗಳ ಬಸುರಿಯೆಂದು ತೋರಿತು. ಬಯಕೆಯಿಂದ ಅವಳಿಗೆ ದಿನದ ಊಟವು ಹೋಗದು. ಹೊಸ ಹೊಸ ಪದಾರ್ಥಗಳನ್ನು ತರಿಸಿ ತುಸು ತಿಂದು

ರುವನ್ನೂ ಇಟ್ಟುಬಿಡುವಳು. ಕೆಲಸದಲ್ಲಿ ಒಂದು ತರದ ಬೇಸರ ಹುಟ್ಟಿತು. ಮೋರೆ ಬಿಳುಪಿಟ್ಟಿತು. ಒಂದೆರಡು ಸಾರೆ ತಾನೇ ಅಡಿಗೆ-ಕೆಲಸ ಮಾಡ ಬೇಕೆಂದು ವಾಮಣ್ಣನು ವಿಚಾರಮಾಡಿದನು. ಆದರೆ ಪದ್ಮಕ್ಕನು ಅದಕ್ಕೆ ಒಪ್ಪುವುದು ಸಾಧ್ಯವೇ ಇರಲಿಲ್ಲ. ಇನ್ನೇನು ಮಾಡಬೇಕೆಂದು ಅವನು ಚಿಂತಿಸುವಷ್ಟರಲ್ಲಿ ಧಾರವಾಡದಿಂದ ಮಾನಂದಿರ ಪತ್ರ ಬಂದಿತು. ಪದ್ಮಕ್ಕ ನನ್ನು ಕರೆದುಕೊಂಡು ಹದಿನೈದು ದಿನವಾದರೂ ರಜೆ ತಗೊಂಡು ಬರ ಬೇಕೆಂದು ಭೀಮರಾಯರು ಬಹಳ ಆರ್ಜವದಿಂದ ಕರೆದಿದ್ದರು. ಹಾಗೆಯೆ ಮಾಡಬೇಕೆಂದು ವಾಮಣ್ಣನು ಗೊತ್ತುಮಾಡಿದನು. ಆವನ ಸುದೈವದಿಂದ ರಜೆಯೂ ಸಿಕ್ಕಿತು. ಮರುದಿನವೇ ಪದ್ಮಕ್ಕನ ಕೂಡ ಅವನು ಧಾರವಾಡಕ್ಕೆ ಹೊರಟನು. ಅವರು ಎಷ್ಟೋ ದಿನಗಳ ಮೇಲೆ ತಿರುಗಿ ಧಾರವಾಡಕ್ಕೆ ಬಂದ ದ್ದರಿಂದ ಮನೆಯಲ್ಲಿ ಎಲ್ಲರಿಗೂ ಸಂತೋಷವುಕ್ಕಿತು. ಅದರಲ್ಲಿ ಪದ್ಮಕ್ಕನಿಗೆ ಬಯಕೆಯೆಂದು ತಿಳಿದು ಮನೆಯ ಹೆಣ್ಣುಮಕ್ಕಳಿಗೆ ಉಂಟಾದ ಹಿಗ್ಗನ್ನು ಅಳೆಯಲಾಸಲ್ಲ. ಅವಳ ಬಯಕೆಯಿಂದ ಅದೆಷ್ಟೋ ಅಷ್ಟೇಷ್ಟರ ಬಯಕೆಗಳು ಕೈಗೂಡಿದವೋ ಎನ್ನುವಂತೆ ಎಲ್ಲರೂ ಸಂತೋಷಪಟ್ಟರು. ಹೆಂಗಸರು ಕೂಡುವ ಸ್ಥಳಗಳಲ್ಲೆಲ್ಲ ಅದೊಂದು ಹೊಸಸುದ್ದಿಯಾಯಿತು. ಊಟ ಸಿದ್ಧೆ ಯಿಲ್ಲದೆ ಪದ್ಮಕ್ಕನು ಸೊರಗುತ್ತಿರುವಳು, ದಿನವೂ ಓಕರಿಕೆಯಿಂದ ಒದ್ದಾ ಡುತ್ತಿರುವಳು. ಆದರೆ ಅವಳ ದುಃಖವು ಮುಂಬರುವ ಸುಖಕ್ಕೆ ಸಾಧನ ಸಂಪತ್ತಿಯೆಂದೊ ಏನೊ ಯಾರೂ ಹೆಚ್ಚಾಗಿ ಮಿಡುಕುತ್ತಿರಲಿಲ್ಲ. ಅವಳಿ ಗೆಂದು ಎಲ್ಲರೂ ತರತರದ ಉಣಿಸುಗಳನ್ನು ಮಾಡಿಕೊಡುತ್ತಿದ್ದರು. ಹಣ್ಣು ಹಂಪಲಗಳನ್ನು ತಂದುಕೊಡುತ್ತಿದ್ದರು. ಅವುಗಳಲ್ಲಿ ಯಾವುದಾದರೂ ಒಂದು ಅವಳಿಗೆ ರುಚಿಸಿದರೆ ಸಾಕು, ಅಷ್ಟೇ ಅದನ್ನು ತಂದುಕೊಟ್ಟವರಿಗೆ ಸಮಾ ಧಾನವಾಗುತ್ತಿತ್ತು.

ಧಾರವಾಡಕ್ಕೆ ಬಂದೊಡನೆ ಆನಂದಮೂರ್ತಿಗಳನ್ನು ಕಾಣಲಿಕ್ಕೆ ಹೋಗುವುದೆಂದರೆ ವಾಮಣ್ಣನಿಗೆ ಅದೊಂದು ಹುಚ್ಚು. ತನ್ನ ಕ್ರಮದಂತೆ ಒಂದು ಸಂಜೆ ಅವರ ಕಡೆಗೆ ಅವನು ಹೋದನು. ಇತ್ತೀಚೆ ಅವರಿಂದ ಕಾಗದಗಳೂ ಬಾರದ್ದರಿಂದ ಅವನ ಲವಲವಿಕೆಯು ಇನ್ನಷ್ಟು ಹೆಚ್ಚಿತ್ತು. ಸಪ್ತಾಪುರದಲ್ಲಿದ್ದ ಅವರ ತೋಟಕ್ಕೆ ಹೋಗಿ ಹೊರಗಡೆ ನಿಂತು ವಾಮಣ್ಣ

ನೋಡಿದನು. ತೋಟದಲ್ಲಿ ಹಸುರಿನ ಉಲ್ಲಾಸವು ಅಷ್ಟು ಕಾಣಲಿಲ್ಲ. ಮೊದಲಿಂದಲೂ ಇದ್ದ ಮಾವು, ಸೇರಿಲ ಮರಗಳೇನೊ ಇರುವಂತೆ ಇದ್ದವು. ಆದರೆ ತೋಟದ ತುಂಬೆಲ್ಲ ಹರವಿದ ಮಡಿಗಳೂ ಅದಕ್ಕೆ ನೀರುಣಿಸಲು ಹರಿಯುವ ಕಾಲುವೆಗಳೂ ಒಣಗಿ ನಿಸ್ತೇಜವಾಗಿದ್ದವು. ಎಲ್ಲಿಯೂ ಬೇರೆ ಬೇರೆ ಸಸಿಗಳು ಹಸುಗೂಸುಗಳಂತೆ ಕುಲುಕುಲು ನಗುತ್ತ ನಲಿಯುತ್ತಿರಲಿಲ್ಲ. 'ಇದೇನಾಗಿದೆ? ಆನಂದಮೂರ್ತಿಗಳು ಈ ತೋಟವನ್ನು ಬಿಟ್ಟುಹೋಗಿರಬಹುದೇ?' ಎಂದು ತನ್ನಲ್ಲಿ ವಿಚಾರಮಾಡುತ್ತ ವಾಮಣ್ಣನು ತೋಟದೊಳಗೆ ಹೊಕ್ಕನು. ಗುಡಿಸಲದ ಕಾಲುದಾರಿಗುಂಟ ಹೋಗಿ ಬಾಗಿಲ ಮುಂದೆ ನಿಂತುಕೊಂಡನು. ಬಾಗಿಲವನ್ನು ಮುಂದೆ ಮಾಡಿತ್ತು. ಬೇರೆ ಯಾರಾದರೂ ಅಲ್ಲಿ ಇರಬೇಕೆಂಬ ಸಂಶಯವು ವಾಮಣ್ಣನಿಗೆ ಬಂದಿತು. ಆನಂದಮೂರ್ತಿಗಳಿದ್ದರೆ ಒಮ್ಮೆ ತೆರೆದಿಟ್ಟ ಬಾಗಿಲವನ್ನು ರಾತ್ರಿಯಲ್ಲಿ ಮುಚ್ಚುತ್ತಿದ್ದರೋ ಇಲ್ಲವೋ! ಅಲ್ಲದೆ ಅವರ ಕಾವ್ಯದ ಝೇಂಕಾರವು ಎಲ್ಲ ಕಡೆಗೆ ಕೇಳಿ ಬರುತ್ತಿತ್ತು. ಈಗ ನೋಡಿದರೆ ಮೌನವೇ ಮೌನವಾಗಿದೆ. ಆದರೂ ಸತ್ಯಸಂಗತಿಯನ್ನು ತಿಳಿಯಲೆಂದು ಬಾಗಿಲ ನೂಕಿ 'ಆನಂದಮೂರ್ತಿಗಳೇ!' ಎಂದು ವಾಮಣ್ಣನು ಕೂಗಿದನು.

'ಯಾರವರು? ಒಳಗೆ ಬರ್ರಿ' ಎಂಬ ಸಣ್ಣ ದನಿಯೊಂದು ಒಳಮನೆಯಿಂದ ಕೇಳಿತು. ಆಗ ಧೈರ್ಯ ಬಂದು ವಾಮಣ್ಣನು ಒಳಗೆ ಕಾಲಿಟ್ಟನು. ಮನೆಯು ತನ್ನ ಕನ್ನಡ ಕೋಗಿಲೆಗಳದೇ ಎಂಬ ಅರಿವು ಮೊದಲನೋಟಕ್ಕೆ ಅವನಿಗೆ ಉಂಟಾಯಿತು. ಒಳಗೆ ನಡೆದನು. ಒಳಮನೆಗೆ ಹೋಗಿ ನೋಡಲಾಗಿ ಅವನ ಕನಸುಮನಸಿನಲ್ಲಿ ಸುಳಿಯಲಾರದ ದೃಶ್ಯವು ಕಣ್ಣಿಗೆ ಬಿದ್ದಿತು. ಮೂರ್ತಿಗಳು ತಮ್ಮ ಮಂಚದ ಮೇಲೆ ಹೊದ್ದುಕೊಂಡು ಮಲಗಿರುವರು, ಮುಖನೆಲ್ಲ ಸೊರಗಿ ಸಪ್ಪಗಾಗಿದೆ. ಬದಿಯಲ್ಲಿ ಸ್ಟೂಲಿನ ಮೇಲೆ ಔಷಧ ಬಾಟಲಿ, ಹಣ್ಣಿನ ತೊಳೆ ಇರುವವು. ಹತ್ತಿರದಲ್ಲಿ ಗೋಡೆಗೆ ಆತುಕೊಂಡು ಮೂರ್ತಿಗಳ ಮನೆಯವರು ಶೋಕಾತುರರಾಗಿ ಕೂತಿರುವರು. ವಾಮಣ್ಣನು ಒಂದು ಕ್ಷಣ ಚಕಿತನಾಗಿ ನೋಡುತ್ತ ನಿಂತನು. ತರುವಾಯ ಮೆಲ್ಲಗೆ ಹೋಗಿ ನಮಿಸಿ ನಮಸ್ಕಾರ ಮಾಡಿ 'ಏನಾಗಿದೆ ಮೂರ್ತಿಗಳೇ?' ಎಂದು ಕಳಕಳಿಯಿಂದ ಕೇಳಿದನು

'ಕೂಡು ರಾಮಣ್ಣ, ಎಲ್ಲಾ ಹೇಳತೇನೆ' ಎಂದು ಆಯಾಸದ ದನಿಯಿಂದ ಹೇಳಿದರು. ರಾಮಣ್ಣನು ಇದಿರಲ್ಲಿ ಕುಳಿತುಕೊಂಡನು. ಮೂರ್ತಿಗಳು ಅವನು ಬಂದ ಸಮಾಚಾರವನ್ನು ಮೊದಲು ಕೇಳಿಕೊಂಡರು. ಆಮೇಲೆ ಕೂದಲು ಬೆಳೆದು ಕಪ್ಪಿಟ್ಟ ಮೋರೆಯಲ್ಲಿ ಒಂದು ನಗೆಯ ಬೆಳಸುಳಿಯನ್ನು ಮೂಡಿಸಿ 'ರಾಮಣ್ಣ, ಕರಸಿಕೊಂಡಂತೆ ಎಂಥ ಒಳ್ಳೇ ಹೊತ್ತಿಗೆ ಬಂದೆ ನೋಡು. ನಿನ್ನ ನೋಡಿ ನನ್ನ ಜಡ್ಡೆಲ್ಲ ಮಾಯವಾಯಿತು. ಹಗಲೆಲ್ಲ ನಿನ್ನನ್ನೆ ನೆನಸುತ್ತಿದ್ದೆ' ಎಂದರು.

ರಾಮಣ್ಣನಿಗೆ ಇದನ್ನು ಕೇಳಿ ಹಗುರೆನಿಸಿತು. ಅವರಿಂದ ತನಗೆ ಕಾಗದ ಇಲ್ಲೆಂದು ತಾನು ರಚಿಸಿದ ಕೋಪವು ಬಯಲಾಯಿತು. 'ಅಲ್ಲ, ಏನು ಜಡ್ಡಾಗಿತ್ತು? ಎಷ್ಟು ಸೊರಗಿಬಿಟ್ಟೀರಿ?' ಎಂದು ಕೇಳಿದನು.

ಮೂರ್ತಿಗಳು ಅವನನ್ನು ತೀರ ಹತ್ತಿರ ಕೂಡಿಸಿಕೊಂಡು ಕೆಳಗಿನ ದನಿಯಲ್ಲಿ ಎಲ್ಲವನ್ನೂ ಹೇಳಿದರು: 'ರಾಮಣ್ಣ, ನಾನು ಬದುಕಿದ್ದೇ ಹೆಚ್ಚಾಯಿತು ನೋಡು. ಎರಡು ಮೂರು ವಾರಗಳವರೆಗೆ ವಿಷಮಜ್ವರವು ಒಂದಷ್ಟು ಆರಿರಲಿಲ್ಲ. ಈಗ ಐದಾರು ದಿನಗಳಿಂದ ಜ್ವರ ನಿಂತಿದೆ. ಸಿಡಿ ಬಿದ್ದ ಮರಕ್ಕೆ ಮತ್ತೆ ಚಿಗುರು ಬಿಟ್ಟಂತೆ ನನಗೆ ಹೋದ ಉಸಿರು ಮತ್ತೆ ಬಂದಿದೆ. ನಿನ್ನನ್ನು ಕಾಣದೆ ಹೋಗಿಬಿಡುವೆನೆಂದು ತೋರಿತ್ತು. ಆದರೂ ನನ್ನ ಆಶೆ ಮೇಲಿಂದ ಮೇಲೆ ನನಗೆ ಹೇಳುತ್ತಿತ್ತು: ನೀನು ಇನ್ನೂ ಬದುಕುವಿ, ನಿನ್ನ ಗೆಳೆಯರನ್ನು ಕಾಣುವಿ ಎಂದು. ಅದೀಗ ಸಫಲವಾಯಿತು ರಾಮಣ್ಣ.'

'ತಿಳಿಯಿತು. ಮೂರ್ತಿಗಳೇ, ದೇಶಕ್ಕೆಲ್ಲಾ ಆನಂದಕೊಡುವವರು ನೀವು. ನೀವು ಬದುಕಿದರೆ ನಾವೆಲ್ಲಾ ಬದುಕುತ್ತೇವೆ. ನೀವು ಈಗ ಕೆಲವು ದಿನದಿಂದ ಮಲಗಿಬಿಟ್ಟದ್ದರಿಂದ ನಿಮ್ಮ ತೋಟವೆಲ್ಲ ಕಳೆಗುಂದಿದೆ. ನಿಮ್ಮ ಕಾಗದ, ನಿಮ್ಮ ಕವನವಿಲ್ಲದೆ ನಾನು ಕಳೆಗುಂದಿರುವೆ.'

'ರಾಮಣ್ಣ ನನಗಿಂತ ನಿನ್ನ ಮಾತಿನಲ್ಲಿಯೇ ಕವನ ಹೆಚ್ಚಿದೆ. ಇನ್ನು ಮೇಲೆ ನೀನೇ ಬರೆಯುತ್ತ ಹೊರಡು!'

'ಅದೇಕೆ ಮೂರ್ತಿಗಳೇ? ನಾನು ಎಂದೂ ಬರೆಯಲಾರೆ, ಬರೆಯುವವರನ್ನೂ ಕಳಕೊಳ್ಳಲಾರೆ.'

'ಆದರೆ, ನೋಡು ರಾಮಣ್ಣಾ. ನನಗೆ ಈಗ ಜಡ್ಡು, ಸುತ್ತುಮುತ್ತಿನ ಜಗತ್ತಿಗೂ ಜಡ್ಡು. ಪರಿಸ್ಥಿತಿಯೆಲ್ಲಾ ಬಹಳ ವೇಗದಿಂದ ಬದಲಾಗುತ್ತಿದೆ.'

'ನಿಮ್ಮ ಜಡ್ಡು ತಿಳಿಯಿತು. ಜಗತ್ತಿಗೆ ಜಡ್ಡೆಂದರೆ ಏನು, ಮೂರ್ತಿಗಳೇ ?'

ಮೂರ್ತಿಗಳು ಒಂದು ಮಗ್ಗುಲಾಗಿ ಒಂದೆರಡು ತೊಳೆ ಮೋಸಂಬಿಯನ್ನು ಚೀಪಿ ಮರುನುಡಿದರು: 'ರಾಮಣ್ಣಾ, ಅದೊಂದು ಕತೆಯೇ ಇದೆ. ಊರು ಬಿಟ್ಟು ಬೇರೂರಿಗೆ ಹೋದರೆ ಪ್ರಾರಬ್ಧವು ತಪ್ಪೀತೇ ? ಎನ್ನುವಂತೆ ನನ್ನ ಗತಿ ಆಗಿದೆ. ಊರಿನಿಂದ ದೂರದಲ್ಲಿ ನನ್ನ ತೋಟ ಮಾಡಿಕೊಂಡು ನಾನೇ ದುಡಿದು ಇರಬೇಕೆಂದರೆ ಇನ್ನು ಸಾಧ್ಯವಿಲ್ಲ ನೋಡು. ಎಲ್ಲಾ ಕಡೆಗೆ ಕ್ರಾಂತಿಯ ಕಿಚ್ಚು ಹಬ್ಬುತ್ತಿದೆ. ನನಗೂ ಅದರ ಝಳವು ತಾಕಿತು, ಇನ್ನೂ ತಾಕಬಹುದು.'

'ಅಂದರೆ? ಈ ರಾಜಕೀಯ ಚಳವಳಿಯಲ್ಲಿ ನೀವು ಯಾವಾಗ ಸೇರಿದಿರಿ?'

'ನಾನು ಸೇರಿಲ್ಲ, ರಾಮಣ್ಣಾ, ಅದೇ ನಾನು ಹೇಳುತ್ತಿರುವದು. ಸೇರದವರೂ ಸಿಲುಕಿಬಿಡುವಂಥ ಪರಿಸ್ಥಿತಿ ಉಂಟಾಗಿದೆ. ಈ ಜ್ವರ ಬರುವದಕ್ಕೆ ಕೆಲವು ದಿನ ಮೊದಲು ನನ್ನ ಸತ್ವಪರೀಕ್ಷೆಯು ನಡೆಯಿತು. ನನ್ನ ಕಡೆ ಕ್ಷೇಮ ಸಮಾಚಾರದ ಮಾತಾಡಲಿಕ್ಕೆಂದು ಆಗಾಗ ಕೆಲವು ಮಿತ್ರರು ಬರುತ್ತಿರುವರು. ಅವರಲ್ಲಿ ಒಬ್ಬಿಬ್ಬರು ರಾಜಕಾರಣದಲ್ಲಿ ಕೈಹಾಕಿದವರು. ಈಗ ೧-೨ ವರುಷದಿಂದ ಕಾಯಿದೆಯನ್ನು ಮುರಿಯುವ ಚಳವಳಿಯು ಜೋರಾಗಿ ನಡೆದಿರುವದಷ್ಟೆ. ಅದರಲ್ಲಿಯೂ ಈಗ ಗುಪ್ತರೀತಿಯಿಂದ ಕಾಂಗ್ರೆಸ್ಸಿನ ಕಾರ್ಯಕಲಾಪಗಳು ಸಾಗಿರುವವು.'

'ಅದು ನನಗೆ ಗೊತ್ತಿದೆ. ಮುಂಬಯಿಯು ಇಂಥ ಚಟುವಟಿಕೆಗಳ ತವರುಮನೆಯೇ ಆಗಿದೆ!'

'ಸರಿ. ಈ ಗುಪ್ತಕಾರಸ್ಥಾನಗಳು ಎಲ್ಲೆಲ್ಲಿ ನಡೆದಿರಬಹುದೆಂದು ಸರಕಾರದ ಗುಪ್ತಚಾರರು ಶೋಧನ ನಡಸಿರುವಾಗ ನನ್ನ ಮೇಲೂ ಅವರ ಕಣ್ಣು ಬಿತ್ತು. 'ಊರು ಬಿಟ್ಟು ಎಲ್ಲಿಯೋ ಒಂದು ತೋಟದ ಕೊಂಪೆಯಲ್ಲಿ ಈ ಕಲಿತ ಮನುಷ್ಯನು ಇರಬೇಕಾದರೆ ಇವನು ಗುಪ್ತಸಮಿತಿಗೆ ಸಂಬಂಧ

ವ್ಯಕ್ಷವಸಿರಬೇಕು; ಮೇಲಾಗಿ ಇವನಲ್ಲಿ ಹೋಗಿಬರುವ ಸ್ನೇಹಿತರು ರಾಜ ಕೀಯ ಜನರಿರುವರು.' ಹೀಗೆ ಅವರು ಲೆಕ್ಕ ಹಾಕಿರಬೇಕು. ಒಂದು ದಿನ ಖಾದಿಯನ್ನು ತೊಟ್ಟ ಗೆಳೆಯನೊಬ್ಬನು ನನ್ನ ಕಡೆ ಬಂದು ಬಹಳ ಹೊತ್ತು ಇದ್ದು ಮಾತಾಡಿ ಹೋದನು. ಅಂದೇ ರಾತ್ರಿ ಮಲಗುವ ಹೊತ್ತಿಗೆ ಪೋಲೀಸ ಪಾರ್ಟಿಯೊಂದು ನನ್ನ ಮನೆಯ ಝಡತಿಗೆ ಬಂದಿತು. ನನ್ನ ಹೆಂಡ ತಿಯು ಬಹಳ ಗಾಬರಿಯಾಗಿಬಿಟ್ಟಳು. ನಾನು ಧೈರ್ಯದಿಂದ 'ಬೇಕಾದ್ದು ನೋಡಿಕೊಳ್ಳಿರಿ' ಎಂದೆ. ನನ್ನ ಮನೆಯಲ್ಲಿ ಗುಪ್ತಪತ್ರಿಕೆಗಳನ್ನು ಪ್ರಕಟಿಸುವ ಯಂತ್ರವಿರಬೇಕೆಂದು ಅವರ ತೀವರ್ಮಾನವಿತ್ತು. ಅದೆಲ್ಲಿಯೂ ಕಾಣಲಿಲ್ಲ. 'ಎಲ್ಲಿ ಬಚ್ಚಿಟ್ಟಿರುವಿರಿ? ಕೊಡಿರಿ' ಎಂದರು. ನನ್ನಲ್ಲಿ ಅದು ಎಂದಿಗೂ ಇಲ್ಲ ಎಂದು ಹೇಳಿದೆ. ನಿರುಪಾಯವಾಗಿ ಇದ್ದುಬಿದ್ದ ಕಾಗದಗಳನ್ನು ವಶಮಾಡಿ ಕೊಂಡು ನಡುರಾತ್ರಿಯಲ್ಲಿ ಹೊರಟುಹೋದರು. ಅವುಗಳಲ್ಲಿ ನನ್ನ ಕೆಲವು ಕವನದ ಹಾಳೆಗಳೂ ಹೋಗಿವೆ, ವಾಮಣ್ಣಾ.'

'ಹೀಗೇನು? ಎಂಥ ಅನ್ಯಾಯವಿದು!' ಎಂದು ವಾಮಣ್ಣನು ಸಂಕಟ ಪಟ್ಟನು.

'ಅದರಲ್ಲಿ ನ್ಯಾಯವೂ ಇಲ್ಲ, ಅನ್ಯಾಯವೂ ಇಲ್ಲ. ಇದಕ್ಕೂ ಹೆಚ್ಚಿನ ನರಕಹಿಂಸೆಯ ದಿನಗಳು ಬರಬಹುದು, ವಾಮಣ್ಣಾ. ನೀನದಕ್ಕೆ ಸಿದ್ಧವಾಗಿರ ಬೇಕು ನೋಡು. ಸ್ವಾತಂತ್ರ್ಯಸ್ವರ್ಗವು ಬೇಕಾದರೆ ಮೊದಲು ಈ ನರಕವನ್ನು ಭೋಗಿಸಲೇಬೇಕು.'

'ಮೂರ್ತಿಗಳೇ, ನನಗೂ ಈಗೀಗ ಇದೇ ವಿಚಾರವು ತಲೆ ತಿನ್ನುತ್ತಿರು ವದು. ಮುಂಬಯಿಯಲ್ಲಿ ಮನುಷ್ಯಯಾತನೆಯನ್ನು ನೋಡಿ ನನ್ನ ಸ್ವಂತದ ಸುಖದುಃಖವು ನನಗೆ ಸಣ್ಣ ಮಾತಾಗಿದೆ. ನಾಸಿರುವ ಗಿರಣಿಯಲ್ಲಿಯ ಕೂಲಿ ಕಾರರೆಂದರೆ ಕೂಲಿಗೆಂದೇ ಸೃಷ್ಟಿಯು ಮಾಡಿದ ಎರಡು ಕಾಲಿನ ಯಂತ್ರಗಳು ಅವರು. ನರಸನೆಂಬ ಒಬ್ಬ ಕನ್ನಡಿಗನು ಅವರಲ್ಲಿ ಇರುವನು. ಅವನ ಬಾಳಿನ ಗೋಳಾಟವನ್ನು ನೆನೆದಾಗ ನನ್ನ ಊಟದ ರುಚಿಯು ಅಡಗುತ್ತದೆ ಇಂಥ ಬಾಂಧವರನ್ನು ನೋಡುತ್ತ ನಾವು ಎಷ್ಟು ದಿನ ಸುಮ್ಮನಿರಬೇಕು?'

'ಅದಕ್ಕೇ ವಾಮಣ್ಣಾ ಚಳವಳಿಯ ಬೇಗೆ ಹೊತ್ತಿದ್ದು. ಒಮ್ಮೆ ಕಪ್ಪಿಟ್ಟ ಈ ಕಾಡನ್ನು ಅದು ಸುಟ್ಟುಬಿಡದೆ, ಒಳ್ಳೆಯ ಬೆಳೆಗೆ ಈ ದೇಶದಲ್ಲಿ ಇಂಬಿಲ್ಲ.

ನನ್ನ ನಾಡು ಮೊದಲು ತನ್ನ ಕಾಲಮೇಲೆ ತಾನು ನಿಲ್ಲಬೇಕು, ತನ್ನ ಉಸಿರನ್ನು ತಾನು ಆಡಿಸಬೇಕು.'

ಅದೇಕೊ ಮಿಂಚಿನ ಝಳುಕಿನಂತೆ ವಾಮಣ್ಣನ ಮೈಯಲ್ಲಿ ಈ ಮಾತು ಹೊಕ್ಕು ಅವನನ್ನು ಒಂದು ಕ್ಷಣ ನಡುಗಿಸಿಬಿಟ್ಟಿತು. ಇಷ್ಟು ದಿನವೂ ಬಗೆಹರಿಯಲಾರದೆ ಉಳಿದ ಯಾವುದೋ ಪ್ರಶ್ನೆಗೆ ಇಂದು ಉತ್ತರವು ಸಿಕ್ಕಂತಾಯಿತು. 'ನೀವು ಹೇಳುವದೇ ಸತ್ಯ. ನಮ್ಮ ದೇಶದ ಸ್ವಾತಂತ್ರ್ಯಕ್ಕಾಗಿ ನಾವು ಮೊದಲು ಹೆಣಗಬೇಕು. ಮುಂದೆ ಉಳಿದೆಲ್ಲವೂ...... ' ಎಂದು ಉತ್ಸಾಹದಿಂದ ಆಡಿದನು.

ಮಾತು ಅಲ್ಲಿಗೆ ನಿಂತಿತು. ಮೂರ್ತಿಗಳಿಗೆ ದಣಿವಾದಂತೆ ತೋರಿತು. ಇನ್ನು ನಿಲ್ಲುವುದು ಸರಿಯಾಗದೆಂದು ವಾಮಣ್ಣನು ಮತ್ತೆ ಬರುವೆನೆಂದು ತಿಳಿಸಿ ಮನೆಗೆ ಹೊರಟುಬಿಟ್ಟನು. ಹಾದಿಯಲ್ಲಿ ದೇಶಕಾರ್ಯ, ಆತ್ಮಾರ್ಪಣ ಮುಂತಾದ ದೊಡ್ಡ ದೊಡ್ಡ ಭಾವಗಳು ಸಮುದ್ರದ ತೆರೆಗಳಂತೆ ಏರಿ ಬಂದು ಅವನನ್ನು ಮುತ್ತಿ ಮರಳುತ್ತಿದ್ದವು. ಆದರಲ್ಲಿ ತೀರ ಮುಳುಗಿಹೋಗಬಾರದೆಂದು ಸುಮ್ಮನೆ ಅವನು ಸುತ್ತುಮುತ್ತಿನ ಸೃಷ್ಟಿಯನ್ನು ನೋಡುತ್ತ ಮನೆ ಸೇರಿದನು.

ಎಂಟು-ಹತ್ತು ದಿನ ದಾಟಿದವು. ಸುಮಾರು ಪ್ರತಿದಿನವೂ ವಾಮಣ್ಣನು ಮೂರ್ತಿಗಳ ಆರೋಗ್ಯವು ಸರಿಗೊಳ್ಳುತ್ತಿರುವುದೇ ಹೇಗೆಂಬುದನ್ನು ನೋಡಿ ಬರುತ್ತಿದ್ದನು. ಮನೆಯಲ್ಲಿ ಇರುವಾಗ ಹೊಸದಾಗಿ ಹೊರಟ ಕನ್ನಡ ಪುಸ್ತಕಗಳನ್ನೆಲ್ಲ ಓದುತ್ತಿದ್ದನು. ಭೀಮರಾಯರು ತಮ್ಮ ಕೆಲಸದಲ್ಲಿ ಯಾವಾಗಲೂ ತೊಡಗಿರುತ್ತಿದ್ದರು. ಆದರೂ ಒಮ್ಮೆ ಮಾತು ತೆಗೆದು ಅವನ ಗಿರಣಿಯ ಕೆಲಸದ ವಿವರಗಳನ್ನು ಕೇಳಿಕೊಂಡರು. ಅಲ್ಲಿ ಅವನು ಇರುವುದು ತಮಗೆ ಸರಿಬಂದಿಲ್ಲವೆಂಬೂ ಸೂಚ್ಯವಾಗಿ ತಿಳಿಸಿದರು. ತಮ್ಮ ಮಾತು ಮೀರಿ ಅವನು ಸ್ವತಂತ್ರವಾಗಿ ನಡೆಯುವನೆಂದೂ ಅದು ಒಳಿತಲ್ಲವೆಂದೂ ಅವರ ಅಭಿಪ್ರಾಯವಿದ್ದಂತೆ ತೋರಿತು. ಮದುವೆಯ ಮುಂದೆ, ಹಾಗೂ ಆಮೇಲೆ, ಅವರು ತನ್ನ ವಿಷಯದಲ್ಲಿ ತೋರಿದ ಆತ್ಮೀಯ ಭಾವಕ್ಕೂ ಈಗಿನ ಮನೋವೃತ್ತಿಗೂ ಎಲ್ಲಿಯೋ ಭೇದವಿರುವುದೆಂಬುದು ವಾಮಣ್ಣನಿಗೆ ತಿಳಿಯತೊಡಗಿತು. ಆದರೂ ಅವರೊಡನೆ ಈಗ ಬಿರುಸಾಡಿ ಪ್ರಯೋಜನವಿಲ್ಲವೆಂದು

ಅವನು ಸುಮ್ಮನಿದ್ದನು. ಅವನ ರಜೆಯು ತೀರಬಂತು. ಇನ್ನು ಹೊರಡಬೇಕೆಂದು ಮನೆಯಲ್ಲಿ ತಿಳಿಸಿದನು. ಆದರೆ ಪದ್ಮಕ್ಕನನ್ನು ಈಗ ಕಳಿಸುವುದು ಸಾಧ್ಯವಿಲ್ಲ ಎಂದು ಉತ್ತರ ಬಂದಿತು. ಪದ್ಮಕ್ಕ ಚೊಚ್ಚಲ ಬಸುರಿಯಾದ್ದರಿಂದ ಅವಳಿಗೆ ತವರುಮನೆಯಲ್ಲಿಯೂ ಆಪ್ತೇಷ್ಟರಲ್ಲಿಯೂ ನೂರಾರು ಕುಬಸದ ಊಟಗಳಾಗಬೇಕು. ಆದರಲ್ಲಿ ಹುದ್ದೆದಾರರ ಮಗಳೆಂದಮೇಲೆ ಇನ್ನೂ ಹೆಚ್ಚಾಗಬೇಕು; ಅಕ್ಕರೆಯಿರಲಿ ಬಿಡಲಿ, ಲೌಕಿಕಕ್ಕಾಗಿ ಆದರೂ ಆಗಬೇಕು. ಆದರಿಂದ ಅವಳನ್ನು ಈಗ ಬಿಟ್ಟು ತಾನೊಬ್ಬನೇ ಮುಂಬಯಿಗೆ ಹೊರಡಬೇಕೆಂದು ರಾಮಣ್ಣನು ಗೊತ್ತುಮಾಡದೆ ಗತಿಯಿರಲಿಲ್ಲ. ಆ ಪ್ರಕಾರ ಅವನು ತಿರುಗಿ ಮುಂಬೈ ಸೇರಿ ತನ್ನ ಕೆಲಸದ ಭರದಲ್ಲಿ ತೊಡಗಿದನು. ಗಿರಣಿಯಲ್ಲಿ ಕೆಲಸ ಖಾನಾವಳಿಯಲ್ಲಿ ಊಟ ಇವೆರಡೂ ಅರುಚಿಯಾದವು. ಮನೆಯ ಸೊಗಸು ಪದ್ಮಕ್ಕನ ಕೂಡ ಧಾರವಾಡ ಸೇರಿತ್ತು. ಆದರೆ ಎಲ್ಲಕ್ಕಿಂತ ಮುಂಬಯಿಯ ರಾಜಕೀಯ ವಾತಾವರಣವು ರಾಮಣ್ಣನ ತಳಮಳವನ್ನು ಹೆಚ್ಚಿಸುತ್ತ ಹೊರಟಿತು. ಎಲ್ಲ ಕಡೆಗೆ ಲಾಠೀ ಹೊಡೆತ, ಕಾರ್ಯಕರ್ತರ ಬಂಧನ, ಮನೆಗಳ ಝಡತಿ, ಗಾಳಿಯ ತೆರೆತೆರೆಯಲ್ಲಿ ಗಾಂಧಿಯ ಜಯಜಯಕಾರ. ಕನ್ನಡದ ದುರ್ದೆಸೆಯೊಂದನ್ನು ನೆನೆದು ಕೈಲಾಗದೆ ಒಳಲುತ್ತಿರುವ ಜಡಜೀವಿಗೆ ಈ ಭಾರತದ ಹಾಹಾಕಾರವು ಇನ್ನಷ್ಟು ಭಯಂಕರವಾಗಿ ತೋರಿತು. ಆದರೂ ಹೆಜ್ಜೆಹೆಜ್ಜೆಗೆ ತನ್ನ ಸಂಸಾರದ ಹೊಣೆಯನ್ನು ಲಕ್ಷ್ಯಕ್ಕೆ ತಂದು ಓಡುತ್ತಿರುವ ಭಾವನೆಯನ್ನು ರಾಮಣ್ಣನು ಕಟ್ಟಿಹಾಕುತ್ತಿದ್ದನು. ಒಮ್ಮೆ ರಾಮಣ್ಣನು ತನ್ನ ಪದ್ಧತಿಯ ಪ್ರಕಾರ ಸತ್ಯಕಾಮರನ್ನು ಕಾಣಹೋದನು. ಆದರೆ ಅವರು ಆ ಸ್ಥಳವನ್ನು ಬಿಟ್ಟು ಬೇರೆಡೆಗೆ ಬದಲಿಸಿದ್ದರು. ಇತ್ತೀಚೆ ಮೂರುನಾಲ್ಕು ತಿಂಗಳಿಗೊಮ್ಮೆ ಹೀಗೆ ಮಾಡುವುದೇ ಅವರ ಪರಿಪಾಠವಾಗಿತ್ತು. ರಾಮಣ್ಣನಿಗೆ ಇದು ಗೊತ್ತಿದ್ದ ಕಾರಣ ಅವನಿಗೆ ಆಶ್ಚರ್ಯವೇನೂ ಆಗಲಿಲ್ಲ. ನೆರೆಮನೆಯವರಿಂದ ಹೊಸ ಮನೆಯ ಗುರುತುಗೆರೆಯನ್ನು ಕೇಳಿಕೊಂಡು ಅವರಿದ್ದಲ್ಲಿಗೆ ಹೋದನು. ಆಗ ಸಂಜೆಯ ಇಳಿಹೊತ್ತು. ಸತ್ಯಕಾಮರು ಮನೆಯ ಮುಂಬದಿಯಲ್ಲಿ ಇದ್ದರು. ಪಶ್ಚಿಮದ ಮುಗಿಲು ನೋಡುತ್ತ ಚಾಪೆಯ ಮೇಲೆ ಅವರು ಸ್ತಬ್ಧರಾಗಿಯೆ ಕುಳಿತಿದ್ದರು. ರಾಮಣ್ಣನು ನಮ್ರನಾಗಿ ಹತ್ತಿರ ಹೋಗಿ ಕುಳಿತನು. ಮೊದಲು ಅವರು ಮಾತಾಡಲೇ ಇಲ್ಲ. 'ಹೊಸ

ಮನೆಗೆ ಯಾವಾಗ ಬಂದಿರಿ! ' ಎಂದು ರಾಮಣ್ಣನೆ ಕೇಳಿದಾಗ ಗುಹಾಧ್ವನಿಯಂತೆ ಉತ್ತರವು ಬಂದಿತು. ಮುಂದೆ ಮೆಲ್ಲಗಿನ ದನಿಯಲ್ಲಿ ಒಂದೊಂದು ನುಡಿಯನ್ನು ಆಡತೊಡಗಿದರು. ಅದರಲ್ಲಿ ಅವರು ಅತ್ಯಂತ ತ್ರಸ್ತರಾಗಿದ್ದು ಹೊರಗೆ ತೋರಗೊಡದಂತೆ ಇರುವರೆಂದು ರಾಮಣ್ಣನಿಗೆ ತೋಚಿತು. ಏನಾದರೂ ಮಾತು ಮುಂದರಿಸಬೇಕೆಂದು ಕೇಳಿದನು: ' ಈ ಮನೆ ಮೊದಲಿನ ಮನೆಗಿಂತ ಹೆಚ್ಚು ಅನುಕೂಲವಾಗಿ ಕಂಡಿತೇನು ? ಯಾಕೆ ಅದನ್ನು ಬಿಟ್ಟಿರಿ ? '

' ಅನುಕೂಲವೋ ಪ್ರತಿಕೂಲವೋ ಕಾಣೆ. ಇನ್ನು ಮೇಲೆ ಈ ಮನೆಯನ್ನೂ ಬಿಡುತ್ತೇನೆ, ಪ್ರಿಯ ಮನೆಯನ್ನೂ ಬಿಟ್ಟು ಹೊರಡುತ್ತೇನೆ ' ಎಂಬ ಉತ್ತರ ಬಂದಿತು. ಇದನ್ನು ಕೇಳಿ ರಾಮಣ್ಣನಿಗೆ ನೋವಾಯಿತು. ಆದರೆ ಈ ಮಾತಿನ ಹಿನ್ನೆಲೆಯಾದ ಭಾವವು ಅವನಿಗೆ ಹೊಳೆಯಲಿಲ್ಲ. ಅವರಿಗೆ ಅನಾರೋಗ್ಯವು ಹೆಚ್ಚುತ್ತಿರುವುದೆಂದು ಹಾಗೆ ಆಡಿದರೇನೊ ಎಂದು ಅವನು ತನ್ನಲ್ಲಿ ಕಲ್ಪಿಸಿದನು.

' ಈಗ ನಿಮ್ಮ ಪ್ರಕೃತಿ ನೆಟ್ಟಗಿಲ್ಲವೇ ? '

' ನೆಟ್ಟಗಿದೆ, ರಾಮಣ್ಣ. ನನ್ನೊಬ್ಬನ ಪ್ರಕೃತಿ ನೆಟ್ಟಗಿದ್ದು ಏನು ಪ್ರಯೋಜನ? ಈ ಲೋಕವನ್ನಾಳುವ ಮಾಮಾಯೆಯ ಪ್ರಕೃತಿ ನೆಟ್ಟಗಾಗಬೇಕು, ಅವಳಿಗೂ ಪುರುಷನಿಗೂ ಹೊಂದಿಕೆಯಾಗಬೇಕು. ಅದು ಸಾಧ್ಯವಿಲ್ಲ. . . . ' ಸತ್ಯಕಾಮರು ಸ್ವಲ್ಪ ತಡೆದು ತಮ್ಮೊಳಗೆ ಯೋಚಿಸಿಕೊಂಡು ಮುಂದಾಡಿದರು: ' ಅವಳಿಂದ ಪತ್ರ ಬರುತ್ತಿರುವವು, ರಾಮಣ್ಣ. ಇಲ್ಲಿಗೆ ಬರಬೇಕೆನ್ನುವಳಂತೆ. ನಾನು ಹೇಗಿದ್ದರೂ ನನ್ನ ಸಹವಾಸದಲ್ಲಿ ಇರುವಳಂತೆ. ಇದಕ್ಕೆ ಒಪ್ಪಿಗೆ ಕೊಡುವದು ಸಾಧ್ಯವೇ ? '

ಈಗ ರಾಮಣ್ಣನಿಗೆ ಸತ್ಯಕಾಮರ ಸಂತಾಪದ ಸುಳಿವು ಹತ್ತಿತು. ಅವರ ಹೆಂಡತಿಯಾದ ಕಮಲಕಿಶೋರಿಯು ಮುಂಬಯಿಗೆ ಬರುವೆನೆಂದು ಆಗಾಗ ತಿಳಿಸುತ್ತಿರುವುದರಿಂದ ಅವರ ಜೀವವು ತುಂಬಾ ಅಶಾಂತವಾಗಿದೆಯೆಂದು ಅವನು ಕಂಡುಕೊಂಡನು. ಆದರೆ ಅವನೇನು ಹೇಳಬಲ್ಲ? ಅದಗೂ ಒಪ್ಪಿಗೆ ಕೊಡಿರಿ ಎಂದು ಧೈರ್ಯವಾಗಿ ಹೇಳಬೇಕೆಂದು ಅವನ ನಾಲಿಗೆ ತುದಿಗೆ ಬಂದಿತು, ಆದರೆ ಹಾಗೆ ಹೇಳುವುದಾಗಲಿಲ್ಲ, ಸುಮ್ಮನೆ ಕುಳಿತು ಕೊಂಡನು.

ಸತ್ಯಕಾಮರು ಮುಂದೆ ನುಡಿದರು: 'ಸಾಧ್ಯವಿಲ್ಲ, ಎಷ್ಟು ಸಾಧ್ಯವಿಲ್ಲ. ಅವಳ ಕೂಡ ನಾನು ಒಂದು ಕ್ಷಣವೂ ಇರಲಾರೆ.' ಅವರ ಮುಖವು ಕೆಂಪೇರಿತು. ಕಣ್ಣನ್ನೇ ಮುಚ್ಚಿಕೊಂಡರು. ಇನ್ನು ಇಲ್ಲಿರುವುದು ಒಳಿತಲ್ಲ ವೆಂದು ರಾಮಣ್ಣನು ಚಟ್ಟನೆ ಎದ್ದು ಅವರ ಅನುಮತಿ ಪಡೆದು ಹೊರಟನು. ಸೂಕ್ಷ್ಮವೇನು ಸ್ಥೂಲವೇನು, ಎಲ್ಲಾ ಬಗೆಯ ಜೀವಗಳಲ್ಲಿ ಹುಟ್ಟುತ್ತಿರುವ ಅಶಾಂತಿ-ಅಸುಖಗಳ ಆಳವನ್ನು ನೆನೆದು ತನ್ನೊಳಗೆ ಮರುಗುತ್ತ ಮನೆ ಸೇರಿದನು.

ಕೆಲವು ತಿಂಗಳಾಗಲು ರಾಮಣ್ಣನಿಗೆ ಮಾವಂದಿರಿಂದ ಪತ್ರ ಬಂದಿತು. ಸೀಮಂತದ ಮುಹೂರ್ತವನ್ನು ಗೊತ್ತುಮಾಡಿ ೧೫ ದಿನವಾದರೂ ಬಂದು ಹೋಗಬೇಕೆಂದು ಅವರು ಆಗ್ರಹದಿಂದ ಕರೆದಿದ್ದರು. ರಾಮಣ್ಣನು ಅದ ಕ್ಕೊಪ್ಪಿ ರಜೆ ಹೊಂದಿ ಹೋದನು. ಸಂಪ್ರದಾಯದ ಕಾರ್ಯವನ್ನು ತೀರಿಸಿ ಕೊಂಡು ಮರುದಿನವೇ ಪದ್ಮಕ್ಕನನ್ನೂ ಜೋಡಿಗೆಂದು ಸುಗುಣಾಬಾಯ ರನ್ನೂ ಕರೆದುಕೊಂಡು ಮುಂಬಯಿಗೆ ತೆರಳಿದನು. ಅವನಿಗೆ ಊಟದ ಅನಾನುಕೂಲವಾಗುವುದೆಂದು ಅರಿತದ್ದರಿಂದ ಮನೆಯಲ್ಲಿ ಯಾರೂ ಬಹಳ ವಾಗಿ ಅವನಿಗೆ ಅಡ್ಡಿಮಾಡಲಿಲ್ಲ. ಒಂದು ತಿಂಗಳು ಪದ್ಮಕ್ಕ ಹೋಗಿ ಬರಲಿ ಎಂದು ಭೀಮರಾಯರು ಅಂದರು. ಬಾಣಂತನಕ್ಕೆ ತಿರುಗಿ ಧಾರವಾಡಕ್ಕೆ ಬರಬೇಕೆಂದು ಎಲ್ಲರ ಅಭಿಪ್ರಾಯವಿತ್ತು. ಆದರೆ ಅಲ್ಲಿಯೇ ಆದರೆ ತಪ್ಪೇನು ಎಂದು ರಾಮಣ್ಣನು ಸೂಚನೆಯಿಂದ ಹೇಳಿದ್ದನು. ಅವನು ಹೇಳಿದಂತೆ ಆಯಿತು. ಎಂಟು ತಿಂಗಳು ತುಂಬಲಾಗಿ ಇನ್ನು ಕಳಿಸಿಕೊಡಬೇಕೆಂದು ಭೀಮರಾಯರು ಕಾಗದ ಬರೆದರು. ಆದರೆ ಅವಳನ್ನು ಅಗಲಿ ಯಾವಾಗಲೂ ಚಿಂತಿಸುತ್ತ ಇರುವುದಕ್ಕೆ ರಾಮಣ್ಣನಿಗೆ ಮನಸ್ಸಿಲ್ಲ. ಮತ್ತೆ ಕಾಗದ ಬಂದಿತು, ಇಷ್ಟರಲ್ಲಿ ಅರ್ಧತಿಂಗಳು ಸಂದುಹೋಯಿತು ಇನ್ನು ದೊಡ್ಡ ಪ್ರವಾಸವು ಕ್ಷೇಮವಲ್ಲವೆಂದು ಸುಗುಣಾಬಾಯಿಯರೂ ಅನ್ನತೊಡಗಿದರು. 'ಮುಂಬಯಿಯಲ್ಲಿ ಹೆರಿಗೆಯ ಆಸ್ಪತ್ರಿಯ ಸೌಕರ್ಯವು ಬೇಕಾದಷ್ಟು ಇರುವದರಿಂದ ಇಲ್ಲಿಯೇ ಎಲ್ಲ ವ್ಯವಸ್ಥೆ ಮಾಡುವೆನು, ಚಿಂತೆಯೇನೂ ಕಳಿಸುವ ದಿಲ್ಲ' ಎಂದು ಅತ್ತೆ-ಮಾವಂದಿರಿಗೆ ಅತಿಶಯವಾದ ಅಸಮಾಧಾನವಾಗು ವಂತೆ ಪ್ರತ್ಯುತ್ತರವನ್ನು ಬರೆದನು. ಭೀಮರಾಯರು ಬಹಳ ಸಿಟ್ಟಿಗೆದ್ದು

'ನಿನಗೆ ತಿಳುವಳಿಕೆಯಿಲ್ಲ, ರೀತಿ ನಡತೆ ಗೊತ್ತಿಲ್ಲ. ಹಿರಿಯರ ಮಾತು ಕೇಳದೆ ಮನಸ್ಸಿಗೆ ಬಂದಂತೆ ಮಾಡುವಿ' ಎಂದು ಹುಚ್ಚಾಪಟ್ಟೆಯಾಗಿ ಕಾಗದ ಬರೆದರು. ಅವರಿಬ್ಬರ ನಡುವೆ ಒಂದು ಕೊರಕಲು ಉಂಟಾಗಹತ್ತಿತು. ಆದರೂ ತನ್ನ ಅಡಚಣೆಗಳನ್ನು ತಿಳಿಸಿ ವಾಮಣ್ಣನು ಒಂದು ವಿನಯಪೂರ್ವಕವಾದ ಉತ್ತರವನ್ನು ಬರೆದನು. ಅದರ ಪರಿಣಾಮವೇನಾಯಿತೊ ಏನೋ, ಇಷ್ಟರಲ್ಲಿ ಪದ್ದಕ್ಕ, ಒಂದು ಬೆಳಿಗ್ಗೆ ಆಸ್ಪತ್ರಿಯಲ್ಲಿ ಗಂಡುಮಗುವನ್ನು ಹಡೆದಳು. ಯಾವ ತೊಂದರೆಯೂ ಆಗಲಿಲ್ಲ. ವಾಮಣ್ಣನು ತಾರಿನಿಂದ ಧಾರವಾಡಕ್ಕೆ ತಿಳಿಸಿದನು. ಹನ್ನೊಂದನೆಯ ದಿನ ಬಾಣಂತಿಯು ಕೂಸಿನೊಡನೆ ಮನೆಗೆ ಬಂದಳು. ತಮ್ಮ ಸಿಟ್ಟನ್ನೆಲ್ಲ ನುಂಗಿಕೊಂಡು ಭೀಮರಾಯರು ಪತ್ನಿಯ ಸಂಗಡ ನಾಮಕರಣಕ್ಕೆ ಬಂದು ಹೋದರು. ಗೋಪಾಲ ಎಂದು ಹೆಸರಿಡುವುದಾಯಿತು. ಎಲ್ಲರ ಮುಖದಲ್ಲಿ ಸಂತೋಷವು ನಾಟ್ಯವಾಡಿತು. ಮನೆಗೆ ಬಂದ ಮೇಲೆ ಎರಡು ಮೂರು ತಿಂಗಳ ಬಾಣಂತನವನ್ನು ಸುಗುಣಾಬಾಯಿಯರು ತಾಯಿಗಿಂತ ಹೆಚ್ಚಾಗಿ ಮಾಡಿದರು. ಪ್ರತಿದಿನವು ಮೈತುಂಬಿಕೊಂಡು ಬೆಳೆಯುತ್ತಿರುವ ಗೋಪಾಲನು ವಾಮಣ್ಣನ ಜೀವನದಲ್ಲಿ ಹೊಸ ಆನಂದದ ಝರಿಯನ್ನು ಹರಿಸಿದನು. ಪದ್ದಕ್ಕನಂತೂ ಹೊಸ ಸೃಷ್ಟಿಯನ್ನು ಮಾಡಿದ ಲೋಕಮಾತೆಯು ಹೆಮ್ಮೆಯಿಂದ ನಲಿದಾಡಿದಳು. ಆದರೆ ಕಾಲವು ಬರಬರುತ್ತ ವಿಷಮಯವಾಗುತ್ತ ನಡೆದಿತ್ತು. ವಾಮಣ್ಣನ ಮನೆಯೊಳಗೆ ಹಿಗ್ಗಿನ ಮೂರ್ತಿಯೊಂದು ಬೆಳೆಯುತ್ತಿದ್ದರೆ ಮನೆಯ ಹೊರಗೆ ಹಿಂಸೆಯ ಸತ್ರುವು ಹೆಚ್ಚುತ್ತ ಸಾಗಿತ್ತು. ಆಸ್ಪತ್ರಿಗಳೆಲ್ಲ ಏಟು ತಿಂದ ಚಳವಳಿಗಾರರಿಂದಲೂ ಅವರ ಹತ್ತುಗಡೆಯ ಜನರಿಂದಲೂ ತುಂಬಿಹೋಗಿದ್ದವು. ನೆಲಕ್ಕೆ ನೆತ್ತರಿನ ಹಸಿವು ಉಂಟಾಗಿರುವದೆಂದು ತೋರುವಂತಿತ್ತು. ಇಂಥ ಕಾಲಕ್ಕೆ ತಾನು ಸೊಟ್ಟ ಒಂದು ಗಿರಣಿಯ ಕೆಲಸವನ್ನು ಮಾಡುತ್ತ ಮಡದಿಮಕ್ಕಳ ಒಡನಾಟದಲ್ಲಿ ಕಾಲ ಕಳೆಯುವುದೆಂದರೆ ವಾಮಣ್ಣನಿಗೆ ಹೇಸಿಕೆಯಾಯಿತು. ಅದನ್ನು ತನ್ನ ಆತ್ಮದ ಹೊರತು ಯಾರ ಮುಂದೆಯೂ ಆಡುತ್ತಿರಲಿಲ್ಲ. ಒಮ್ಮೊಮ್ಮೆ ಪದ್ದಕ್ಕನ ಹೊರಸಿನ ಮೇಲೆ ಕುಳಿತು ಅವಳ ಮುಂದೆಯೂ ಸುಗುಣಾಬಾಯಿಯ ಮುಂದೆಯೂ ಅಂದಂದಿನ ಘೋರ ಕಥೆಯನ್ನು ಬಣ್ಣಿಸಿ ಹೇಳುತ್ತಿದ್ದನು. ಅದನ್ನು ಕೇಳಿ ಅವರಿಗೆ ದೇಶಸ್ಥಿತಿಯ ಬಗ್ಗೆ ಹೆಚ್ಚಾಗಿ

ಆಸಿಸುತ್ತಿರಲಿಲ್ಲ, ಆದರೆ ಮಾಮಣ್ಣನ ಕೆಲಸಕ್ಕೆ ಎಲ್ಲಿ ಅಪಾಯವು ತಟ್ಟುವುದೋ ಎಂದು ಎಣಿಕೆ ಹಾಕುತ್ತಿದ್ದರು.

ಒಂದು ದಿವಸ ಸಂಜೆಯಲ್ಲಿ ಗಿರಣಿಯ ಕೆಲಸವನ್ನು ಮುಗಿಸಿ ಮಾಮಣ್ಣನು ನಡೆದಿದ್ದನು. ಸುತ್ತೆಲ್ಲ ಕೂಲಿಕಾರರ ದಂಡು ಸಾಗಿತ್ತು. ಇದಿರಿಗೆ ರಾಷ್ಟ್ರೀಯ ನಿಶಾನೆಗಳನ್ನು ಎತ್ತಿ ಹಿಡಿದ ಸ್ವಯಂಸೇವಕರ ಪಥಕವೊಂದು ಜಯಜಯಕಾರ ಮಾಡುತ್ತ ಬಂದಿತು. ಇನ್ನೊಂದು ದಿಕ್ಕಿನಿಂದ ಪೋಲೀಸ ದಳವು ಲಾಠೀ ಸಹಿತವಾಗಿ ಧಾವಿಸಿ ಒಂದು ಪಥಕವನ್ನು ಅಡ್ಡಕಟ್ಟಿ ನಿಂತಿತು. 'ಮುಂದೆ ಹೋಗಕೂಡದು' ಎಂಬ ಕಟ್ಟಪ್ಪಣೆಯಾಯಿತು. 'ಹೋಗೇ ತೀರುವೆವು' ಎಂದು ಪಥಕದವರು ಒಕ್ಕೊರಲಿನಿಂದ ಕೂಗಿದರು. ಆಯಿತು, ಸ್ವಲ್ಪ ಹೊತ್ತಿನಲ್ಲಿ ದೊಣ್ಣೆಯ ಪ್ರಹಾರವು ಸುರುವಾಯಿತು. ಆ ಗದ್ದಲದಲ್ಲಿ ಒಬ್ಬಿಬ್ಬ ಕೂಲಿಯವರಿಗೂ ಪೆಟ್ಟು ಬಿದ್ದವು. ಅದರಿಂದ ಎಲ್ಲ ಕೂಲಿಕಾರರೂ ಕೆರಳಿ ಜಯಜಯಕಾರ ಮಾಡುತ್ತ ಪಥಕವನ್ನು ಸೇರಿ ಅದನ್ನು ಸೈನ್ಯದ ಸ್ವರೂಪಕ್ಕೆ ತಂದರು. ಪೋಲೀಸರು ಕೂಡಲೆ ಸೀಟೀ ಹೊಡೆದು ಹೊಸ ಪಾರ್ಟಿಯನ್ನು ತರಿಸಿಕೊಂಡರು. ಜನಜಂಗುಳಿಯು ಚೆದರಲೇ ಇಲ್ಲ. ಅತ್ಯಂತ ಕ್ರೂರವಾದ ರೀತಿಯಲ್ಲಿ ಲಾಠೀ ಪ್ರಹಾರವು ನಡೆಯಿತು. ಗೋಳೀ ಬಾರು ಕೂಡ ಆಯಿತು. ಇದನ್ನೆಲ್ಲ ಮೊದಲು ಬರೀ ನೋಡುತ್ತ ನಿಂತ ಮಾಮಣ್ಣನಿಗೆ ಮುಂದೆ ತಡೆಯುವುದಾಗಲಿಲ್ಲ. ತೀರ ಅನ್ಯಾಯದಿಂದ ಪೋಲೀಸರು ಹೊಡೆಯುತ್ತಿರುವ ಒಬ್ಬ ಮುದುಕನನ್ನು ಬಿಡಿಸಲಿಕ್ಕೆಂದು ಮುಂದರಿದನು, ಅವನ ಬೆನ್ನಿಗೂ ಹೊಡೆತಬಿದ್ದಿತು. ಆಗ ಅವನ ಆವೇಶ ಉಕ್ಕೇರಿತು. ಮೊದಲು ತುದಿತುದಿಗೆ ಓಡಾಡುತ್ತಿದ್ದವನು ಈಗ ಹಿಂಡಿನ ನಡುಭಾಗದಲ್ಲಿಯೇ ಹೊಕ್ಕುಬಿಟ್ಟನು. ಇಷ್ಟರಲ್ಲಿ ಗುಂಡಿನ ಬಿಡುಗಡೆಯಿಂದ ಹಿಂಡು ಕರಗ ಹತ್ತಿತ್ತು. ಪೋಲೀಸರು ತಮಗೆ ಅಪರಾಧಿಗಳೆಂದು ತೋರಿದವರನ್ನು ಸೆರೆಹಿಡಿಯುತ್ತಿದ್ದರು, ಅದರಲ್ಲಿ ಮಾಮಣ್ಣನೂ ಸಿಕ್ಕನು. ಮನೆಮಾರು ಎಲ್ಲವನ್ನೂ ಅಲಕ್ಷಿಸಿ ಉತ್ಸಾಹದಿಂದ ಅವರ ಕೈವಶವಾದನು. ಅವರು ಕರೆದೊಯ್ದ ಲಾಕಪ್ಪಿಗೆ ಹೊರಟುಹೋದನು. ಇತ್ತ ರಾತ್ರಿಯೆಲ್ಲಾ ಅವನ ಹಾದೀ ನೋಡಿ ಪದ್ಮಕ್ಕ-ಸುಗುಣಾಬಾಯರು ಚಿಂತೆಯಿಂದ ಬೆಂದುಹೋದರು. ಮರುದಿನ ಬೆಳಿಗ್ಗೆ ಅವನನ್ನು ಸೆರೆ ಹಿಡಿದಿರುವರೆಂದು ವೃತ್ತಪತ್ರದಲ್ಲಿ ಬಂದ

ಸಮಾಚಾರವನ್ನು ನೆರೆಯ ಮನೆಯವರು ಹೇಳಿದರು. ಇದನ್ನು ಕೇಳಿ ಇಬ್ಬರೂ ಗೋಳಿಟ್ಟು ಅತ್ತರು. ಭೀಮರಾಯರಿಗೆ ತಾರು ಕೊಡಿಸಿದರು. ಅವರು ಗಾಬರಿಗೊಂಡು ಮುಂಬಯಿಗೆ ಬರುವಷ್ಟರಲ್ಲಿ ವಾಮಣ್ಣನಿಗೆ ಆರು ತಿಂಗಳ ಸಾದಾ ಶಿಕ್ಷೆ ಆಗಿಬಿಟ್ಟಿತ್ತು. ಅವನನ್ನು ಮುಖ್ಯ ಜೇಲಿಗೆ ರವಾನಿಸಿದ್ದರು. ಈಗ ಅವನ ದೆಸೆಯಿಂದ ಹೆಚ್ಚು ಪ್ರಯತ್ನಮಾಡುವುದು ಅವರಿಗೆ ಸಾಧ್ಯವೇ ಇರಲಿಲ್ಲ. ನಾಲ್ಕೈದು ದಿವಸ ಅಲ್ಲಿಯೇ ಇದ್ದು ಜೇಲಿನ ಅಧಿಕಾರಿಗಳ ಪರವಾನಿಗೆಯಿಂದ ತಾವೇ ಒಮ್ಮೆ ಅವನನ್ನು ಕಂಡರು. ಅವನ ಹುಚ್ಚುತನಕ್ಕೆ ಸಿಟ್ಟು ಬೆಂಕಿಯಾಗಿ ಒದರಾಡಿಬಿಟ್ಟರು. ವಾಮಣ್ಣನು ಅದು ಯಾವುದಕ್ಕೂ ಉತ್ತರಕೊಡಲಿಲ್ಲ. 'ನಿಮಗೆ ಸರಿತೋರಿದರೆ ಆಕೆಯನ್ನೂ ಕೂಸನ್ನೂ ಊರಿಗೆ ಕರಕೊಂಡು ಹೋಗಿರಿ, ಅವರು ನೆಟ್ಟಗಿದ್ದದ್ದು ನನಗೆ ತಿಳಿಸುತ್ತ ಇರ್ರಿ' ಎಂದಿಷ್ಟು ಹೇಳಿ ಸುಮ್ಮಗಾದನು. ಭೀಮರಾಯರು ಜೇಲಿನಿಂದ ತಿರುಗಿ ಬಂದವರೆ ಸಾಮಾನು ಸಟ್ಟರುಗಳನ್ನು ಕಟ್ಟಿ ಎಲ್ಲ ಪರಿವಾರದೊಡನೆ ಧಾರವಾಡಕ್ಕೆ ಹೊರಟರು. ಪದ್ದಕ್ಕನು ಮೊದಲು ಹೊರಡಲಿಕ್ಕೆ ಸಿದ್ಧವಾಗಲಿಲ್ಲ, ಆದರೆ ಅಪರಿಹಾರ್ಯವಾದ ಪರಿಸ್ಥಿತಿಗೆ ಅವಳು ಸೋಲಬೇಕಾಯಿತು. ತಾನಿಗೊಮ್ಮೆ ಕಣ್ಣೀರುಹಾಕುತ್ತ ವಾಮಣ್ಣನನ್ನೇ ನೆನಸುತ್ತ ಊರು ಕಂಡಳು. ಸುಗುಣಾಬಾಯಿಯರ ಸಮಾಧಾನದ ಸಂಜೀವಿನಿಯಿರದಿದ್ದರೆ ಅವಳ ಗತಿಯೇನಾಗುತ್ತಿತ್ತೋ ಏನೋ! ವಾಮಣ್ಣನಿಗೂ ಆರು ತಿಂಗಳು ಹೇಗೂ ಭಾರಭಾರವಾಗಿ ಕಳೆದವು. ಪದ್ದಕ್ಕ ಬಹಳ ಸೊರಗಿ ಕಡ್ಡಿಯಾಗಿರುವಳೆಂದೂ ಅವಳ ಎದೆ ಹಾಲಿಲ್ಲದೆ ಗೋಪಾಲನು ನಳಿನಳಿಯಾಗಿರುವನೆಂದೂ ಆಗಾಗ ಕಾಗದವು ಬರುತ್ತಿತ್ತು. ಅದನ್ನೋದಿ ಅತಿಚಿಂತೆಯಿಂದ ಬೇಯುತ್ತಿದ್ದನು. 'ನನ್ನಂಥವರು ದೇಶಕಾರ್ಯಕ್ಕೆ ತೀರ ಅಯೋಗ್ಯರು!' ಎಂದುಕೊಂಡು ಮತ್ತಿಷ್ಟು ಮರುಗುತ್ತಿದ್ದನು.

ಸೆರೆಮನೆಯ ವಾಸವು ಮುಗಿಯಿತು. ಗಿರಣಿಯ ಕೆಲಸವೂ ಕೈ-ಬಿಟ್ಟಿತು. ಗಿರಣಿಯ ಮಾಲಕರಿಗೆ ಹೆಚ್ಚು ಬೇಡಿಕೊಳ್ಳುವುದೇ ವಾಮಣ್ಣನಿಗೆ ಬೇಡವಾಯ್ತು. ಒಮ್ಮೆ ಸತ್ಯಕಾಮರನ್ನೂ ಇನ್ನೊಮ್ಮೆ ನರಸನನ್ನೂ ಕಂಡು ಮಾತಾಡಿಸಿ ಬಂದನು. 'ಇನ್ನು ನನ್ನ ಕನ್ನಡನಾಡೇ ನನಗೆ ಗತಿ!' ಎಂದು ಮುಂಬಯಿಗೆ ಕೊನೆಯ ಶರಣು ಹೊಡೆದು ಧಾರವಾಡದ ಗಾಡಿಯನ್ನು ಹತ್ತಿದನು.

---

## ಪ್ರಕರಣ ೯.

ಕೆಟ್ಟ ಬೇಸಗೆಯ ನಡುಗಾಲದಲ್ಲಿ ವಾಮಣ್ಣನು ಧಾರವಾಡಕ್ಕೆ ಮರಳಿದನು. ಧಾರವಾಡದಂಥ ತಂಪು ಊರಲ್ಲಿಯೂ ಬೇಸಗೆಯು ತನ್ನ ಆಳಿಕೆಯ ಚಳಿಕೊಡೆಯನ್ನು ಏರಿಸಿತ್ತು. ಹೊತ್ತುಹೊರಟ ಒಂದು ತಾಸಿನಲ್ಲಿಯೆ ಸೂರ್ಯನು ತನ್ನ ಕಿರಣದ ಬರೆಯನ್ನು ಕೊಡುತ್ತಲಿದ್ದನು. ಮನೆಯಲ್ಲಿಯ ತಂಪು ಎಲ್ಲಿಯೋ ಮಾಯವಾಗುತ್ತಿತ್ತು. ನಡುಹಗಲು ಒಂದು ಬಗೆ ಉರಿ ಬಿಸಿಲು ಎಲ್ಲ ಕಡೆಗೆ ಹಬ್ಬುತ್ತಿತ್ತು. ಗಾಳಿ ಬೀಸಿದರೂ ಬಿಸಿಬಿಸಿಯಾಗಿಯೇ ಇರುತ್ತಿತ್ತು. ಸೂರ್ಯನು ಇನ್ನಿಷ್ಟು ಪ್ರಖರವಾಗಬೇಕೆಂದು ಮನಸ್ಸು ಮಾಡಿದರೆ ಇದ್ದ ಹಾಗೆ ನೆಲವನ್ನೂ ನೆಲದ ಮೇಲಿನ ವಿವಿಧ ಸೃಷ್ಟಿಯನ್ನೂ ಸುಟ್ಟು ಬೂದಿಮಾಡಬಹುದಾಗಿತ್ತು. ಇಂಥ ಕಾಲಕ್ಕೆ ಮನುಷ್ಯನ ತಪ್ತ ಜೀವನವೊಂದು ಕೂಡಿದರೆ ಮಹಾಪ್ರಳಯವೇ ಮುಸುಕಿದಂತೆ ಆಗುವುದು. ವಾಮಣ್ಣನಿಗೆ ಈ ಬೇಸಗೆಯು ಅಂಥದಾಯಿತು. ಹೊರಗೆ ನೆಲೆಯಿಲ್ಲ, ಒಳಗೆ ಸುಖವಿಲ್ಲ ಎಂಬಂತಾಗಿ ಕಾಲವನ್ನು ನೂಕಹತ್ತಿದನು.

ವಾಮಣ್ಣನು ಧಾರವಾಡಕ್ಕೆ ಬಂದ ದಿನ ಭೀಮರಾಯರ ಮನೆಯಲ್ಲಿ ಸಂತೋಷ ಸಮಾಧಾನವು ಸೂಸಾಡಿತು. ಅತ್ತೆಯವರೂ ಸುಗುಣಾಬಾಯಿಯರೂ ಹಿಗ್ಗಿದರು. ಅಳಿಯನು ಮೂರ್ಖನೇ ಆಗಿರಲಿ ಮನೆಗೆ ತಿರುಗಿದನಲ್ಲ ಎಂದು ಭೀಮರಾಯರು ತಮ್ಮ ರೋಷವನ್ನು ಒತ್ತಿಕ್ಕಿ ಸವಿಮಾತಿನಿಂದ ಅವನನ್ನು ಬರಮಾಡಿಕೊಂಡರು. ಪದ್ದಕ್ಕನಂತೂ ಉಬ್ಬುಬ್ಬಿ ತಿರುಗಾಡಹತ್ತಿದಳು. ಇಷ್ಟು ದಿನಗಳ ವರೆಗೆ ನವೆಯುಹೋದ ಅವಳ ಮೈಗೆ ಒಮ್ಮೆಲೆ ಮಾಂಸ ಬಂದಂತಾಯಿತು. ಆದರೆ ಅವನ ಮುಂದೆ ತನ್ನ ಸಂತೋಷವನ್ನು ಆಡಿತೋರಿಸುವ ರೀತಿ ಗೊತ್ತಿಲ್ಲ. ಅವನೇ ಒಂದೆರಡು ಆಡಿದರೆ ಬರೀ ಉಬ್ಬುವೋರೆಯಿಂದ ಉತ್ತರ ಕೊಡುವಳು. ಬಾಯತುಂಬ ತನ್ನೊಡನೆ ಮಾತನಾಡಿ ತನ್ನ ನೂರಾರು ಯಾತನೆಗಳನ್ನು ಅವಳು ನಾಶಗೊಳಿಸಬಹುದೆಂದು ಕನಸುಕಟ್ಟಿ ಬಂದ ವಾಮಣ್ಣನಿಗೆ ಇಂಥ ಉದಾಸೀನವು ಎದೆಯಿರಿಯಿತು. ಆದರೂ ಅವಳ ಸ್ವಭಾವವನ್ನು ಎಷ್ಟೋ ಅನುಭವಿಸಿದ್ದರಿಂದ ಅವನು ತಾಳ್ಮೆಗೆಡಲಿಲ್ಲ. ತನ್ನ ಒಂಬತ್ತು ತಿಂಗಳ ಮಗುವನ್ನು ಕರಕೊಂಡು ಮುದ್ದಾಡಿದನು, ಅದರ ಕಂದಿದ ಮೈಯನ್ನು ನೋಡಿ ಮರುಗಿದನು.

ಕೆಲವು ದಿನಗಳು ಯಂತ್ರದಂತೆ ಹೋದವು. ಆ ಯಂತ್ರದಲ್ಲಿ ಮುಂದೇನು? ಎಂಬ ಒಂದು ಯೋಚನೆಯು ತಿರುತಿರುಗಿ ಚೂರಾಗುತ್ತಿತ್ತು. ಹಿಂದಿನಂತೆ ಮಾವನ ಮನೆಯಲ್ಲಿ ಊಟಮಾಡುತ್ತ ಕಾಲಕಳೆಯುವುದೆಂದರೆ ವಾಮಣ್ಣನಿಗೆ ಎಷ್ಟೂ ಸೇರದು. ಅವರಿಗೂ ತನಗೂ ಉಂಟಾದ ಮತಭೇದ ದಿಂದ ಅವನ ಮನಸ್ಸು ಇನ್ನಿಷ್ಟು ತ್ರಸ್ತವಾಗಿತ್ತು. ಎಲ್ಲಿಯಾದರೂ ಕೆಲಸ ಹಿಡಿದು ನಿಲ್ಲಬೇಕೆಂದರೆ ಅದು ಬಯಸಿದ ಕೂಡಲೆ ಸಾಧ್ಯವಾಗುವ ಮಾತಲ್ಲ. ಮೇಲಾಗಿ ಸೆರೆಮನೆಯಲ್ಲಿ ಇದ್ದಾಗ ತನ್ನ ಭವಿಷ್ಯದ ಒಗ್ಗೆ ದೀರ್ಘವಾಗಿ ಆಲೋಚಿಸಿ ಅವನು ಕೆಲವೊಂದು ನಿರ್ಣಯಕ್ಕೆ ಬಂದಿದ್ದನು. ಕನ್ನಡನಾಡಿ ನಲ್ಲಿಯೇ ಇನ್ನು ಮೇಲೆ ಇದ್ದುಕೊಂಡು ಭಾರತಕ್ಕಾಗಿಯೂ ತನ್ನ ಕೈಲಾದ ಕೆಲಸವನ್ನು ಮಾಡಬೇಕು. ಅದು ಅಸಾಧ್ಯವಾದರೆ ಕೂಲಿಯ ಕೆಲಸಮಾಡಿ ದರೂ ಚಿಂತೆಯಿಲ್ಲ, ಕನ್ನಡನಾಡಿನ ಗಾಳಿಯಲ್ಲೇ ಉಸಿರಾಡಿಸಬೇಕು. ಸೆರೆ ಮನೆಯಿಂದ ಹೊರಬಂದು ಧಾರವಾಡಕ್ಕೆ ಬಂದ ತೊಟ್ಟು ಸಂಸಾರದ ಹೊಣೆ ಗಾರಿಕೆಯ ಅರಿವು ಹೆಚ್ಚುತ್ತ ಹೋಯಿತು, ಆದರ್ಶದ ಕರೆಯು ಎಲ್ಲಿಯೋ ಒಳಒಳಗೆ ಮೊಳಗುತ್ತಿತ್ತು. ಈ ಹೊಯ್ದಾಟದ ಕಾಲದಲ್ಲಿ ಭೀಮರಾಯರು ಅವನ ಕೂಡ ಒಮ್ಮೆ ಮಾತೆತ್ತಿದರು: 'ಏನು ವಾಮನರಾಯರೇ, ನೀವಂತೂ ಸ್ವತಂತ್ರ ವಿಚಾರದವರು. ನಿಮಗೆ ನಾವು ಹೇಳುವ ಆವಶ್ಯಕತೆ ಇಲ್ಲ. ಆದರೂ ಸುಮ್ಮನೆ ಕೇಳತೀನಿ, ನಿಮ್ಮ ಮುಂದಿನ ವಿಚಾರ ಏನು? ಎಲ್ಲಿ ಕೆಲಸ ಮಾಡ ಬೇಕಂತೀರಿ?'

ಪ್ರಶ್ನೆಯಲ್ಲಿಯ ಕಟುಕಿನಿಂದ ಮೊದಲಿನಿಂದಲೆ ವಾಮಣ್ಣನು ಉದ್ವೇಗ ಹೊಂದಿ, ಅನಿಶ್ಚಯದ ಉತ್ತರಗಳನ್ನು ಕೊಡಹತ್ತಿದನು. 'ನಾ ಏನು ಮಾಡ ತೀನೋ ನನಗೇ ಈಗ ಗೊತ್ತಿಲ್ಲ.'

ಇದನ್ನು ಕೇಳಿ ಭೀಮರಾಯರು ಹುಬ್ಬುಗಂಟು ಹಾಕಿದರು. 'ಏನು ಹೀಗಂದರೆ? ಇಷ್ಟು ದೊಡ್ಡವರಾಗಿ ನಿಮಗೆ ನಿಮ್ಮ ಜವಾಬದಾರಿ ತಿಳಿಯು ವದಿಲ್ಲ ಅಂದರೆ? ಎಷ್ಟು ದಿವಸ ಉದ್ಯೋಗ ಇಲ್ಲದೆ ಊಟಮಾಡುತ್ತ ನೀವು ಕಾಲಹಾಕವವರು?'

ಈ ಮಾತು ನೆಟ್ಟನೆ ಹೋಗಿ ವಾಮಣ್ಣನ ಎದೆಯಲ್ಲಿ ಅಲಗಿನಂತೆ ನಟ್ಟು ನಿಂತವು. ಏನೂ ಆಡದೆ ಮೋರೆ ಬಿಗಿದುಕೊಂಡು ಕುಳಿತನು. ಭೀಮರಾಯರು

ಮುಂದರಿದರು: 'ನನ್ನ ಮಾತಿಗೆ ನೀವು ಕಿಮ್ಮತ್ತು ಇಡದಿದ್ದರೆ ಹೇಳತೀನಿ ಆ ಕೆಲಸಹಿಡಿದು ನೀವು ಸುರಕ್ಷಿತ ನಿಮ್ಮ ಹೆಂಡರುಮಕ್ಕಳ ಜೋಡಿ ಇದ್ದು ಬಿಡರಿ. ಕಡೆತನಕ ಎರಡನೆಯವರು ಹಿಡಿ ಅಂದರೆ ಹೇಗೆ ಹಿಡೀತಾರದು?'

ವಾಮಣ್ಣನ ಸಹನಗುಣವು ಕೈಬಿಟ್ಟಿತು, ಮುಖ ಕೆಂಪಗಾಯಿತು. 'ನೀವೇನು ಹಿಡಿಯೋ ಕಾರಣಿಲ್ಲ. ನಮ್ಮ ಸಂಸಾರ ಕಟ್ಟಿಕೊಂಡು ನಾವು ಹಾಳುಭಾವಿ ಬೀಳುತ್ತೇವೆ.'

ಭೀಮರಾಯರು ಗಾಬರಿಗೊಂಡರು. ಅಳಿಯಂದಿರ ಈ ಹೇಳಿಕೆಯಿಂದ ತಮ್ಮ ಮಗಳ ಗತಿಯೇನಾಗುವುದೋ ಎಂಬ ವಿಚಾರದಿಂದ ಇರಬಹುದು. ಅಂತೂ ಇಬ್ಬರಿಂದಲೂ ಕಿಡಿನುಡಿಗಳು ಚಿಮುಕಿಸಿದವು. ಕೊನೆಗೆ ಭೀಮರಾಯರು ಹೇಳಿಬಿಟ್ಟರು: 'ನಿಮ್ಮ ಮನಸ್ಸಿಗೆ ಬಂದಂತೆ ಮಾಡಿರಿ, ನಿಮ್ಮ ಮನಸ್ಸಿಗೆ ಬಂದಲ್ಲೆ ಇರ್ರಿ. ನಿಮಗೆ ಉಪದೇಶ ಹೇಳುವ ನಾವೇ ಮೂರ್ಖರು.'

ಈ ಬಗೆಯಾಗಿ ಮಾತು ಮುಗಿಯಿತು. ವಾಮಣ್ಣನು ಯಾವುದೋ ಒಂದು ದೃಢನಿಶ್ಚಯಮಾಡಿ ತನ್ನ ಕೋಣೆಗೆ ಹೋದನು. ರಾತ್ರಿಯಲ್ಲಿ ಪದ್ದಕ್ಕನ ಕೂಡಿ ಎಲ್ಲ ಮಾತಾಡಿ ಕೊನೆಯ ನಿರ್ಧಾರವನ್ನು ಮಾಡಬೇಕೆಂದು ಅಂದುಕೊಂಡನು. ಮಲಗುವ ಹೊತ್ತಿಗೆ ಕೆಲಸಬೊಗಸೆಯನ್ನು ಮಾಡಿ ಪದ್ದಕ್ಕ ದಣಿದು ಬಂದಳು ಹಾಸಿಗೆ.ಹಾಸಿ ಗೋಪಾಲನನ್ನು ಮಲಗಿಸಿದಳು. ವಾಮಣ್ಣನು ಏನೂ ಮಾತಾಡದೆ ಆರಾಮ ಕುರ್ಚಿಯಲ್ಲಿ ಬಿದ್ದುಕೊಂಡಿದ್ದನು. ಏನೋ ವಿಚಾರದಲ್ಲಿರಬಹುದೆಂದು ಪದ್ದಕ್ಕ ಗೋಪಾಲನ ಹತ್ತಿರ ಹೋಗಿ ಒರಗಿದಳು. ವಾಮಣ್ಣನಿಗೆ ಈ ಅಲಕ್ಷ್ಯವು ತಾಳದಾಯಿತು. 'ಇವಳಿಗೆ ನನ್ನ ಸುಖದುಃಖದ ಪರಿವೆಯೇ ಇಲ್ಲ' ಎಂದು ಕುರ್ಚಿಯಿಂದೆದ್ದು ರಭಸದಿಂದ ಕೋಣೆಯಲ್ಲಿ ತಿರುಗಾಡಿದನು, ಏನೇನೋ ಯೋಚನೆಗಳು ಬಂದವು. 'ಇಂಥ ಮಾವ, ಇಂಥ ಹೆಂಡತಿ! ನನ್ನ ಆಯುಷ್ಯವೆಲ್ಲಾ ಇವರ ಕೈಯಲ್ಲಿ ಹಾಳಾಗುತ್ತಿದೆ!' ಎನ್ನುವವರೆಗೆ ಮನಸ್ಸು ಕಲಕಿಹೋಯಿತು. ಆದರೂ ತನ್ನನ್ನು ತಾನೆ ಸಂತವಿಸಿಕೊಂಡು ಪದ್ದಕ್ಕನ ಹಾಸಿಗೆಯ ಹತ್ತಿರ ಕುಳಿತು 'ಪದ್ಮ, ಏಳು ಸ್ವಲ್ಪ. ನಿನ್ನ ಕೂಡ ಮಾತಾಡುವದಿದೆ' ಎಂದನು.

'ನನಗೆ ನಿದ್ದೆ ಬಹಳ ಬಂದಿದೆ' ಎಂದು ಉತ್ತರ ಬಂದಿತು.

'ನಿನಗೆ ನಿದ್ದೆ ಬಂದಿದ್ದರೆ, ನಾನು ಈಗ ಎದ್ದು ಹೊರಗೆ ಹೋಗತೀನಿ.

ರಾಮಣ್ಣ ದನಿಯೇರಿಸಿ ಆಡಿದ. ಇದೇನೊ ವಿಶೇಷವಿದೆಯೆಂದು ಪದ್ದಕ್ಕ ಎದ್ದು ಕುಳಿತಳು. ರಾಮಣ್ಣ ತನಗೂ ಮಾವಂದಿರಿಗೂ ನಡೆದ ಸಂವಾದವನ್ನು ವಿಸ್ತರಿಸಿ ಹೇಳಿ ಕೊನೆಗಾಡಿದನು: 'ಇನ್ನು ಮೇಲೆ ಈ ಮನೆಯೊಳಗೆ ನಾವು ಇರೋದು ಸಾಕು. ನಾಳಿಂದ ನಾಳೆ ನಾವು ಎಲ್ಲಿಗಾದರೂ ಹೋಗಬಿಡಬೇಕು?' ಇದನ್ನು ಕೇಳಿದೊಡನೆ ಪದ್ದಕ್ಕನ ಎಳಕ ಹೃದಯಕ್ಕೆ ಸಿಡಿಲು ಬಡಿದಂತಾಯಿತು. ಕಣ್ಣಲ್ಲಿ ನೀರು ತಂದಳು. ಅವಳಿಗೆ ಒಂದೆರಡು ಕ್ಷಣ ಮಾತಾಡಲಿಕ್ಕೆ ಬರಲೊಲ್ಲದು. ರಾಮಣ್ಣನು ಇನ್ನಷ್ಟು ನಿರ್ಧಾರದಿಂದ ಅದೇ ಮಾತನ್ನು ಒತ್ತಿ ಹೇಳುತ್ತಿದ್ದನು.

ಪದ್ದಕ್ಕ ಧೈರ್ಯತಂದುಕೊಂಡು ಆಡಿದಳು: 'ಹಂಗೆಲ್ಲಾ ಆಡಬ್ಯಾಡರಿ, ಮನೀ ಬಿಟ್ಟು ಹೋಗಲಿಕ್ಕೆ ಅಂಥಾದೇನು ಆಗೇದ?'

'ಇನ್ನೇನು ಆಗಬೇಕು? ನಿಮ್ಮ ಅಪ್ಪ, ಅವರು ನನಗೆ ನೋಟೀಸ ಕೊಟ್ಟು ಬಿಟ್ಟಾರೆ, ತಿಳಿಯಿತೇ?'

'ಏನಾರೆ ಹುಚ್ಚುಚ್ಚಾರ ಆಡೋದು! ಅವರೊಂದು ಆಡಿದರ ನೀವೊಂದು ತಿಳಕೊಂಬೋದು. ಎಲ್ಲ್ಯಾರೆ ಕೆಲಸ ಹಚ್ಚಿ ಕೊಡತೇನಿ ಅಂತಾರ, ಕೆಲಸ ಹಿಡಿದು ಇಲ್ಲೇ ಇದ್ದರಾತು.'

ಹೆಂಡತಿಯ ಈ ಮನೋವೃತ್ತಿಯು ಎಂದಿನಿಂದಲೂ ರಾಮಣ್ಣನಿಗೆ ಗೊತ್ತಿತ್ತು. ಆದರೆ ಈಗ ಅವಳು ತನ್ನ ಮೇಲಿನ ಮಮತೆಯಿಂದ ತನ್ನ ಪಕ್ಷವನ್ನು ಕಟ್ಟುವಳೆಂದು ಅವನು ಆಶಿಸಿದ್ದನು. ಅದು ಸುಳ್ಳಾಯಿತು. ಕೂಡಲೆ ತಲೆ ಕಾದು ಆಡಿದನು: 'ಆಯಿತು, ಯಾವಾಗಲೂ ನೀ ಹೀಗೇ. ನಿನಗೆ ತಂದೆ-ತಾಯಿ ಹೆಚ್ಚು, ನಿನ್ನ ಗಂಡ ಹೆಚ್ಚಲ್ಲ. ನೀ ಬೇಕಾದರೆ ಕಡೆತನಕ ಇಲ್ಲೇ ಇದ್ದು ಬಿಡು. ನಾ ಅಂತೂ ಹೊರಡತೀನಿ.'

ಮತ್ತೆ ಪರಿಸ್ಥಿತಿಯು ವಿಕೋಪಕ್ಕೆ ಹೋಯಿತು. 'ಹಂಗನಬ್ಯಾಡರಿ' ಎನ್ನುತ್ತ ಪದ್ದಕ್ಕ ಕರುಣೆಯ ಮುಖಮಾಡಿ ದಳದಳ ಕಣ್ಣೀರುಗರೆದಳು. ತನ್ನ ನಿರ್ಧಾರಕ್ಕೆ ಪದ್ದಕ್ಕನ ಸಂಮತಿಯ ಬಲ ಸಿಕ್ಕಿದ್ದರೆ ಮಾರನೆಯ ದಿನವೇ ಮಾವಂದಿರ ಮನೆಗೆ ದಂಡಪ್ರಣಾಮಮಾಡಿ ಹೊರಡಬೇಕೆಂದು ರಾಮಣ್ಣನು ವೀರನಿಶ್ಚಯ ಮಾಡಿದ್ದನು. ಆದರೆ ಸಂಮತಿಯ ಬದಲು ಅವಳ ಕರುಣೆಯ ಕಣ್ಣೀರು ನೆರೆಯಾಗಿ ಅವನನ್ನು ಮುತ್ತಿಬಿಟ್ಟಿತು. ಮತ್ತೆ ತೂಗಾಟದಲ್ಲಿ

ನಿಕ್ಕನು. ಮನೆ ಬಿಟ್ಟು ಹೋಗಿಯಾದರೂ ಏನು ಮಾಡಬೇಕು ಎಂಬ ವ್ಯಾವಹಾರಿಕ ವಿಚಾರವು ತಲೆಯಲ್ಲಿ ಸುಳಿದಿತ್ತು. ಹಸಿವೆಯಿಂದ ಹೊಟ್ಟೆ ಸುಟ್ಟು ಹೋದರೂ ಚಿಂತೆಯಿಲ್ಲ ಎಂದು ಸ್ವಾಭಿಮಾನವು ಗುಡುಗಾಡಿತು. ಆದರೆ ಪದ್ಮೆಯು ಸಿದ್ಧಳಿಲ್ಲವಲ್ಲ ಎಂದು ಕಣ್ಣು ಮುಂದಿನ ಸತ್ಯವು ಸಾರಿತು. ಯಾವುದೂ ಬಗೆ ಹರಿಯದೆ ಭಾವವಶನಾಗಿ ವಾಮಣ್ಣನು ಪದ್ಮೆಯ ಹತ್ತಿರ ಹೋಗಿ ಜತು ಅಪ್ಪಿಕೊಂಡು 'ನೀನೇ ಹೇಳು, ಏನು ಮಾಡಲಿ?' ಎಂದನು.

ಪದ್ದಕ್ಕ ತುಸು ತಡೆದು 'ಅನಕಾತ ಇಲ್ಲೇ ಇರೋಣ. ಎಲ್ಲಾರ ಕೆಲಸ ನೋಡರಿ. ನಿಕ್ಕಗಳಿಗ್ಗೆ ಹೋಗೋಣ' ಎಂದು ಶಾಂತ ಸರಣಿಯಲ್ಲಿ ಹೇಳಿದಳು.

ವಾಮಣ್ಣನಿಗೆ ಆಗಿನ ಮನಸ್ಥಿತಿಯಲ್ಲಿ ಅದಕ್ಕೆ 'ಹೂ' ಎನ್ನದೆ ಗತಿಯಿರ ಲಿಲ್ಲ. 'ಆಗಲಿ, ನೀನನ್ನುವಂತೆ ಆಗಲಿ. ಆದರೆ ಒಂದು ಮಾತು. ಈನತ್ತು ಆಡಿದಂತೆ ಮಾವಂದಿರು ಇನ್ನು ಮುಂದೆ ಆಡಿದರೆ, ನಾನು ಇಲ್ಲಿಂದ ಹೊರಟು ಹೋಗುತ್ತೇನೆ. ನೀನು ಬೇಕಾದ್ದು ಮಾಡು.' ಈ ನಿರ್ಣಯದಿಂದ ಮಾತು ಕೊನೆ ಗಂಡಿತು. ಇಬ್ಬರೂ ಸಿದ್ದೆ ಹೋದರು.

ವಾಮಣ್ಣನ ಉಚ್ಛೃಂಖಲವೃತ್ತಿಯನ್ನು ನೋಡಿ ಭೀಮರಾಯರಿಗೆ ತರತರದ ವಿಚಾರಗಳು ಬರಹತ್ತಿದ್ದವು. ತಾವು ಬಯಸಿದಂತೆ ಜಗತ್ತು ನಡೆ ಯುವುದೆಂಬ ಅವರ ತಿಳಿವಳಿಕೆಗೆ ಈಗ ದೊಡ್ಡ ಧಕ್ಕೆಯು ತಗಲಿದಂತಾಯಿತು. ಮನೆಯ ಅಳಿಯನೇ ತಮ್ಮ ಮಾತು ಮೀರಿ ನಡೆಯಹತ್ತಿದ ಮೇಲೆ ಯಾರೇನು ಮಾಡಲಿಕ್ಕಿಲ್ಲ? ತಮ್ಮ ಮಕ್ಕಳ ಭರವಸೆಯಾದರೂ ಏನು? ಇನ್ನು ೧—೨ ವರುಷದಲ್ಲಿ ತಾವು ಕೆಲದಿಂದ ನಿವೃತ್ತರಾಗುವವರು, ಆಗ ಎಲ್ಲರೂ ಕೈಬಿಟ್ಟರೇನು ಗತಿ? ಈ ಮುಂತಾದ ವಿಚಾರಗಳು ಅವರ ತಲೆಯಲ್ಲಿ ಅಲೆಯ ಹತ್ತಿದವು. ವಾಮಣ್ಣನು ಮೊನ್ನಿನ ವಾದಿಸಾಟವಾದ ಮೇಲೆ ತಮ್ಮಲ್ಲಿ ಇರುತ್ತಿರುವನಾದರೂ ಯಾವಾಗ ಏನು ಮಾಡುವನೋ ನೇಮವಿಲ್ಲ. ಈ ನುಗುಣಿಯನ್ನು ಇಷ್ಟು ವರುಷ ತಮ್ಮಲ್ಲಿ ಇಟ್ಟುಕೊಂಡು ಹೊಟ್ಟೆ ಬಟ್ಟೆ ನೋಡಿಕೊಂಡದ್ದಾಯಿತು. ಇವಳ ಅತ್ತೆಮನೆಯವರು ಏನೂ ಕೊಡುವಂತೆ ಕಾಣುವುದಿಲ್ಲ. ಅಲ್ಲಿಗೇ ಕಳಿಸಿ ಕೊಡಿ ಎಂದು ಗಂಟುಬಿದ್ದಿರುವರು, ಅದು ಶಕ್ಯವಿಲ್ಲ. ಅವಳಿಗಾಗಿ ಯಾಕೆ ಸುಮ್ಮನೆ ಖರ್ಚು ಮಾಡುತ್ತಿರಬೇಕು?..

ಈ ದಾರಿಯಲ್ಲಿ ವಿಚಾರವು ಹರಿದು ಎಂದಿನಿಂದಲೂ ಭೀಮರಾಯರು ಮಾಡುತ್ತಿರುವ ಮುಕ್ತಾಯಕ್ಕೆ ಮುಟ್ಟಿತು.

ಒಂದು ಗುರುವಾರ ರಾತ್ರಿ. ಭೀಮರಾಯರಿಗೆ ಅಂದು ರಾತ್ರಿಯ ಊಟ ಇರಲಿಲ್ಲ. ಏನೇನೋ ಕಾಗದಪತ್ರ, ಕಾಯಿದೆ ಪುಸ್ತಕಗಳನ್ನು ತಿರುವಿ ಹಾಕಿ, ಕೈಕಾಲು ತೊಳೆದುಕೊಂಡು ಸಂಧ್ಯಾವಂದನೆಗೆಂದು ದೇವರ ಮನೆ ಸೇರಿದರು. ಸಂಧ್ಯಾವಂದನೆ–ಪಾರಾಯಣ ಮುಗಿದವು. ಮಂಗಳಾರತಿಗೆ ಬತ್ತಿಯನ್ನು ಹಾಕಿಕೊಡಲಿಕ್ಕೆ ಸುಗಣಾಬಾಯಿಯೇ ದೇವರ ಮನೆಯೊಳಗೆ ಬಂದಳು. ಕಕ್ಕಿಯವರು ಕೆಲಸದಿಂದ ದಣಿದು ಮಲಗಿದ್ದರಿಂದ ಸುಗುಣಾಬಾಯಿಯೇ ಅದನ್ನು ಮಾಡಿದಳು. ಅಲ್ಲದೆ ಮಂಗಳಾರತಿಯ ಹೊತ್ತಿಗೆ ಇರುವುದು ಅವಳಿಗೆ ಬೇಕಾದ ಸಂಗತಿ. ಮಂಗಳಾರತಿಯಾಯಿತು. ಸುಗುಣಾಬಾಯಿಯು ಆರತಿಯ ತಟ್ಟೆಯ ಮೇಲೆ ಕೈಯಾಡಿಸಿ ಕಣ್ಣಿಗೊತ್ತಿ 'ಸ್ವಾಮಿ ನಮ್ಮಪ್ಪ' ಎನ್ನುತ್ತ ಕೈಮುಗಿದಳು.

ಹತ್ತು ಹೊಡೆಯಲಿಕ್ಕೆ ಬಂದಿದ್ದರಿಂದ ಮನೆಯೆಲ್ಲ ಸ್ತಬ್ಧವಾಗಿತ್ತು. ಎಲ್ಲರೂ ಸಿದ್ದೆ–ಹೋಗಿದ್ದರು. ಹೊರಗೆ ಕೂಡ ಸದ್ದು ಅಡಗಿದೆ. ಸುಗುಣಾಬಾಯಿಯು ಶಾಂತವಾಗಿ ಐದು ನಿಮಿಷಗಳ ತನಕ ದೇವರ ಮುಂದೆ ಕುಳಿತಳು. ತಮ್ಮ ವಿಚಾರವನ್ನು ಅವಳ ಮುಂದಿಡಲಿಕ್ಕೆ ಇದೇ ಸಮಯವೆಂದು ಭೀಮರಾಯರು ಅದರ ಪ್ರಸ್ತಾಪ ತೆಗೆದರು. 'ಅಲ್ಲ, ಸುಗುಣೀ, ನಿಮ್ಮ ಭಾವಂದಿರ ಪತ್ರ ಬಂದದ್ದು ಹೇಳೀನಲ್ಲ, ನಿನಗ? ಕನಕಾಪುರಕ್ಕ ಹೋಗಬೇಕಂತೀಯೇನು?'

'ನಾ ಮರೋ ಒಲ್ಲೆ ಕಾಕಾ. ಅಲ್ಲಿ ಹೋದರ ಹಂಚಿನ ಮ್ಯಾಲ ಹಾಕಿದ ಹೋಳಿಗಿ ಹಂಗ ನನ್ನ ಗತಿ ಆದೀತು.'

'ಅದು ಬರಾಬರಿ, ಸುಗುಣಿ. ನೀ ಇಲ್ಲೇ ಇರು ಅಂತ ಅದಕ್ಕ ನಾ ಅಂತೀನಿ. ಆದರ ನಿನಗ ಪಾಲುಪೋಟಗಿ ಏನೂ ಕೊಡೂದುಲ್ಲ ಅಂತಾರ. ಏನೂ ಇಲ್ಲದ ಕೂಡತೀಯಾ?'

'ಹಾಳಾಗಿ ಹೋಗಲಿ ಯೋಳಿಯೋಳು ಜನ್ಮ. ಇನ್ನೇನು ಮಾಡೋದು? ಅವರಿರೋತನಕ ಆ ಮನಿ ಪುಣ್ಯಾ ಭೋಗಿಸಿದೆ. ಈಗ ನನ್ನ ದೈವದಾಗ ಇಲ್ಲ ಅನಬೇಕು.'

‘ ಹಂಗಲ್ಲ ಸುಗಣೀ, ನಾ ಒಂದು ಯುಕ್ತಿ ಹೇಳತೀನಿ, ಅದಕ್ಕ ನೀ ಕಬೂಲಿ ಕೊಡಬೇಕು. ಅದಾತು ಇದಾತು ಅನಬಾರದು. ’

‘ ಅದೇನು ಕಾಕಾ ? ನೀ ಹೇಳಿದಂಗ ಮಾಡೋಣ. ’

‘ ಹಂಗಾರ ನೋಡು ಈಗ ಹೊಸ ಕಾಯುದೆ ಆಗೇದ. ಅದರ ಪ್ರಕಾರ ನಿನಗ ದತ್ತಕ ತಗೊಳಿಕ್ಕೆ ಬರತದೆ. ಆಯಿತು, ನನ್ನ ಅರವಿಂದ ದೊಡ್ಡವ ಆಗ್ಯಾನ. ಇಂಗ್ಲಿಷ್ ಸಾಲಿಗೆ ಹೋಗತಾನ. ಅವನ್ನ ತಗೊಂಡುಬಿಡು. ಎಲ್ಲಾ ಶಾಸ್ತ್ರದ ಪ್ರಕಾರ ದತ್ತಕ ಮಾಡಸತೀನಿ. ಅಲ್ಲಿಂದ ಅವರು ಹೆಂಗ ಒಂದು ಪಾಲು ಕೊಡೂದುಲ್ಲ ನೋಡತೀನಿ ’ ಎಂದು ಸುಗುಣಾಬಾಯಿಗೆ ಪೂರಾ ಮನವರಿಕೆಯಾಗುವಂತೆ ಭೀಮರಾಯರು ಎಲ್ಲವನ್ನೂ ತಿಳಿಸಿ ಹೇಳಿದರು.

‘ ಅತ್ತೆಮನೆಯವರು ಹೀಗೆ ಮಾಡಿದರೆ ರಂಪಾಟ ಮಾಡಲಿಕ್ಕಿಲ್ಲವೇ ?’ ಎಂದು ಅವಳು ಹೆದರಿ ಕೇಳಿದಳು.

‘ ಅವರೇನು, ನಿನಗೆ ಕಲ್ಯಾಣವಾಗುವ ಎಲ್ಲ ಮಾತಿಗೆ ರಂಪಾಟ ಮಾಡುವವರೆ ! ’ ಎಂದು ಭೀಮರಾಯರು ಉತ್ತರಕೊಟ್ಟರು.

ಕೊನೆಗೆ ಸುಗುಣಾಬಾಯಿ ಹೇಳಿದಳು: ‘ ಕಾಕಾ, ನಿನಗs ಎಲ್ಲಾ ಗೊತ್ತು. ನಮ್ಮಪ್ಪನ್ನ ಕಳಕೊಂಡೀನಿ ಅಂತ ನಾ ತಿಳಕೊಂಡಿಲ್ಲ. ನೀನs ಅಪ್ಪನಂಗ ನನ್ನ ನೋಡಿಕೊಂಡೀದಿ. ನಿನಗ ಹ್ಯಾಂಗ ಅನಿಸಿದ್ದು ಮಾಡು. ’

ಭೀಮರಾಯರ ಮುಖವು ಅರಳಿತು. ದೇವರ ಮುಂದೆ ಕುಳಿತು ತಮ್ಮ ಕಾರ್ಯಸಾಧಿಸಿದೆನೆಂದು ಅವರಿಗೆ ಸಂತೋಷವಾಯಿತು. ‘ ನಾನೆಲ್ಲ ವ್ಯವಸ್ಥೆ ಮಾಡತೇನೆ. ನೀ ಕಾಳಜೀ ಮಾಡಬ್ಯಾಡ ’ಎಂದು ಎದ್ದು ಹೊರಟರು. ಅಂದು ರಾತ್ರಿ ನಿದ್ದೆಯಲ್ಲಿ ಅವರಿಗೆ ಹೊಸ ಆಸ್ತಿಯ ಕನಸುಗಳು ತಿರುತಿರುಗಿ ಬಿದ್ದವು.

ಇತ್ತ ಕನಕಾಪುರದಲ್ಲಿ ಸುಗುಣಾಬಾಯಿಯು ಧಾರವಾಡಕ್ಕೆ ಒಂದಂದಿನಿಂದ ದೊಡ್ಡ ಕಾರಸ್ಥಾನವೇ ನಡೆದಿತ್ತು. ಮಾಮಲೇದಾರನಾಗಿದ್ದ ಕಕ್ಕನ ಹತ್ತಿರ ಇರಲಿಕ್ಕೆ ಹೋಗಿ ತಮ್ಮ ವತನದಲ್ಲಿಯ ಪಾಲೊಂದನ್ನು ಅವಳು ಕಸಿದುಕೊಳ್ಳಲಿಕ್ಕೆ ಹೊಂಚು ಹಾಕಿರಬಹುದೆಂದು ಬಾಬೂರಾಯರು ಕಾಯಾಸಕಟ್ಟಿದರು. ಊರ ಮುತ್ಸದ್ದಿಗಳ ಕೂಡ ಇದಕ್ಕೇನು ಉಪಾಯವೆಂದು ಮೇಲಿಂದ ಮೇಲೆ ವಿಚಾರವಿನಿಮಯವನ್ನು ಮಾಡಿದರು. ಅವಳನ್ನು

ಏನಾದರೂ ಮಾಡಿ ತಿರುಗಿ ಕನಕಾಪುರಕ್ಕೆ ಕರಿಸಿಕೊಳ್ಳಲೇಬೇಕು ಎಂದು ಗೊತ್ತಾಯಿತು. ಈ ಧೋರಣೆಗೆ ಅನುಸರಿಸಿ ಸುಗುಣಾಬಾಯಿಯನ್ನು ಕಳಿಸಿ ಕೊಡಬೇಕೆಂದು ತಿಂಗಳಿಗೊಂದು ಪತ್ರವಾದರೂ ಭೀಮರಾಯರಿಗೆ ಹೋಗು ತ್ತಿತ್ತು. ಆದರೆ ಮೂರು ನಾಲ್ಕು ವರ್ಷವಾದರೂ ಈ ಯುಕ್ತಿಯು ಫಲಿಸ ಲಿಲ್ಲ. ಒಂದಿಲ್ಲೊಂದು ಕಾರಣ ತಿಳಿಸಿ ಭೀಮರಾಯರು ಆ ವಿಷಯವನ್ನು ಮುಂದೆ ಹಾಕುತ್ತಿದ್ದರು. ಇದನ್ನು ನೋಡಿ ಬಾಬೂರಾಯರಿಗೆ ಪ್ರಬಲವಾದ ಸಂಶಯವೊಂದು ಬರತೊಡಗಿತು. ಎಲ್ಲಾ ಕಡೆಗೆ ಬಾಲವಿಧವೆಯರೂ ವಯ ಸ್ಸಾದ ವಿಧವೆಯರೂ ಹೊಸ ಕಾಯದೆಯ ಫಾಯದೆ ತಗೊಂಡು ದತ್ತಕ ತಗೊಳ್ಳುವ ಸೂತ್ರವನ್ನು ಪ್ರಾರಂಭಿಸಿದ್ದರು. ಅಂದ ಮೇಲೆ ಭೀಮರಾಯರು ತಮ್ಮ ಮಗನನ್ನು ಸುಗುಣಾಬಾಯಿಗೆ ದತ್ತಕ ಕೊಡಿಸಬೇಕೆಂದು ಯಾಕೆ ಲೆಕ್ಕ ಹಾಕಿರಬಾರದು? ಅವರು ಹಾಗೆ ಮಾಡಿದ್ದೇ ಆದರೆ ತಮ್ಮ ಮನೆತನದ ಉತ್ಪನ್ನವು ನಿಷ್ಕಾರಣವಾಗಿ ಯಾರ ಪಾಲೋ ಆಗಿಹೋದೀತು. ಅದನ್ನು ತಪ್ಪಿಸಬೇಕಾದರೆ ಸುಗುಣಾಬಾಯಿಯನ್ನು ಕೂಡಲೆ ಊರಿಗೆ ಕರೆತರಬೇಕು, ಇನ್ನೇನೂ ಹಾದಿಯಿಲ್ಲ. ಹೀಗೆಂದು ಬೆಳೆದು ನಿಂತ ತಮ್ಮ ಮಗಳಿಗೆ ಮೊದಲೇ ಮಾತಾಡಿಕೊಂಡಂತೆ ಹೆಂಡತಿಯ ತಮ್ಮನನ್ನು ವರ ಗೊತ್ತುಮಾಡಿದರು. ಮನೆಯ ಪುರೋಹಿತರೊಡನೆ ಮಾತಾಡಿ ಸಮೀಪದ ಮುಹೂರ್ತವನ್ನು ಗೊತ್ತುಪಡಿಸಿದರು. ಮರುದಿನವೇ ಧಾರವಾಡಕ್ಕೆ ಹೊರಟು ಭೀಮರಾಯ ರಲ್ಲಿ ಇಳಿದರು. ಒಬ್ಬರಿಗೊಬ್ಬರಿಗೆ ಸೇರಿಕೆಯಿಲ್ಲ. ಆದರೂ ಉಪಚಾರದ ಮಾತುಕತೆಗಳಾದವು. ಇನ್ನು ಕೆಲವು ದಿನಗಳಲ್ಲಿ ದತ್ತಕವಿಧಾನವನ್ನು ಮುಗಿಸಿಬಿಡಬೇಕೆಂದು ಭೀಮರಾಯರು ಹಂಚಿಕೆ ಮಾಡುವಷ್ಟರಲ್ಲಿ ಈ ಪ್ರಾಣಿ ಬಂದುಬಿಟ್ಟರು. ಏನಾದರೂ ಹೇಳಿ ಕಳಿಸಿದರಾಯಿತು ಎಂದರು. ಆದರೆ ಬಗೆಹರಿಯಲಿಲ್ಲ. ತಮ್ಮ ಮಗಳ ಮದುವೆಯು ಸನಿಯದಲ್ಲಿ ಬಂದದ್ದು ತಿಳಿಸಿ ತಮ್ಮ ಕೂಡ ಸುಗುಣಾಬಾಯಿಯನ್ನು ಕಳಿಸಬೇಕೆಂದು ಬಾಬೂ ರಾಯರು ವಿನಯವೆತ್ತಿದರು.

ಭೀಮರಾಯರು 'ಬಹಳ ಸಂತೋಷದ ಕೆಲಸ. ಆದಕ್ಕೇನು ಅಡ್ಡಿ ಯಿಲ್ಲ. ಮುಹೂರ್ತ ಇನ್ನೂ ಯೋಳೆಂಟು ದಿವಸ ಇರುವದಲ್ಲ, ನಾನೇ ಕರಕೊಂಡು ಬಂದು ಬಿಡತೀನಿ' ಎಂದು ಹಾರಿಕೆಯ ಉತ್ತರ ಕೊಟ್ಟರು.

ಬಾಬುರಾಯರು ಅದೇ ಸರಣಿಯಲ್ಲಿ ತಮ್ಮ ಮಾತಿಟ್ಟರು: 'ನೀವು ಲಗ್ನಕ್ಕ ಬಿರಕೀರಿ ಅಂದರೇನು ಕೇಳತೀರಿ, ನಮ್ಮ ಭಾಗ್ಯಾನs ತೆರೀತು. ಅವಶ್ಯ ನೀವೆಲ್ಲರೂ ನಮ್ಮನ್ನೆಲ್ಲ ಕರಕೊಂಡು ಬರ್ರಿ. ಆದರೆ ಸುಗುಣಾಬಾಯಿನ್ನ ನನ್ನ ಜೋಡಿ ಕಳಿಸಿಬಿಡರಿ. ಮದುವಿಕಿಂತ ಮುಂಚೆ ಸಾಮಾನುಸಟ್ಟರು ಮಾಡೋದಿರತದ. ಅದರಾಗ ಮುಂದ ಮುಹೂರ್ತಿಲ್ಲಂತ ಅವಸರಲೆ ಹೂಡೀವಿ.'

ಭೀಮರಾಯರು 'ಅದೆಲ್ಲಾ ಖರೆ' ಎನ್ನುತ್ತ ಕೆಲಹೊತ್ತು ವಿಚಾರದಲ್ಲಿ ಮುಳುಗಿದರು. ತಮ್ಮ ನಿರ್ಣಯವನ್ನು ತುಸು ಮುಂದೆ ಹಾಕುವುದಕ್ಕೆಂದು ಸುಗುಣೆಯನ್ನೇ ಕರಿಸಿ ಅವಳಿಗೆ ಬಾಬುರಾಯರು ಕರೆಯಬಂದ ಸುದ್ದಿಯನ್ನು ಅತ್ಯಂತ ಸಹಾನುಭೂತಿಯಿಂದ ಹೇಳಿದರು. ಅವಳಿಂದಲೇ ನಕಾರ ಬರುವುದೆಂದು ಅವರಿಗೆ ಪೂರಾ ಖಾತ್ರಿಯಿತ್ತು.ಆದರೆ ಇಲ್ಲಿ ಕಾಯಾಸವು ಕೈಗೆಟ್ಟಿತು. ಮೊದಲು ಸುಗುಣಾಬಾಯಿಯು ಸುಮ್ಮಗಿದ್ದಳು. ಆದರೆ ಬಾಬೂರಾಯರು ಅವಳ ಮನವೊಲಿಸುವ ಎಲ್ಲ ಹಂಚಿಕೆಮಾಡಿದರು: 'ನೋಡು, ಸುಗುಣಾಬಾಯಿ, ನೀ ಬರದಿದ್ದರ ಶಾಂತಿ ಮದವೀನ ಮಾಡಿಕೊಳ್ಳುವದಿಲ್ಲ ಅಂತಾಳ. ಆಕಿ ಸಣ್ಣಾಕಿ ಇದ್ದಾಗಿನ ಹಿಡಿದು ನಿನ್ನ ಬಳಕೀನೇ ಬಹಳ. ಮನ್ಯಾಗ ಎಲ್ಲಾರೂ ನಿನ್ನ ಕರಕೊಂಡು ಲಗೂ ಬಾ ಅಂತ ಹೇಳ್ಯಾರ. ಬೇಕಾರ, ನಿನ್ನ ಮನಸ್ಸಿನಾಗ ಇದ್ದರ ಮದವಿ ಆದಮ್ಯಾಲೆ ತಿರಗಿ ಇಲ್ಲಿಗೆ ಕಳಿಸಿಕೊಡತೀನಿ. ಆತಿಲ್ಲೋ?' ಈ ಮಾತಿನ ಪ್ರವಾಹವು ಹರಿದಂತೆ ಅದರ ಸೆಳವಿನಲ್ಲಿ ಸುಗುಣಾಬಾಯಿಯು ಸುಸುಳಿದಳು. ಅತ್ತೆಮನೆಯ ಕ್ಷಣಿಕ ಮೋಹವೊಂದು ಆವರಿಸಿತು. ತಾನು ಆಡಿಸಿ ಬೆಳಸಿದ ಶಾಂತೆಯ ಚಿತ್ರವು ಕಣ್ಣೆದಿರು ಕಟ್ಟಿತು. ಅವಳ ಮದುವೆಯನ್ನು ತಾನು ನೋಡಬೇಕೆಂದು ಆಸೆಹುಟ್ಟಿತು. ಎಷ್ಟಾದರೂ ಹೆಣ್ಣಿನ ಕರುಳದು. 'ನೀವು ಹಿರೇರೆಲ್ಲಾ ಹೇಳಿಧಂಗ ಮಾಡತೀನಿ' ಅಂದು ಬಿಟ್ಟಳು.

ಭೀಮರಾಯರಿಗೆ ವೈಬೆವರಿತು. ಬಾಬೂರಾಯರಿಗೆ ಗೆಲವು ಬಂದಿತು. 'ಆಯಿತು ಭೀಮರಾಯರೇ, ಈ ಹೊತ್ತು ನಾ ಕರಕೊಂಡು ಹೊರಡತೀನಿ ಮಧ್ಯಾಹ್ನ ಗಾಡಿಗೆ' ಅಂದರು.

ಇನ್ನು ಬೇಡ ಅಂದರೆ ತಮ್ಮ ಮೇಲೆ ಬರುವುದೆಂದು ಎಣಿಸಿ 'ಆಗಲಿ, ನಿಮ್ಮಂತೆ ಆಗಲಿ. ತಿರುಗಿ ಮದುವೆಯಾದ ಘಳಿಗ್ಗೆ ಕಳಿಸಿಕೊಡಬೇಕು ಮಾತ್ರ' ಎಂದು ಒಪ್ಪಿಗೆ ಕೊಟ್ಟರು.

ಬಾಬೂರಾಯರು ‘ ಅಲ್ಲ, ನೀವೇ ಮುದವಿಗೆ ಬರತೀರಿಲ್ಲ, ಆಗ ನಿಮ್ಮ ಜೋಡಿ ತಿರುಗಿ ಕರಕೊಂಡು ಬಂದರಾತು, ಹೌದಲ್ಲೊ ? ’ ಎಂದು ಭೀಮರಾಯರನ್ನು ಪೇಚಿನಲ್ಲಿ ಹಾಕಿದರು.

‘ ನನಗ ನೂರಾಎಂಟು ಕೆಲಸ. ಆದರ ಬರತೀನಿ ಒಂದೊಪ್ಪತ್ತು. ಬರದಿದ್ದರ, ನೀವs ಕಳಿಸಿಕೊಡಿರಿ ಆತು. ’

ಈ ಪರಿಯಲ್ಲಿ ವ್ಯವಹಾರ ಶೂರರಾದ ಇಬ್ಬರು ಅನುಭವಿಕ ಹಿರಿಯರ ಮಾತುಕತೆ ಆದವು. ಬಾಬೂರಾಯರ ಕೂಡ ಅಂದಿನ ಗಾಡಿಗೇ ಸುಗುಣಾಬಾಯಿಯು ಕನಕಾಪುರಕ್ಕೆ ಹೊರಟುಹೋದಳು. ‘ ಆಯಿತು, ಅವಳು ತಿರುಗಿ ಬಂದಕೂಡಲೆ ದತ್ತಕವನ್ನು ಮಾಡಿಬಿಟ್ಟರಾಯಿತು’ ಎಂದು ಭೀಮರಾಯರು ಸಮಾಧಾನಮಾಡಕೊಂಡರು.

ಕನಕಾಪುರಕ್ಕೆ ಸುಗುಣಾಬಾಯಿಯು ಹೋದಂದಿನಿಂದ ಅವಳ ಜೀವಸದ ದುರಂತನಾಟಕವು ಮರುಕಳಿಸಿತು. ಅವಳು ಬಂದದ್ದಕ್ಕೆ ಯಾರಿಗೂ ಸಂತೋಷವಿಲ್ಲ. ಉಪಚಾರಕ್ಕೆ ಸಹ ಯಾರೂ ‘ಬಾ ಕೂಡು’ ಎನ್ನುವವರಿಲ್ಲ. ಆಡಿವರೆ ಕೊಂಕುಮಾತುಗಳು. ಮದುವೆಯೇನೊ ಆಗುವಂತೆ ಆಯಿತು. ಇನ್ನೂ ಚಿಕ್ಕವಳಾದ್ದರಿಂದ ಶಾಂತೆಯು ಮಾತ್ರ ಅಕ್ಕರತೆಯಿಂದ ‘ ಕಕ್ಕಿ ’ ಎನ್ನುತ್ತ ಸುಗುಣಾಬಾಯಿಯ ಹತ್ತಿರ ಬಂದು ಕೂಡುತ್ತಿದ್ದಳು. ಅವಳಿಂದ ಹೆಳಲು ಹಾಕಿಸಿಕೊಳ್ಳುತ್ತಿದ್ದಳು. ತನ್ನ ವಸ್ತ್ರ-ಒಡವೆಯ ಸುದ್ದಿ ಹೇಳುತ್ತಿದ್ದಳು. ಇದು ಕೂಡ ಅತ್ತೆಯವರಿಗೂ ಉಳಿದ ಹೆಂಗಸರಿಗೂ ಎಷ್ಟೊ ಸಹಸವಿಲ್ಲ. ‘ ಆಕಿ ಹತ್ತೀಲೆ ಯಾಕ ಹೋಗಿ ಕೂಡತೀ ? ನಮ್ಮ ಮನಿ ಅಂದರ ಆಕಿಗೆ ಸ್ಮಶಾನ ಇದ್ದಂಗಂತ. ಈಗೇನೊ ಬುಬ್ಬುಣಚಾರಕ್ಕ ನಾಕ ದಿನ ಇಲ್ಲಿಗೆ ಬಂದಾಳ! ’ ಇಂಥ ಮಾತೇ ಮಾತು. ಸುಗುಣಾಬಾಯಿಗೆ ಇವನ್ನು ನುಂಗಿ ನುಂಗಿ ಸಾಕಾಯಿತು. ಅವಳನ್ನು ಕರಕೊಂಡು ಬಂದು ಮನೆಯಲ್ಲಿ ಬಿಟ್ಟಕ್ಷಣ ತಮ್ಮ ಕೆಲಸ ಗೆದ್ದಿತೆಂದು ಬಾಬೂರಾಯರು ಅವಳ ಉಸಾಬರಿಯನ್ನೆ ಬಿಟ್ಟಿದ್ದರು. ಮದುವೆಯಾಗಿ ೭-೮ ದಿನಗಳಾದರೂ ಅವರಿಗೆ ತಾನಾಗಿ ತಿರುಗಿ ಕಳಿಸುವ ವಿಚಾರವು ಬರಲಿಲ್ಲ. ಕಡೆಗೆ ಧೈರ್ಯಮಾಡಿ ಸುಗುಣಾಬಾಯಿಯೇ ಒಮ್ಮೆ ಅಂಜಂಜುತ್ತ ಹೇಳಿದಳು. ‘ಮಾಸಲಾಣಿ ಆಗಲಿ, ಇಷ್ಟೇಕೆ ಅವಸರ’ ಎಂದು ಉತ್ತರ ಬಂದಿತು. ಭೀಮರಾಯರು ಹಾದಿನೋಡುವಷ್ಟು ನೋಡಿ

ಕಳಿಸಿರೆಂಸು ಒಂದು ಪತ್ರಹಾಕಿದರು. ಅದಕ್ಕೆ ತಪ್ಪಿಸಾಟದ ಉತ್ತರ ಹೋಯಿತು. ಇದು ಉಪಯೋಗವಿಲ್ಲೆಂದು ಒಮ್ಮೆ ರಜೆ ತಗೊಂಡು ಭೀಮ ರಾಯರು ತಾವೇ ಕನಕಾಪುರಕ್ಕೆ ಬಂದುಬಿಟ್ಟರು. ಆದರೆ ಅಷ್ಟರಲ್ಲಿ ಮನೆ ಯಲ್ಲಿ ಬಹಳ ರಸಕಸಿಯಾಗಿತ್ತು. ಎಲ್ಲರೂ ಕೂಡಿ ದಿನಾಲು ಸುಗುಣಾ ಬಾಯಿಯ ತಲೆಕುಕ್ಕಿ ಧಾರವಾಡಕ್ಕೆ ಹೋಗಬೇಡವೆಂದು ಗಂಟುಬಿದ್ದಿದ್ದರು. ಬಾಬೂರಾಯರ ಮಾತಿನ ಧರ್ತಿಯೂ ಈಗ ಬದಲಾಗಿತ್ತು. 'ನೋಡಿರಿ, ಭೀಮರಾಯರ, ಒಮ್ಮೆ ಅತ್ತಿಮನೆಗೆ ಬಂದ ಮ್ಯಾಲೆ ಸೋಕ್ಷ ಆಗಲಿ ಮೋಕ್ಷ ಆಗಲಿ, ಇಲ್ಲೇ ಇರಬೇಕು. ಇದು ಲೋಕದ ನಡಾವಳಿ ಹೌದಲ್ಲೊ? ನಮ್ಮ ಅವ್ವನೂ ಮುದಕಿ ಆಗ್ಯಾಳ. ದೊಡ್ಡ ಸಂಸಾರ. ಆಕಿಗೆ ಮಾಡೋದು ಮಟ್ಟೋದು ಆಗೋದುಲ್ಲ. ನಮ್ಮ ಮಕ್ಕಳನ್ನ ಹಚಿಗೊಂಡು ಸುಗುಣಾ ಬಾಯಿ ಇಲ್ಲೇ ಇರೋದು ವಾಸ್ತವಿಕ ಅಲ್ಲ?'

ಭೀಮರಾಯರಿಗೆ ಈ ಮಾತಿನಿಂದ ತಡೆಯಲಾರದ ಸಿಟ್ಟು ಮೈತುಂಬಿ ಒದರಾಡಿದರು. ಉಪಚಾರವೆಲ್ಲ ಅಳಿಯಿತು. 'ನಿಮ್ಮ ಮನೆಯೊಳಗೆ ಆಕಿ ಇರೋದು ಶಕ್ಯ ಇಲ್ಲ. ನೀವು ಆಕಿಗೆ ಒಂದು ಪಾಲು ಕೊಡರಿ, ಇಲ್ಲಂದರ ನಾವು ಆಕೆಗೆ ದಕ್ತಕಕೊಟ್ಟು ಪಾಲು ತಗೋತೀವಿ. ತಿಳೀತೇನು?' ಎಂದು ಬೆದರಿಕೆ ಹಾಕಿದರು.

'ಅದೆಂಗ ತಗೋತೀರಿ ನೋಡೋಣ. ಆದಕ್ಕs ಆಕಿನ್ನ ನಿಮ್ಮಸಿಗೆ ಕಳಸೋದುಲ್ಲ.' ಬಾಬುರಾಯರು ಅಷ್ಟೇ ಅಭ್ರಾಟದಿಂದ ಉತ್ತರ ಕೊಟ್ಟರು. ಮಾತಿಗೆ ಮಾತು ಬೆಳೆದು ತೀರ ಅಸ್ವಾರಸ್ಯಕ್ಕೆ ಇಟ್ಟಿತು. ಒಳಗೆ ಅದನ್ನು ಕೇಳು ತ್ತಿದ್ದ ಸುಗುಣಾಬಾಯಿ ಹೊಯ್ಕೊಂಡು ಅಳುತ್ತಿದ್ದಳು. ಭೀಮರಾಯರು ಅವಳ ಬಳಿ ಹೋಗಿ 'ಹೊರಡೋಣ ನಡೆ' ಯೆಂದು ಕರೆದರು. 'ಅದು ಹೇಗೆ ಹೊರಡತಾಳೆ ನೋಡೋಣ' ಎಂದು ಮನೆ ಮಂದಿಯೆಲ್ಲ ಮುಕುರಿತು. ಓಣಿ ಯಲ್ಲಿಯ ಜನವು ಓಡಿ ಬಂದಿತು. 'ನಾ ಒಲ್ಲೆ ಕಾಕಾ, ಇಲ್ಲೇ ಸಾಯತೀನಿ ಎಂದು ಸುಗುಣಾಬಾಯಿಯು ನೆಲಕ್ಕೆ ದೊಪ್ಪನೆ ಬಿದ್ದುಕೊಂಡಳು. ಬಲಾ ತ್ಕಾರದಿಂದ ಕರೆದೊಯ್ಯುವುದು ಒಳ್ಳೆಯದಲ್ಲವೆಂದು ಭೀಮರಾಯರು ಅವಳ ಆಶೆಯನ್ನೇ ಬಿಟ್ಟು ಧಾರವಾಡಕ್ಕೆ ಹೊರಟುಹೋದರು. ಅಲ್ಲಿ ಅವಳ ಕರುಣಾ ಕಥೆಯನ್ನು ಕೇಳಿ ವಾಮಣ್ಣ-ಪದ್ದಕ್ಕ ಮೊದಲಾಗಿ ಎಲ್ಲರೂ ಎದೆಗರಗಿದರು.

ಇತ್ತ ಸುಗುಣಾಬಾಯಿಯ ಸುತ್ತು ಮನೆಯಲ್ಲಿ ಒಂದು ವಿಚಿತ್ರವಾದ ಕಾವಲಿಟ್ಟಂತೆ ಇಟ್ಟರು. ಅವಳು ಎಲ್ಲಿ ತಪ್ಪಿಸಿಕೊಂಡು ಹೋಗುವಳೋ ಎಂದು ಎಲ್ಲರಿಗೂ ಹೆದರಿಕೆ. ಅವಳನ್ನು ಯಾವಾಗಲೂ ಕಣ್ಣಲ್ಲಿ ಎಣ್ಣೆಹಾಕಿ ಕೊಂಡು ನೋಡುತ್ತಿರಬೇಕೆಂದು ಬಾಬೂರಾಯರು ಮನೆಯ ಹೆಂಗಸರಿಗೆ ಹೇಳಿಬಿಟ್ಟರು. ಅದರಿಂದ ಅವಳ ಅತ್ತೆಯವರಿಗೂ ಉಳಿದ ಸೊಸೆಂದಿರಿಗೂ ಅವಳನ್ನು ಕಾಡಿಸುವುದಕ್ಕೆ ಇನ್ನಷ್ಟು ಸ್ಫೂರ್ತಿ ಬಂದಿತು. ಅವಳು ಎರಡು ಹೊತ್ತು ಊಟಮಾಡಿ ತನ್ನ ಗಂಡನ ಖೋಲಿಯಲ್ಲಿ ಹೋಗಿ ಅಳುತ್ತ ಕೂಡು ತ್ತಿದ್ದಳು. ಅದು ಸಹಸವಾಗದೆ ಅವಳನ್ನು ಏನಾದರೂ ಕೆಲಸಕ್ಕೆ ಕರೆಯುತ್ತಿ ದ್ದರು. ಆ ಕೆಲಸದಲ್ಲಿ ಕಸರು ತೆಗೆದು ಅವಳಿಗೆ ಥೀ ಥೂ ಅನ್ನುತ್ತಿದ್ದರು. ಅವಳಿಗೆ ಬದುಕು ನೂರುಪಟ್ಟು ಬೇಸರಾಯಿತು. ಒಂದು ರಾತ್ರಿ ಅತ್ತತ್ತು ಗಂಡನನ್ನು ನೆನೆದು ಒಂದು ಘೋರವಾದ ನಿಶ್ಚಯ ಮಾಡಿದಳು. ರಾತ್ರಿ ಏರಿತು. ಎಲ್ಲರೂ ಗಡದ್ದು ನಿದ್ದೆಯಲ್ಲಿರುವರು. ನಾಯಿಗಳು ಹೊರಗೆ ಓಣಿ ಓಣಿಯಲ್ಲಿ ಒದರುತ್ತಿರುತ್ತಿರುವವು. ಅದು ಅವಳಿಗೆ ಸಾವಿನ ಕರೆಯೆ ಎಂದು ತೋರಿತು. ಕನಕಾಪುರದ ಆಚೆ ಇದ್ದ ಒಂದು ದೊಡ್ಡ ಬಾವಿಯನ್ನು ನೆನೆ ಸುತ್ತ ಹಾಸಿಗೆಯಿಂದ ಎದ್ದು ತನ್ನ ಕೋಣೆಯ ಬಾಗಿಲನ್ನು ಜಗ್ಗಿದಳು. ಅದಕ್ಕೆ ಹೊರಚಿಲಕವು ಬಿದ್ದಿದೆ. ಹೊರಗೆ ಹೊಗಲು ಬರುವಂತಿಲ್ಲ. 'ಹಯ್ಯೋ ನನ್ನ ಸುಟ್ಟ ಹಣೆಬರಹವೇ ! ' ಎನ್ನುತ್ತ ಬಾಗಿಲ ಬಳಿಯ ನೆಲದ ಮೇಲೆ ಕಡ ಕೊಂಡು ಬಿದ್ದುಬಿಟ್ಟಳು.

---

## ಪ್ರಕರಣ ೧೦.

ವಾಮಣ್ಣನು ತನ್ನ ಭವಿಷ್ಯವನ್ನು ಕುರಿತು ಹಗಲಿರುಳು ಯೋಚಿಸು ತ್ತಿದ್ದನು. ತನ್ನ ಕಲ್ಪನೆಯ ಪಟದ ಮೇಲೆ ಏನೇನೊ ನಕಾಶಗಳನ್ನು ಬರೆದು ಅಳಿಸುತ್ತಿದ್ದನು. ಹೊಟ್ಟೆತುಂಬುವ ಮಟ್ಟಿಗೆ ತನಗೆ ಸಿಕ್ಕರೆ ಸಾಕು, ಕನ್ನ ಡದ ಸೇವೆಗೆ ತಾನು ಕಂಕಣ ಕಟ್ಟಿ ನಿಲ್ಲಬೇಕು ಎಂದೊಮ್ಮೆ ಅನಿಸುತ್ತಿತ್ತು. ಹೊಟ್ಟೆಪಾಡಿನ ವಿಚಾರ ಹಾಗು ಕನ್ನಡದ ಸೇವೆ ಇವೆರಡೂ ಕೂಡಿರುವ ಕಾಲವಿದಲ್ಲ ಎಂಬು ಇನ್ನೊಮ್ಮೆ ತೋರುತ್ತಿತ್ತು. ಹಾಗಾದರೆ ಎಲ್ಲಿಯಾದರೂ

ಹೊಟ್ಟೆ ಹೊರೆಯುವುದಕ್ಕೆ ಮಾತ್ರ ಚಾಕರಿ ಮಾಡಬೇಕು. ಆದರೆ ಸರಕಾರದ ದಾಸ್ಯವು ಬೇಡ. ಒಮ್ಮೆ ಈ ನಿರ್ಣಯ ಮಾಡಿ ಖಾಸಗೀ ಇಂಗ್ಲಿಶ್ ಶಾಲೆಯಲ್ಲಿ ಮಾಸ್ತರನಾಗಬೇಕೆಂದು ಯತ್ನಮಾಡಿದನು. ಅಲ್ಲಿಯೂ ವಿಚಿತ್ರ ಪರಿಸ್ಥಿತಿ ಕಂಡುಬಂದಿತು. ತಾನು ಹಿಂದೆ ಕಲೆಕ್ಟರ ಕಚೇರಿಯಲ್ಲಿ ಇದ್ದಾಗ ಅಲ್ಲಿ ಮಾತ್ರ ಪಗಾರವಿಲ್ಲದ ಉಮೇದವಾರರಿದ್ದರು. ಈಗ ಶಾಲೆಗಳಲ್ಲಿಯೂ ಅಂಥ ಉಮೇದವಾರರು ಹೆಚ್ಚಿರುವುದನ್ನು ನೋಡಿ ಅವನು ಆಶ್ಚರ್ಯಪಟ್ಟನು. ತನ್ನಂಥ ನಿರುದ್ಯೋಗಿಗಳೆಲ್ಲ ಬರೆತ ಬಾವಿಯ ಮುಂದೆ ಪರಟೆ ಹಿಡಿದು ಸಾಲಾಗಿ ಕುಳಿತಂತೆ ಅವನಿಗೆ ಭಾಸವಾಯಿತು. ಯಾವಾಗ ಸೆಲೆ ಒಡೆಯುವುದೋ, ಬಾವಿಯು ನೀರು ತುಂಬಿ ತುಳುಕಾಡುವುದೋ ಎಂದು ಆಶೆಯ ಕಣ್ಣಿಂದ ಆಕಾಶವನ್ನು ನೋಡಿದನು. ಹೇಗೂ ಹೊಟ್ಟೆಗೆ ನೆಲೆಯಿಲ್ಲ ಎಂದ ಮೇಲೆ ಕನ್ನಡತಾಯಿಯ ಉಡಿಯಲ್ಲೇ ಯಾಕೆ ಬಿದ್ದು ಸಾಯಬಾರದು? ಎಂದು ಘೋರವಾದ ನಿರ್ಧಾರವನ್ನು ಮಾಡಿದನು.

ಹೀಗಿರುವಾಗ ಒಂದು ದಿನ ವಾಮಣ್ಣನ ಮನೆಯನ್ನು ಹುಡುಕಿಕೊಂಡು ಅವನ ಮಿತ್ರ ಮುರಲಿಯು ಸಂತೋಷದಿಂದ ಕೇಕೆ ಹಾಕುತ್ತ ಅಸ್ತವ್ಯಸ್ತವಾಗಿ ಕೂದಲು ಕೆದರಿಕೊಂಡು ಬಂದನು. ವಾಮಣ್ಣನು 'ಏನು ಸುದ್ದಿ, ಮುರಲಿ!' ಎಂದು ಕೇಳುವಷ್ಟರಲ್ಲಿ ತನ್ನ ಕೈಯೊಳಗಿನ ದೊಡ್ಡ ಪುಡಿಕಿಯೊಂದನ್ನು ಮುರಲಿಯು ಅವನ ಕೈಯಲ್ಲಿಟ್ಟನು. ವಾಮಣ್ಣನು ಅದನ್ನೊಡೆದು ನೋಡಲಾಗಿ ಲಾಯಿನಬಜಾರಿನ ಬಿಸಿ ಬಿಸಿ ಪೇಢೆಗಳು ಇದ್ದವು. ಅದು ಯಾಕೆ ಏನೆಂಬುದನ್ನು ಕೇಳುವ ಮೊದಲು ವಾಮಣ್ಣನು 'ಅಭಿನಂದನೆಗಳು!' ಎಂದನು.

'ನಿನಗೆ ಹೇಗೆ ತಿಳಿಯಿತು?' ಎಂದು ಮುರಲಿ ಕೇಳಿದನು.

'ನನಗೆ ಗೊತ್ತು. ಎಲ್ಲಿಯಾದರೂ ಟೆನಿಸ್ ಮ್ಯಾಚ್ ಗೆದ್ದಿರಬೇಕು, ಯಾವಳಾದರೂ ಮಿಸ್‌ಳ ಕೂಡ!' ವಾಮಣ್ಣನು ನಕ್ಕು ಹೇಳಿದನು.

'ಛೇ ಛೇ ವಾಮಣ್ಣಾ, ಅದಲ್ಲ.'

'ಹಾಗಾದರೇನು ಗಂಡೋ ಹೆಣ್ಣೋ?'

'ಒಂದು ಗಂಡು, ಒಂದು ಹೆಣ್ಣು.'

'ಅಂದರೇನು ಮೊದಲಿಗೆ ಅವಳಿ-ಜವಳಿ ಹುಟ್ಟಿದವನ್ನಬಾರದೇ?'

'ಅಲ್ಲ ವಾಮಣ್ಣಾ, ಮೊನ್ನಿನ ಆಕ್ಟೋಬರ ಚ್ಯಾನ್ಸಿನ ಪರೀಕ್ಷೆಗೆ ಕುಳಿತು ಪಾಸಾದದ್ದು ಈ ಗಂಡು, ಆವಳು ಹಡೆದದ್ದು ಹೆಣ್ಣು! ಎರಡೂ ಈವತ್ತೇ ಬಂದವು. ಯಾರಿಗೆ ಈ ಸಂತೋಷದ ಸುದ್ದಿ ಹೇಳಬೇಕು ಅನ್ನತಿದ್ದೆ. ಅಷ್ಟರಲ್ಲಿ ನೀ ಮುಂಬಯಿಯಿಂದ ಇಲ್ಲಿಗೆ ಬಂದದ್ದು ತಿಳಿಯಿತು. ಅಲ್ಲಿಂದ ಪೇಢೆ ತಗೊಂಡು ನಿನ್ನ ಕಡೆ ಬಂದೆ.'

'ಸಂತೋಷವಾಯಿತು ಮುರಲಿ. ಅಂತೂ ಸಂಸಾರ ಸುರುವಾಯಿತು ಅನ್ನಬಾರದೇ?'

'ಇನ್ನೇನು ವಾಮಣ್ಣಾ? ಈ ಪರೀಕ್ಷೆಯ ಕುಸ್ತೀಕಣದಿಂದ ಒಮ್ಮೆ ಹೊರಬಿದ್ದೆ. ಇನ್ನ ಮ್ಯಾಲೆ ಈ ಬಿಏ ಡಿಗ್ರೀ ಹಚಿಕೊಂಡು ಎಲ್ಲ್ಯಾದರೂ ಕೆಲಸ ಹಿಡಿದುಬಿಡತೀನಿ.'

'ಎಲ್ಲಿ ಕೆಲಸ ಮಾಡಬೇಕೆಂದು ನಿನ್ನ ವಿಚಾರವಿದೆ?' ವಾಮಣ್ಣನು ಸಹಜ ಕುತೂಹಲದಿಂದ ಕೇಳಿದನು.

'ನನ್ನ ಮನಸ್ಸಿನೊಳಗೆ, ವಾಮಣ್ಣಾ, ನಿನ್ನಂತೆ ಮುಂಬಯಿಯೊಳಗೆ ಇರಬೇಕಂತ ಆದೆ. ಅಂದರೇ ಖರೇ ಸುಧಾರಣೆಯ ಸಾಮ್ರಾಜ್ಯದೊಳಗೆ ಇದ್ದಂತೆ. ಅಲ್ಲೇ ಸೆಕ್ರೆಟರಿಯಟ್‌ದೊಳಗಾಗಲಿ ಎಲ್ಲೇ ಆಗಲಿ ಸರಕಾರೀ ಕೆಲಸ ಹಿಡಿಯಬೇಕು. ಅದೇ ಸೇಫ ನೋಡು ವಾಮಣ್ಣಾ.'

ಮುರಲಿಯ ಮಾತಿನಿಂದ ವಾಮಣ್ಣನಿಗೆ ಕೆಡುಕೆನಿಸಿತು. 'ಮುರಲೀ, ನಾನು ಮುಂಬಯಿಯೊಳಗೆ ನನಗೆ ಬೇಕೆಂದು ಇರಲಿಲ್ಲ ತಿಳಿಯಿತೇ? ಅಲ್ಲಿಗೆ ಪರದೇಶಿಯಾಗಿ ಬಿಕ್ಕೆ ಬೇಡುತ್ತ ಹೋಗಿದ್ದೆ. ಈಗ ತಿರುಗಿ ನನ್ನ ಕನ್ನಡ ದೇಶಕ್ಕೆ ಬಂದು ಇಲ್ಲಿಯೇ ಬದುಕಬೇಕೆನ್ನುತ್ತೇನೆ. ಮುರಲೀ, ನಿನಗೂ ಹಾಗೇ ಅನಿಸುವದಿಲ್ಲವೇ? ನಮ್ಮ ನಾಡಿನಲ್ಲಿಯೇ ಇದ್ದು ನಮ್ಮ ಜನಕ್ಕೆ ನೀನು ಉಪಯೋಗವಾಗಬಾರದೇ?'

'ಡ್ಯಾಮಿಟ್, ವಾಮಣ್ಣಾ. ಅದೆಲ್ಲಾ ನಿನ್ನ ತಲೆಯೊಳಗಿನ ಹುಚ್ಚು. ನನಗದು ಸೇರುವದಿಲ್ಲ. ನಮಗೆ ವಿಶಾಲದೃಷ್ಟಿ ಬೇಕು ವಾಮಣ್ಣಾ. ನಾನಂತೂ ಮುಂಬಯಿಗೆ ಹೋಗತೀನಿ, ಸರಕಾರೀ ಕೆಲಸ ಹಿಡೀತೀನಿ, ಹೆಂಡತಿನ್ನ ಒಬ್ಬಾಕಿನ್ನ ಕರಕೊಂಡು ಹೋಗಿ ಅಪ್ಟುಡೇಟ ಸಂಸಾರ ಹೂಡತೀನಿ. ಈ

ಕನ್ನಡ, ಹಿಂದುಸ್ತಾನ ಇವೆಲ್ಲಾ ನಮಗೆಲ್ಲಾ ಬೇಕಾಗಿಲ್ಲ. ನಮಗೆ ಆರಾಮ ಬೇಕು ಆರಾಮ!'

'ಹಾಗೇ ಆಗಲಿ ಮುರಲಿ. ಆದರೆ ಹೆಂಡತಿನ್ನ ಒಬ್ಬಾಕಿನ್ನ ಕರಕೊಂಡು ಹೋಗುವಾಗ ಆ ಕೂಸು ಬಿಟ್ಟು ಹೋಗತೀ ಹೌದಲ್ಲೊ!'

'ಛೀ ಛೀ ಕೂಸು ಬರತದೆ. ಹೆಣ್ಣೇನು ಗಂಡೇನು ಹೊಸ ಮಂದಿಗೆ ಎಲ್ಲಾ ಒಂದೇ. ಆ ಹುಡುಗಿನ್ನ ಇಂಗ್ಲಿಶ್ ಸಾಲೆಗೆ ಹಾಕತೀನಿ, ಬಿ ಎ ಮಾಡಸ ತೀನಿ. ಆವಳಿಗೆ ಪ್ರೀತಿ ವಿವಾಹ ಮಾಡಿಕೊಳಿಕ್ಕೆ ಸ್ವಾತಂತ್ರ್ಯ ಕೊಡತೀನಿ.'

ಹೀಗೆ ಮುರಲಿಯ ಭವಿಷ್ಯಸ್ವಪ್ನದ ಕಥನವು ವೇಗದಿಂದ ಮುಂದರಿ ಯುತ್ತಿತ್ತು. ವಾಮಣ್ಣನಿಗೆ ಅದನ್ನು ಕೇಳುತ್ತ ಹೋಗುವುದು ಇಷ್ಟವೆನಿಸ ಲಿಲ್ಲ. ಅಷ್ಟಕ್ಕೆ ತಡೆದುಬಿಟ್ಟನು. 'ಆಗಲಿ, ನಿನ್ನಂತೆ ಆಗಲಿ, ಮುರಲಿ. ನಮ್ಮ ನಾಡಿನ ದುರ್ವಿಧಿ ದೇವತೆಯು ನಿನ್ನ ಸುಂದರ ಸ್ವಪ್ನಗಳನ್ನು ಕಟ್ಟುತ್ತಿರು ವಳು; ಕಟ್ಟಲಿ, ಕಟ್ಟಲಿ.' ಎಂದು ನಿಟ್ಟುಸಿರು ಬಿಟ್ಟನು. ಮತ್ತೆ ಎಷ್ಟೋ ಜೊಳ್ಳು ಮಾತುಗಳನ್ನಾಡಿ ಮುರಲಿಯು ಕುಣಿದಾಡುತ್ತ ತನ್ನ ಬೀಡಿಗೆ ಹೋದನು. ಅವನು ಮತ್ತು ಅವನಂಥ ಅನೇಕ ತರುಣ ಮಿತ್ರರ ಬೇಕು-ಬೇಡ ಗಳನ್ನು ನೆನೆದು ವಾಮಣ್ಣನು ಇಡೀ ದಿನವೆಲ್ಲ ಕ್ಷುಬ್ಧವಾದನು; 'ಕನ್ನಡದ ಉದ್ಧಾರ ಕಾಲವು ಇನ್ನೂ ಬಂದಿಲ್ಲ' ವೆಂದು ಬಲು ನೊಂದನು.

ಅಂದೇ ಸಂಜೆಗೆ ಕದಡಿದ ಮನಸ್ಸಿಗೆ ಶಾಂತಿಯನ್ನು ಬೀರಲಿಕ್ಕೆಂದು ತನ್ನ ಪಾಡಿಕೆಯಂತೆ ವಾಮಣ್ಣನು ಆನಂದಮೂರ್ತಿಗಳ ತೋಟಕ್ಕೆ ಹೋದನು. ಮೊದಲಿನಂತೆ ಅವರು ಆರೋಗ್ಯಹೊಂದಿ ತೋಟದಲ್ಲಿಯ ತಮ್ಮ ಕೆಲಸಗಳನ್ನು ಕೈಕೊಂಡಿದ್ದರು. ವಾಮಣ್ಣನು ಬಂದೊಡನೆ ತಮ್ಮ ಗುಡಿಸಲ ಬಳಿಯ ಮಾವಿನ ಮರದ ಕೆಳಗೆ ಒಂದು ಚಾಪೆಯನ್ನು ಹಾಸಿ ತಾವೂ ಅವ ನೊಡನೆ ಕುಳಿತುಕೊಂಡರು. ಮುಳುಗುತ್ತಿರುವ ಸೂರ್ಯನು ತಾನು ಮೋಡದೊಳಗೆ ಹುಗಿದುಕೊಂಡು ಸುತ್ತುಕಡೆಗೆ ತನ್ನ ಕಿರಣದ ಬಾಣಾವಳಿ ಯನ್ನು ತೂರಿದ್ದನು. ಬಣ್ಣಗಾರನಿಗೆ ಅರಿದಾದ ಒಂದು ನೀಲಿ, ಒಂದು ಕೇಸರಿ ಮೊದಲಾದ ಬಣ್ಣದ ಸೊಬಗು ಆಕಾಶದಲ್ಲಿ ಸೂರೆಯಾಗಿತ್ತು. ಇಬ್ಬರೂ ಕೆಲ ಹೊತ್ತು ತಟಸ್ಥರಾಗಿ ಕುಳಿತು ಸಂಜೆಮುಗಿಲನ್ನು ನೋಡುತ್ತಿದ್ದರು. ಆ

ನೋಟದಲ್ಲಿಯೇ ಒಂದು ಶಾಂತಿಯು ಹುಟ್ಟಿ ರಾಮಣ್ಣನ ಮನಸ್ಸನ್ನು ಅರಳಿಸಿತು. ಯಾವುದೋ ಹಾಡನ್ನು ಗುಣುಗುಣಿಸಹತ್ತಿದನು.

'ಏನು ರಾಮಣ್ಣ, ನೀನೂ ಕವಿತೆ ಬರೆದಂತೆ ಕಾಣತದೆ?' ಎಂದು ಮೂರ್ತಿಗಳು ಕೇಳಿದರು.

'ಹೌದು, ನೀವು ಕಾಗದದ ಮೇಲೆ ಬರೆದದ್ದನ್ನು ನಾನು ನನ್ನ ಬಾಯಲ್ಲಿ ಬರೆದಿದ್ದೇನೆ' ಎಂದು ರಾಮಣ್ಣ ನಕ್ಕನು. ಹೀಗೆ ವಿನೋದದಲ್ಲಿ ಮಾತು ಮೊದಲಾಯಿತು. ರಾಷ್ಟ್ರೀಯ ಸಭೆಯು ಹೊಸ ನಿರ್ಧಾರದಿಂದ ಚಳವಳಿಯೆಲ್ಲ ನಿಂತದ್ದರಿಂದ ತಮ್ಮ ಕವಿತೆಯ ವಹಿಗಳು ತಿರುಗಿ ಮನೆಗೆ ಬಂದವೆಂದು ಮೂರ್ತಿಗಳು ಹೇಳಿದರು. ಅವುಗಳಲ್ಲಿ ಕೆಲವನ್ನು ಕೇಳಬೇಕೆಂದು ರಾಮಣ್ಣನು ಅತ್ಯಾತುರನಾದನು. ಮೂರ್ತಿಗಳು ವಹಿ ತಂದು ಬಂದೆರಡು ಓದಿದರು, ರಾಮಣ್ಣನು ಕೇಳಿ ಹುರಿಗೊಂಡನು. ಇಂದಿನ ದುರಂತದುಃಖ, ನಾಳೆಯ ಸುಖಸ್ವಪ್ನ ಇವುಗಳನ್ನು ಸರಿಯಾಗಿ ಬೆರಸುವ 'ಕನ್ನಡಕೋಗಿಲೆ'ಯ ಕೈವಾಡಕ್ಕೆ ಎಂದಿನಂತೆ ಬೆರಗಾದನು. ತನ್ನ ಮುಂದಿನ ವಿಚಾರಗಳನ್ನು ರಾಮಣ್ಣನು ಮೂರ್ತಿಗಳ ಇದಿರು ಇಟ್ಟನು. ಅವುಗಳ ಊಹಾಪೋಹವಾಯಿತು. ಅದರಲ್ಲಿ ಒಂದು ಹೊಸ ವಿಚಾರವು ಒತ್ತಡದಿಂದ ರಾಮಣ್ಣನಲ್ಲಿ ಉದಯಿಸಿತು. ಮೂರ್ತಿಗಳಿಗೆ ಕೇಳಿಬಿಟ್ಟನು: 'ಮೂರ್ತಿಗಳೇ, ನನ್ನ ಹೊಟ್ಟೆ ಹೆಚ್ಚಿನದಲ್ಲ. ಕನ್ನಡಕ್ಕಾಗಿ ಏನಾದರೂ ಕೆಲಸಮಾಡಬೇಕೆಂದು ನನ್ನ ಜೀವ ಹಾತೊರೆಯುತ್ತದೆ. ಆದರೆ ನನಗೆ ಧೈರ್ಯವಿಲ್ಲ. ನೀವೇಕೆ ಮುಂದೆ ಬಿದ್ದು ನನಗೆ ದಾರಿತೋರಬಾರದು? ನೀವು ಮುಂದಾದರೆ ನಾನು ಹಿಂದಿರುವೆ.'

ಮೂರ್ತಿಗಳಿಗೆ ಈ ಬಗೆಯ ವಿಚಾರವು ನೂರಾರು ಬಾರಿ ಬಂದು ಹೋಗಿರಬೇಕು. ಅಂತೇ ಅವರು ಶಾಂತ ಚಿತ್ತದಿಂದ ಉತ್ತರ ಕೊಟ್ಟರು: 'ರಾಮಣ್ಣ, ನೀನು ಕೇಳುವದೆಲ್ಲ ಸರಿಯೇ. ಪ್ರತಿಯೊಂದು ದಿನವೂ ನನ್ನ ಕೃತಘ್ನತೆಗಾಗಿ ನಾನು ಕೊರಗುತ್ತಿದ್ದೇನೆ. ಕನ್ನಡಕ್ಕೆ ಕೆಲಸ ಮಾಡುವವರಿಲ್ಲ, ನಾನು ಕೈಲಾದಷ್ಟು ಮಾಡಬೇಕು ಎನ್ನುತ್ತಿರುವೆ. ಆದರೆ ನನ್ನ ಶಕ್ತಿ ಸಾಲದಾಗಿದೆಯೋ ಏನೊ, ಯಾರೋ ನನ್ನನ್ನು ಜಗ್ಗಿ ನಿಲ್ಲಿಸಿದಂತಾಗುತ್ತದೆ. ನಾನೇನು ಮಾಡಲಿ ಹೇಳು?'

'ನನಗೂ ತಿಳಿಯದು, ಮೂರ್ತಿಗಳೇ. ನಾನೇನು ಮಾಡಲಿ ಎಂದು ನಿಮ್ಮನ್ನು ಕೇಳಲು ಬಂದಿದ್ದೇನೆ.'

'ಈಗ ಕಾಲ ಬಂದಿಲ್ಲವೇನೊ ವಾಮಣ್ಣ. ನಿನ್ನ ಪ್ರಪಂಚ ಬೆಳೆಯು ತ್ತಿದೆ. ಎಲ್ಲಿಯಾದರೂ ಕೆಲಸ ದೊರಕಿಸಿಕೊಂಡು ಇದ್ದುಬಿಡು.'

'ಆದರೆ ಕನ್ನಡವು ಸುತ್ತುಗಟ್ಟಿ ಕರೆದರೆ?'

'ಕರೆದರೆ ಹೊರಡು. ಕೆಲಸ ಮಾಡು. ನೀನು ಮುಂದಾದರೆ ನಾನು ಹಿಂದೆ ಬಾದೇನು. ಯಾರಿಗೆ ಗೊತ್ತು? ಆದರೆ ಒಂದು ಮಾತು. ಕೆಲಸದ ವಿವೇಕವಿಟ್ಟುಕೋ. ಕನ್ನಡದ ಅನ್ಯಾಯವನ್ನು ತೊಡೆಯುವದರಲ್ಲಿ ಅನ್ಯರಿಗೆ ಅನ್ಯಾಯವಾಗಕೂಡದು. ಕನ್ನಡದ ಚಳವಳಿಯಲ್ಲಿ ಭಾರತದ, ಅದೇಕೆ ಮಾನವ ಜಾತಿಯ ಹಿತವಿದೆ ಎನ್ನುವಂತೆ ದುಡಿಯುವವರು ಬೇಕು.'

ಹೀಗೆ ಕೆಲಹೊತ್ತು ಮಾತುಗಳಾದವು. ಪವಿತ್ರವಾದ ಮಂತ್ರೋಪ ದೇಶವನ್ನು ಕೇಳಿಕೊಂಡಂತೆ ಅವನ್ನು ಕೇಳಿಕೊಂಡು ವಾಮಣ್ಣನು ಮೂರ್ತಿ ಗಳಿಗೆ ಬೀಳ್ಕೊಂಡು ಹೊರಟನು. ಅವನು ಊರೊಳಗೆ ಸೇರುವ ಹೊತ್ತಿಗೆ ಎಂಟು ಗಂಟೆಯಾಗಲು ಬಂದಿತ್ತು. ಲಗುಬಗೆಯಿಂದ ನಡೆದನು. ಇಷ್ಟರಲ್ಲಿ ಮುನಸೀಪಾಲಿಟಿಯ ಮಗ್ಗಲಿನ ದೊಡ್ಡ ಬಯಲಲ್ಲಿ ಜನಸಂದಣಿಯೂ ಗ್ಯಾಸಿನ ದೀಪಗಳೂ ಕಂಡವು. ಹತ್ತಿರ ಹೋದಂತೆ ಯಾರೋ ಗಟ್ಟಿ ದನಿಯಲ್ಲಿ ಅತ್ಯಂತಾವೇಶದಿಂದ ಭಾಷಣ ಮಾಡುತ್ತಿರುವಂತೆ ತೋರಿತು. ಧ್ವನಿಯು ಪರಿಚಿತವೆಂದು ವಾಮಣ್ಣನಿಗೆ ಅನಿಸಿತು. ಸಭೆಯ ತುದಿಗೆ ನಿಂತು ಕೇಳಿದನು. ಹಿಂದೆ ಐದಾರು ವರ್ಷಗಳ ಹಿಂದೆ ತನ್ನ ಕಾಲೇಜಿನ ಸಂಘದ ಉತ್ಸವದಲ್ಲಿ ಉಜ್ವಲ ಭಾಷಣ ಮಾಡಿದ ಕಲ್ಯಾಣರಾಯರೇ ಇವರೆಂದು ಅವನಿಗೆ ನೆನ ಪಾಯಿತು. ಭಾಷಣವನ್ನು ಪೂರ ಕೇಳಬೇಕೆಂದು ಬಯಸಿ ಅಲ್ಲಿಯೇ ನಿಂತನು. ಸಭಿಕರಲ್ಲಿ ಉತ್ಸಾಹವು ಹೊರಸೂಸುತ್ತಿತ್ತು. ಎರಡು ಮೂರು ನಿಮಿಷ ಕ್ಕೊಮ್ಮೆ ಭಾಷಣದ ಕಿಡಿನುಡಿಗಳಿಗೆ ಎಲ್ಲಾ ಕಡೆಯಿಂದ ಚಪ್ಪಾಳೆ ಬೀಳುತ್ತಿ ದ್ದವು. ಭಾಷಣದ ಮುಖ್ಯಾಂಶಗಳು ಹೀಗಿದ್ದವು: 'ಕನ್ನಡನಾಡುನುಡಿಗಳ ಮೇಲೆ ಆಗುವ ವಜ್ರಾಘಾತದಿಂದ ಕನ್ನಡಿಗರಿಗೆ ಇನ್ನೂ ಎಚ್ಚರ ಹುಟ್ಟಿಲ್ಲ. ಈವರೆಗೆ ರಾಷ್ಟ್ರಸ್ವಾತಂತ್ರ್ಯದ ಕಾರ್ಯವು ಮುಖ್ಯವೆಂದು ನಮ್ಮ ಅನೇಕ ಮುಂದಾಳುಗಳೂ ಕಾರ್ಯಕರ್ತರೂ ಅದರಲ್ಲಿ ತೊಡಗಿದ್ದರು. ಇನ್ನು ದೊರೆತ

ಸ್ವಾತಂತ್ರ್ಯವನ್ನು ಹಂಚಿಕೊಳ್ಳುವದರಲ್ಲಿ ತೊಡಗುವರು. ಕನ್ನಡದ ಮೇಲೆ ಅವರ ಲಕ್ಷ್ಯವಿಲ್ಲ. ದಿನೇ ದಿನೇ ಕನ್ನಡನಾಡು ಸೊರಗುತ್ತಿದೆ. ಮರಾಟಿಗರ ಮೋಹಿನಿಯಿಂದ ನಮ್ಮ ಒಂದು ದಿಕ್ಕಿನ ಗಡಿನಾಡು ಭಸ್ಮಾಸುರನಂತೆ ಕುಣಿಯುತ್ತಿದೆ. ಇನ್ನೊಂದು ಕಡೆಗೆ ತೆಲುಗರು ಬಲಿಷ್ಠರಾಗಿದ್ದು ದುಶ್ಶಾಸನನು ದ್ರೌಪದಿಯ ಸೀರೆ ಸೆಳೆದಂತೆ ಕನ್ನಡ ಸೀಮೆಯನ್ನು ಸೆಳೆಯುತ್ತಿರುವರು. ಭಾರತಕ್ಕೆ ಸ್ವಾತಂತ್ರ್ಯ ಸಿಗುವವರೆಗೆ ಕನ್ನಡಿಗರು ತಡೆದರೆ ಅವರು ಕನ್ನಡಿಗರಾಗಿ ಉಳಿಯುವದಿಲ್ಲ. ಕನ್ನಡ ದೇಶವು ನಿರ್ನಾಮವಾದೀತು. ಅಂತೇ ಈಗ ಕನ್ನಡನಾಡಿನ ಏಕೀಕರಣಕ್ಕಾಗಿ ನಾವು ಜೋರಾದ ಚಳವಳಿ ಮಾಡಬೇಕು. ಈವರೆಗೆ ಆದ ಕೆಲಸವು ಸಾಲದು. ಯಾವ ಬಗೆಯಿಂದ ಕೆಲಸ ಸಾಗಿಸಬೇಕೆಂಬುದನ್ನು ಗೊತ್ತುಮಾಡುವದಕ್ಕಾಗಿ ಕನ್ನಡ ಸಂಸ್ಕೃತಿಯ ಸಂಮೇಳನವೊಂದನ್ನು ಸಮೀಪದಲ್ಲಿ ಕೂಡಿಸಬೇಕೆಂದು ಸಂಕಲ್ಪ ಮಾಡಿದೆ. ಇದಕ್ಕೆ ಎಲ್ಲ ಕನ್ನಡಿಗರ ಸಹಾಯ-ಸಹಾನುಭೂತಿಗಳು ಬೇಕು. ವಿಶೇಷವಾಗಿ, ಕನ್ನಡಕ್ಕೆಂದು ಹಗಲಿರುಳು ದುಡಿಯುವ ಯುವಕರು ಬೇಕು. '

ವಾಮಣ್ಣನ ಮೈಯಲ್ಲಿ ಮಿಂಚಿನ ಸಂಚಾರವಾಯಿತು. ' ಕನ್ನಡಕ್ಕೆ ನಾನಿನ್ನು ಮೀಸಲೆ ' ಂದು ಕೊನೆಯ ನಿರ್ಧಾರವನ್ನು ಮಾಡಿಬಿಟ್ಟನು. ಸಭೆ ಮುಗಿದೊಡನೆ ಅಲ್ಲಿಯೇ ಕಲ್ಯಾಣರಾಯರನ್ನು ಕಂಡು ಅವರಿಗೆ ತಿಳಿಸಿದನು. ಮರುದಿನ ತಮ್ಮನ್ನು ಕಾಣಬೇಕೆಂದು ಅವರು ಹೇಳಿದರು. ಯಾವುದೋ ಹುರುಪುದುಂಬಿದ ಹೃದಯದಿಂದ ಮನೆ ಸೇರಿದನು. ಊಟದ ಹೊತ್ತು ಮೀರಿ ಹೋಗಿತ್ತು. ಭೀಮರಾಯರು ಸಿಡುಕಿನಿಂದ ಒದರಾಡಿ ತಮ್ಮ ಊಟವನ್ನು ಮುಗಿಸಿಬಿಟ್ಟಿದ್ದರು. ಪದ್ಮಕ್ಕನೊಬ್ಬಳೇ ತೂಕಡಿಸುತ್ತ ಕೂತಿದ್ದಳು. ವಾಮಣ್ಣನು ತನ್ನ ಆವೇಶದಲ್ಲಿಯೇ ಮುಳುಗಿ ಅವಸರದಿಂದ ಊಟಮಾಡಿ ತನ್ನ ಕೋಣೆಗೆ ಹೋದನು. ಪದ್ಮಕ್ಕ ತನ್ನ ಊಟ-ಕೆಲಸಗಳನ್ನು ತೀರಿಸಿಬಂದಳು. ತನ್ನ ಗಂಡನಿಗೆ ಕೆಲಸ ಹತ್ತಲಿಲ್ಲವೆಂಬ ಚಿಂತೆಯಿಂದ ಅವಳ ಜೀವನದಲ್ಲಿ ಔದಾಸೀನ್ಯವು ಬಂದಿತ್ತು. ಬೆಳೆಯುತ್ತಿರುವ ಗೋಪಾಲನನ್ನು ನೋಡಿ ಆದೇನೊ ಒಮ್ಮೊಮ್ಮೆ ಸುಖಬಡುತ್ತಿದ್ದಳು. ಸಭೆಯ ಸಮಾಚಾರವನ್ನು ವಾಮಣ್ಣ ಹೇಳಿದನು. ಅದು ಯಾವುದೂ ಅವಳ ತಲೆಸೇರಲಿಲ್ಲ. ಕೆಲಸದ್ದೇನಾಯಿತೆಂದು ಕೇಳಿದಳು. ಕನ್ನಡವೇ ತನ್ನ ಮುಂದಿನ ಕೆಲಸವೆಂದು ಉತ್ತರ ಬಂದಿತು. ಇಂಥ ಮಾತು ಕೇಳಿ ಕೇಳಿ ಅವಳಿಗೆ ಬೇಸರವಾಗಿತ್ತು.

'ಏನು ಹೀಗಂದರ? ಹಗಲೆಲ್ಲ ಹುಚ್ಚುಚ್ಚು ಆಡೋದು? ಮನಿ ಆದ ಅಂತ ನೆಟ್ಟಗ ನಡದದ.'

'ನಡೆದಷ್ಟು ದಿನ ನಡೀತದೆ. ಮುಂದೆ ನಿನಗೆ ಅಪ್ಪನಿದ್ದಾನೆ, ನನಗೆ ದೇವರಿದ್ದಾನೆ.'

ವಾಮಣ್ಣನು ತನಗೆ ಬೇಡಾಗಿ ಕಸಿವಿಸಿಯಿಂದ ಈ ಮಾತು ಆಡಿದನು. ಇದರ ತೀವ್ರ ಪರಿಣಾಮವು ಪದ್ದಕ್ಕನ ಮೇಲಾಯಿತು. ಮುಳುಮುಳು ಅತ್ತಳು. 'ನಿಮ್ಮನ್ನ ಬಿಟ್ಟು ನಾ ಹೆಂಗಿರಲಿ? ಎಲ್ಲ್ಯಾರ ಇಪ್ಪತ್ತು ರೂಪಾಯಿ ಪಗಾರದ್ದಾದರೂ ಚಿಂತಿಲ್ಲ ಕೆಲಸ ನೋಡಿರಿ, ಮನೀ ಮಾಡಿರಿ, ಇಬ್ಬರೂ ಕೂಡಿರೋಣ' ಎಂದು ಮುಂತಾಗಿ ಅಂಗಲಾಚಿ ಬೇಡಿಕೊಂಡಳು. ಅವಳ ಹೇಳಿಕೆ ಒಪ್ಪದಿದ್ದರೂ ಅದರಲ್ಲಿ ತುಂಬಿದ ಒಲವು ವಾಮಣ್ಣನನ್ನು ಸೆರೆಹಿಡಿಯಿತು. ತನ್ನ ಪದ್ಮೆಯ ಮನಸ್ಸು ಹಳೆಯ ಪಡಿಯಚ್ಚಿನಲ್ಲಿ ನಿಂತಿದ್ದರೂ ಅವಳು ತನ್ನ ವಿಷಯದಲ್ಲಿ ನಿಜವಾದ ಅಂತಃಕರಣವುಳ್ಳವಳೆಂದು ಹಲವು ಸಂದರ್ಭಗಳಲ್ಲಿ ಅನಿಸುತ್ತ ಬಂದ ಮಾತು ಈಗ ಮತ್ತೆ ಬಲವತ್ತರವಾಗಿ ಅನಿಸಿತು. ಆದರಿಂದ ಮೊದಲಿನ ನಿಶ್ಚಯವು ತುಸು ಕೊತ್ತು ಅಲುಗಾಡಿದಂತಾಯಿತು. ಮತ್ತೆ ಹೊಯ್ದಾಡಿದನು.

'ನಾನೇನು ಮಾಡಲಿ? ಕೆಲಸ ಸಿಗವಲ್ಲದು' ಎಂದನು.

ಇಬ್ಬರೂ ಮೌನವಾದರು. ಮರಳಿ ಮೆಲ್ಲನೆ ವಾಮಣ್ಣನ ಆವೇಶವೂ ಧೈರ್ಯವೂ ಉಕ್ಕಿದವು. ಕನ್ನಡದ ವಿಷಯವು ಪದ್ಮೆಗೆ ತಿಳಿಯಲಾರದೆಂದೂ ಅವಳಿಗೆ ಬೇಕಾದ ಆಶ್ವಾಸನವನ್ನು ಕೊಡಲಿಕ್ಕೆ ಸುಳ್ಳು ಹೇಳಿದರೂ ತಪ್ಪಿಲ್ಲೆಂದೂ ಬಗೆದು ವಾಮಣ್ಣನು ಎಲ್ಲಿಯಾದರೂ ಒಂದು ಕೆಲಸ ಸಿಕ್ಕೀತೆಂಬ ಆಶೆಯಿಂದ ಅವಳನ್ನು ಸಮಾಧಾನ ಮಾಡಿದನು. ರಾತ್ರಿಯು ನಿದ್ದೆಯ ತೆರೆ ಎಳೆಯಿತು.

ಮರುದಿನ ವಾಮಣ್ಣನು ಕಲ್ಯಾಣರಾಯರ ಮನೆಗೆ ಹೋಗಿ ಅವರನ್ನು ಕಂಡನು. ಒಂದೆರಡು ತಿಂಗಳುಗಳಲ್ಲಿಯೆ ಸಮ್ಮೇಲನವನ್ನು ಮಾಡಬೇಕಾದ್ದರಿಂದ ಎಲ್ಲ ಪೂರ್ವಸಿದ್ಧತೆಯು ವೇಗದಿಂದ ಸಾಗಬೇಕೆಂದು ಅವರು ಉತ್ಸಾಹದಿಂದ ಹೇಳಿದರು. ಒಬ್ಬ ಸ್ವಯಂಸೇವಕನಾಗಿ ಕೂಡ ದುಡಿಯಲಿಕ್ಕೆ ವಾಮಣ್ಣನು ಒಪ್ಪಿಕೊಂಡನು. ಮುಂದೆ ಕೆಲವು ದಿನಗಳಲ್ಲಿ ಒಂದು ಸ್ವಾಗ-

ಸಮಿತಿಯು ಏರ್ಪಟ್ಟಿತು. ಶ್ರೀಮಂತ ದೇಸಾಯಿರಾದ ಗೌಡರೊಬ್ಬರು ಸ್ವಾಗತಾಧ್ಯಕ್ಷರು, ಕಲ್ಯಾಣರಾಯರು ಕಾರ್ಯಾಧ್ಯಕ್ಷರಾಗಿ ಆರಿಸಿಬಂದರು. ಸಾರ್ವಜನಿಕ ಜೀವನದಲ್ಲಿ ಹೊಸದಾಗಿ ಕಾಲಿಟ್ಟ ಚಿಕ್ಕಮನೆ ಸಂಗಪ್ಪ ವಕೀಲರು ಕಾರ್ಯದರ್ಶಿಗಳಾದರು. ಸಹಾಯಕ ಕಾರ್ಯದರ್ಶಿಯೆಂದು ವಾಮಣ್ಣನನ್ನು ನೇಮಿಸಲಾಯಿತು. ಸ್ವಾಗತಸಮಿತಿಯ ಸದಸ್ಯರನ್ನು ಹೆಚ್ಚಿಸಬೇಕೆಂದೂ ಕರ್ನಾಟಕದ ಎಲ್ಲ ಭಾಗಗಳಲ್ಲಿ ಸಮ್ಮೇಲನದ ಪ್ರಚಾರವನ್ನು ಮಾಡಬೇಕೆಂದೂ ನಿರ್ಣಯಗಳಾದವು. ಆ ಪ್ರಕಾರ ಕೆಲಸವು ಮೊದಲಾಯಿತು. ವಾಮಣ್ಣನು ಒಮ್ಮೆ ಕಲ್ಯಾಣರಾಯರ ಸಂಗಡವೂ ಒಮ್ಮೆ ಸಂಗಪ್ಪ ಅವರ ಸಂಗಡವೂ ಧಾರವಾಡದ ಪ್ರತಿಷ್ಠಿತನಾಗರಿಕರ ಹತ್ತಿರ ಹೋಗಿ ಬಂದನು. ಹಣವೇನೊ ಸಾಧಾರಣ ಕೂಡಿತು. ಆದರೆ ತುಂಬಾ ವಿಚಿತ್ರವಾದ ಅನುಭವಗಳು ಬಂದವು. ಸಂಮೇಲನದ ಉದ್ದೇಶವನ್ನು ತಿಳಿದುಕೊಂಡು ನಿಜವಾದ ಕಳಕಳಿಯಿಂದ ಹಣಕೊಟ್ಟವರು ನೂರರಲ್ಲಿ ಒಬ್ಬಿಬ್ಬರು ಮಾತ್ರ. ಉಳಿದವರು ಬಂದವರ ಮೋರೆ ನೋಡಿ ತಮ್ಮ ಪ್ರತಿಷ್ಠೆಗಾಗಿ ಸ್ವಾಗತಸಮಿತಿಯ ಸದಸ್ಯರಾದರು. ಪೇಟೆಯಲ್ಲಿಯ ಕೆಲವರಂತೂ ಧರ್ಮದಾನ ಕೊಟ್ಟಂತೆ ಒಂದೆರಡು ಆಣೆ ಕೊಟ್ಟು ಮುಗಿಸಬೇಕೆಂದರು. ಇದೇನೋ ಕಾಂಗ್ರೆಸ ಫಂಡೆಂದು ಕೆಲವರು ತಿಳಿದರು. ಕನ್ನಡವೇನು ಸಂಸ್ಕೃತಿಯೇನು ಇದಾವುದೂ ಕನ್ನಡನಾಡಿನ ಗಂಡುಮೆಟ್ಟಿನಲ್ಲಿದ್ದ ಕನ್ನಡಿಗರಿಗೆ ಅರ್ಥವಾಗಲಿಲ್ಲ. ಏಕೀಕರಣವೆಂದರೆ ಅವರಿಗೆ ತುಸು ತಿಳಿಯುತ್ತಿತ್ತು. ಆದರೆ ಅದೂ ಲಾಭಹಾನಿಯ ಲೆಕ್ಕಾಚಾರದಿಂದ ಮಾತ್ರ. ಕಲ್ಯಾಣರಾಯರು ಪ್ರತಿಷ್ಠಿತ ವಕೀಲರನ್ನೂ ಅಧಿಕಾರಿಗಳನ್ನೂ ಕಂಡು ನೆರವನ್ನು ಪಡೆದರು. ಆದರೆ ಹೆಜ್ಜೆಹೆಜ್ಜೆಗೆ ಸುಪ್ತ ವಿರೋಧವೂ ಗುಪ್ತ ಉದಾಸೀನತೆಯೂ ಹೊರಬೀಳುತ್ತಿತ್ತು. ‘ ನಿಮ್ಮ ಮಾವಂದಿರನ್ನು ಒಮ್ಮೆ ಭೆಟ್ಟಿಮಾಡಿಸು, ವಾಮಣ್ಣ ’ ಎಂದು ಕಲ್ಯಾಣರಾಯರು ವಾಮಣ್ಣನಿಗೆ ಹೇಳಿದರು. ‘ ನನಗೆ ಸಾಧ್ಯವಿಲ್ಲ, ನೀವೇ ಹೋಗಿ ಕಾಣಬೇಕು ’ ಎಂದು ಅವನು ಉತ್ತರ ಕೊಡಬೇಕಾಗಿ ಬಂದಿತು. ಹಾಗೇ ಆಗಲಿ ಎಂದು ಕಲ್ಯಾಣರಾಯರು ಒಂದು ದಿನ ಮುಂಜಾನೆ ಭೀಮರಾಯರನ್ನು ಕಾಣಲಿಕ್ಕೆ ಬಂದರು. ವಾಮಣ್ಣನು ತನ್ನ ಕೆಲಸಕ್ಕೆ ಹೋಗಿದ್ದನು. ದಾಕ್ಷಿಣ್ಯದ ಮಾತುಗಳಾದಮೇಲೆ ಕಲ್ಯಾಣರಾಯರು ಕೂಡಲಿರುವಸಂಮೇಲನದ ಸುದ್ದಿಯನ್ನು ತಿಳಿಸಿ ಅದಕ್ಕೆ ಸ್ವಾಗತ ಸಮಿತಿಯ ಸಭಾಸದರನ್ನು

ಕಲೆಹಾಕುವ ಕೆಲಸ ನಡೆದಿದೆ ಎಂದು ತಿಳಿಸಿದರು. ಯಾವಾಗಾದರೊಮ್ಮೆ ದೇಶಾವರಿ ಬ್ರಾಹ್ಮಣರಿಗೋ ವಾರದ ಹುಡುಗರಿಗೋ ಭೀಮರಾಯರು ತಮ್ಮ ಮನೆಯಲ್ಲಿ ಪ್ರವೇಶಮಾಡಗೊಡುತ್ತಿದ್ದರು. ಚಳವಳಿ ಜನರು, ಫಂಡು ಬೇಡುವವರು ಅವರಲ್ಲಿ ಸೇರುವುದು ಅಸಾಧ್ಯಕೋಟಿಯ ಮಾತಾಗಿತ್ತು. ಆದರೆ ಕಲ್ಯಾಣರಾಯರು ಈಗ ಈ ಪ್ರಸ್ತಾಪವನ್ನು ಎತ್ತಿದ್ದು ನೋಡಿ ಅವರಿಗೆ ಆಶ್ಚರ್ಯವಾಯಿತು. ಆದರೂ ತೋರಿಕೆಯ ಸಹಾನುಭೂತಿಯಿಂದ 'ಎಲ್ಲಾ ಖರೆ. ಆದರೆ ನೋಡಿರಿ, ನಾವು ಸರಕಾರೀ ನೌಕರದಾರರು....' ಎಂದು ತಮ್ಮ ಯುಕ್ತಿಜಾಲವನ್ನು ಬೀಸಿದರು.

ಕಲ್ಯಾಣರಾಯರು ಕೂಡಲೆ ಉತ್ತರಕೊಟ್ಟರು: 'ರಾಯರೆ, ಈ ಸಮ್ಮೇಲನವು ರಾಜಕೀಯವಲ್ಲ. ಸರಕಾರದ ವಿರುದ್ಧ ಏನೂ ಇದರಲ್ಲಿ ಮಾಡುವದಿಲ್ಲ. ಏನೋ ಕನ್ನಡ ದೇಶ, ಕನ್ನಡ ಜನರು ಒಂದಾಗಬೇಕು. ಕನ್ನಡ ಸಂಸ್ಕೃತಿ ಉಳಿಯಬೇಕು ಎಂದು ಇದರ ಉದ್ದೇಶವಿರತದೆ. ಎಷ್ಟೋ ಜನ ಸರಕಾರಿ ಅಧಿಕಾರಿಗಳು ಈಗಾಗಳೇ ಸಭಾಸದರಾಗಿರುವರು.'

'ಹೀಗೋ?' ಎಂದು ಭೀಮರಾಯರು ಸ್ವಲ್ಪ ಸ್ತಂಭಿತರಾದರು. ಇನ್ನೇನು ನೆವ ಹೇಳಬೇಕೋ ಅವರಿಗೆ ತಟ್ಟನೆ ತೋಚಲಿಲ್ಲ. ಕಲ್ಯಾಣರಾಯರು ಕೊಟ್ಟಿದ್ದ ಪ್ರಕಟನೆಯನ್ನು ಓದುವ ನೆವನದಿಂದ ಸುಮ್ಮನೆ ಕುಳಿತು ಮತ್ತೆ ಆಡಿದರು: 'ಇದು ನಿಮ್ಮ ಆ ಏಕೀರಣದ ಚಳವಳಿ ಹೌದಲ್ಲೊ?'

'ಹೌದು, ಇದರೊಳಗೆ ಅದು ಮುಖ್ಯ ಭಾಗ.'

'ತಿಳಿಯಿತು. ನಮ್ಮ ಆಳೇದೇವರು ಓಡಾಡತಾರೆ ಅದೇ ಇದು ಎಂದು ಕಾಣಸತದೆ. ನಮಗಿದು ಬ್ಯಾಡ ರಾಯರೆ. ನೌಕರಿ ಚಾಕರಿ ಬಿಟ್ಟು ಇದರ ಹುಚ್ಚಿಲೆ ಆಳೇದೇವರು ಹಗಲ ರಾತ್ರಿ ಮನಿ ಹೊರಗೆ ಇರತಾರೆ. ಅವರೊಬ್ಬರ ಆಯುಷ್ಯ ಹಾಳಾಯಿತು; ಈ ಏಕೀಕರಣಮಾಡಿ ಇನ್ನ ಎಲ್ಲಾ ಬ್ರಾಹ್ಮಣರ ಆಯುಷ್ಯ ಇಷ್ಟು ಹಾಳು ಮಾಡಬ್ಯಾಡರಿ.'

ಈ ಮಾತು ಕಲ್ಯಾಣರಾಯರ ಸಾತ್ವಿಕಕೋಪವನ್ನು ಕೆರಳಿಸಿತು. ಆದರೆ ಅದನ್ನು ಹೊರಗೆಡವದೆ ಶಾಂತವಾಗಿ ಹೇಳಿದರು: 'ಹಾಗಲ್ಲ ರಾಯರೆ. ಏಕೀಕರಣವು ಯಾರನ್ನೂ ಹಾಳುಮಾಡುವದಿಲ್ಲ. ಕನ್ನಡ ದೇಶದ ಎಲ್ಲ

ಜಾತಿಗಳನ್ನೂ ಎಲ್ಲ ವರ್ಗಗಳನ್ನೂ ಅದು ಈಗಿನ ಹೀನ ಸ್ಥಿತಿಯಿಂದ ಉನ್ನತ ಸ್ಥಿತಿಗೆ ಒಯ್ಯುವದು.'

'ಅದೆಲ್ಲಾ ಬ್ರಹ್ಮಜ್ಞಾನ ಬ್ಯಾಡರಿ. ಲಿಂಗಾಯತರು ಈಗಾಗಲೆ ಎಷ್ಟು ಮುಂದೆ ಬಿದ್ದಾರೆ ನೋಡತೀರಿ. ಇನ್ನು ಈ ಏಕೀಕರಣವೊಂದು ಅವರಿಗೆ ಮಾಡಿಕೊಟ್ಟರಂದರ ಬ್ರಾಹ್ಮಣರು ಸತ್ತರೆಂದೇ ತಿಳಿಯಿರಿ.'

'ಅದು ಒಂದು ದೊಡ್ಡ ಭ್ರಮೆ, ಭೀಮರಾಯರೇ. ಬಹಳ ಜನರು ಹೀಗೆ ತಿಳಿದದ್ದು ನೋಡಿ ನನಗೆ ವಿಷಾದವೆನಿಸಿದೆ. ಇನ್ನು ಬರುವ ಪರಿಸ್ಥಿತಿಯಲ್ಲಿ ಯಾವೊಂದು ಜಾತಿಯೂ ನಮ್ಮ ದೇಶವನ್ನು ಆಳಲಾರದು. ಎಲ್ಲಾ ಜಾತಿಗಳಲ್ಲಿಯ ವಿಚಾರವಂತರು ಕೂಡಿ ಆಳುವರು. ಅದು ಸಾಧ್ಯವಾಗದೆ ಹೋದರೆ ಕನ್ನಡವೇಕೆ ಇಡೀ ಭರತಖಂಡವೇ ಜಾತಿ ಜಾತಿಗಳ ಜಗಳದಲ್ಲಿ ನಷ್ಟವಾಗಿಹೋದೀತು.'

'ಮತ್ತೆ ಅದೇ ವೇದಾಂತ ಹೇಳತೀರಿ. ನಮಗೇನು ಪಟಾಯಿಸುವದಿಲ್ಲ. ಈಗ ನಿಮ್ಮ ಸ್ಥಾನಿಕ ಸಂಸ್ಥೆಗಳಲ್ಲಿ ಯಾರು ಆಳತಾರ ಹೇಳಿರಿ?'

'ಹೌದು, ಮೊದಲು ಯಾರ ಆಳತಿದ್ದರು? ಒಂದು ಕಾಲ ಬ್ರಾಹ್ಮಣರದಾಯಿತು, ಈಗ ಬ್ರಾಹ್ಮಣೇತರರದು. ಇಬ್ಬರೂ ಒಮ್ಮೆ ಹೀಗೆ ಕಡಿದಾಡಿ ಆಳಿದ ಮೇಲೆ, ಮುಂದೆ ಕೂಡಿಕೊಂಡು ಬಾಳುವ ಕಾಲ ಬಂದೇ ಬರುತ್ತದೆ. ಈ ಜಾತಿಯ ಜಗಳಕ್ಕೆ ಕನ್ನಡ ಕಾರಣವಲ್ಲ, ಹೊರಗಿನವರು ಕಾರಣ. ಕನ್ನಡ ಎಲ್ಲ ಜಾತಿ-ಮತಗಳನ್ನು ಒಂದೆಡೆಗೆ ಕೂಡಿಸುವ ಶ್ವೇತಛತ್ರ, ರಾಯರೇ.'

ಹೀಗೆ ಮಾತು ಬೆಳೆಯುತ್ತ ಸಾಗಿತು. ಇನ್ನು ಮುಂದರಿಸಿ ಪ್ರಯೋಜನವಿಲ್ಲೆಂದು ತೋರಿದ್ದರಿಂದ ಕಲ್ಯಾಣರಾಯರು ಹೊರಡಲೆದ್ದು 'ನೋಡರಿ, ನಿಮ್ಮ ಮನಸ್ಸಿಗೆ ತೋರಿದಂತೆ ಮಾಡಿರಿ' ಎಂದರು. ಭೀಮರಾಯರು ದೊಡ್ಡ ಉಪಕಾರ ಹೊರಿಸುವವರಂತೆ ಐದು ರೂಪಾಯಿ ನೋಟು ಕೊಟ್ಟು ಕುಳಿತರು. ಕೆಲಸದ ಮೇಲೆ ಕಣ್ಣಿಟ್ಟು ಕಲ್ಯಾಣರಾಯರು ಆ ಹಣ ತಗೊಂಡು ಪಾವತಿ ಕೊಟ್ಟು ಹೊರಟರು. ಭೀಮರಾಯರ ವೃತ್ತಿಯಲ್ಲಿಯೂ ಮಾತಿನಲ್ಲಿಯೂ ಇನ್ನೂ ಅನೇಕರ ಭಾವನೆಗಳು ಮೂರ್ತಗೊಂಡು ತೋರಿದವು. ರಾಷ್ಟ್ರೀಯ ಕೆಲಸಗಾರರಲ್ಲಿಯೂ ಕೆಲವರು ಅದೇ ಮನೋವೃತ್ತಿಯವರೆಂದು ಕಲ್ಯಾಣರಾಯರು ಅರಿತಿದ್ದರು. ಯಾವ ಕಾರ್ಯಕ್ಕೆ ಎಲ್ಲರಿಂದ ಬೆಂಬಲವು ದೊರೆಯಬಹುದಾಗಿತ್ತೋ ಆ ಕಾರ್ಯವು ಮತಭೇದ-ನಿರುತ್ಸಾಹಗಳ

ದನಡೆಯಲ್ಲಿ ಸಿಕ್ಕು ಎಲ್ಲಿ ಹಿಮ್ಮೆಟ್ಟುವುದೋ ಎಂಬ ಭಯವೂ ನಿರಾಶೆಯೂ ಕ್ಷಣಕಾಲ ಅವರನ್ನು ಕೆಣಕಿದವು. ಆದರೂ ಎದೆಗುಂದದೆ ತಮ್ಮ ಪ್ರಚಾರ ವನ್ನು ಸಾಗಿಸಿದರು. ಶಾಮಣ್ಣನನ್ನು ಕರೆದುಕೊಂಡು ಕರ್ನಾಟಕದ ಮುಖ್ಯ ಪಟ್ಟಣಗಳಾದ ಮೈಸೂರು, ಮಂಗಳೂರು, ಬೆಂಗಳೂರು ಮುಂತಾದ ಕಡೆ ಗಳಲ್ಲಿ ಸಮ್ಮೇಲನದ ಸಂದೇಶವನ್ನು ಮುಟ್ಟಿಸಿ ಬಂದರು. ಶಾಮಣ್ಣನಿಗೆ ಕ್ಷಣಕ್ಷಣಕ್ಕೆ ಹೊಸ ಅನುಭವಗಳು ಬಂದವು. ಕನ್ನಡ ಒಂದೆಂದು ಕೂಗು ವುದು ಎಷ್ಟು ಸುಲಭವೋ ಅಷ್ಟು ಕನ್ನಡ ಒಂದಾಗುವುದು ಅಲ್ಲ ಎಂಬುದು ಅವನಿಗೆ ಮನವರಿಕೆಯಾಯ್ತು. ಕಾಲಪುರುಷನ ಅಣಕಾಟದಿಂದ ಕನ್ನಡ ದೇಶವು ಎಷ್ಟು ಆಡಳಿತದ ಚೂರುಗಳಾಗಿ ಹಂಚಿಹೋಗಿದೆ, ಎಷ್ಟು ಭಾಷೆಯ ಭೇದಗಳಾಗಿವೆ, ಹೃದಯಗಳೆಷ್ಟು ದೂರ ನಿಂತಿವೆ ಎಂಬುದನ್ನು ನೋಡಿ ನೋಡಿ ಶಾಮಣ್ಣನು ಬೇಗುದಿಗೊಂಡನು. ಆದರೂ ಕಲ್ಯಾಣರಾಯರು ಅವ ನಿಗೆ ಆಶೆಯ ದಾರಿಯನ್ನು ತೋರಿದರು. ಕನ್ನಡದ ವಿಶಾಲದೃಷ್ಟಿಯುಳ್ಳ ಅಪರೂಪ ಜೀವಗಳು ಎಲ್ಲ ಕಡೆಗೆ ಇರುವರೆಂಬುದನ್ನೂ ಕನ್ನಡ ಸಾಹಿತ್ಯ ಸಂಸ್ಕೃತಿಗಳ ಪುನರುಜ್ಜೀವನದ ಕೆಲಸವು ಅಖಿಲ ಕರ್ನಾಟಕದಲ್ಲಿ ನಡೆದಿರುವು ದೆಂಬುದನ್ನೂ ಶಾಮಣ್ಣನು ತಿಳಿಯದೆ ಇರಲಿಲ್ಲ.

ಕಲ್ಯಾಣರಾಯರು ತಿರುಗಿ ಧಾರವಾಡಕ್ಕೆ ಬರುವುದರಲ್ಲಿ ಒಡಕಿನ ದೊಳಕೆಯೊಂದು ಎದ್ದಿತ್ತು. ಕಾರ್ಯದರ್ಶಿಗಳಾದ ಸಂಗಪ್ಪನವರು ಕಲ್ಯಾಣ ರಾಯರ ಕಾರ್ಯಪದ್ಧತಿಯಿಂದ ಅಸಂತುಷ್ಟರಾಗಿ ತಮ್ಮ ರಾಜೀನಾಮೆ ಯನ್ನು ಬರೆದು ಇಟ್ಟಿದ್ದರು. ಇನ್ನು ಹದಿನೈದು ದಿನಗಳಲ್ಲಿ ಸಮ್ಮೇಲನ ವೆಂದು ನಿಶ್ಚಿತವಾಗಿತ್ತು. ಪರಪ್ರಾಂತದ ಪ್ರಸಿದ್ಧ ಮುಂದಾಳುಗಳೊಬ್ಬರು ಸಮ್ಮೇಲನದ ಅಧ್ಯಕ್ಷರಾಗಲು ಒಪ್ಪಿದ್ದರು. ಈ ಹೊತ್ತಿಗೆ ಕಾರ್ಯದರ್ಶಿ ಯವರು ಹೀಗೆ ಮಾಡಿದರೆ ಗತಿಯೇನು ? ಕಲ್ಯಾಣರಾಯರು ಸಂಗಪ್ಪ ವಕೀ ಲರ ಕೂಡ ಬೇಕಾದಷ್ಟು ಮನವೊಲಿಸುವ ಮಾತಾಡಿ ನೋಡಿದರು, ಬಗೆ ಹರಿಯಲಿಲ್ಲ. ಸ್ವಾಗತಸಮಿತಿಯ ಅವಸರದ ಸಭೆಯೊಂದನ್ನು ಕರೆಯ ಲಾಯಿತು. ಕಾರ್ಯದರ್ಶಿಗಳು ತಮ್ಮ ತಕರಾರುಗಳನ್ನೆಲ್ಲ ಸಭೆಯ ಮುಂದಿ ಟ್ಟರು. ತಮ್ಮನ್ನು ಬಿಟ್ಟು ಅಧ್ಯಕ್ಷರು ಸಹಾಯಕ ಕಾರ್ಯದರ್ಶಿಯನ್ನು ಪ್ರಚಾರಕ್ಕಾಗಿ ಕರೆದುಕೊಂಡು ಹೋದರೆಂಬುದು ಅದರಲ್ಲಿ ಮುಖ್ಯ.

ವಾಗಿತ್ತು. ಯಾರು ಎಷ್ಟು ಹೇಳಿದರೂ ಚಿಕ್ಕಮನೆಯವರು ಕೇಳಲಿಲ್ಲ. ನಿರ್ವಾಹವಿಲ್ಲದೆ ರಾಜೀನಾಮೆಯನ್ನು ಒಪ್ಪಿಸಿಕೊಂಡು ಇನ್ನೊಬ್ಬರನ್ನು ನೇಮಿಸಲಾಯಿತು. ಆದರೂ ಸ್ವಾಗತಸಮಿತಿಯಲ್ಲಿಯೇ ಉಳಿದು ಸಹಾಯಮಾಡಲು ಚಿಕ್ಕಮನೆಯವರನ್ನು ಕೇಳಿಕೊಳ್ಳಲಾಯಿತು. ಆದರೆ ಅವರಿಗೆ ಅವಮಾನವಾಯಿತೆಂದು ತಿಳಿಯುವ ಬ್ರಾಹ್ಮಣೇತರ ಪಕ್ಷವೊಂದು ತಲೆಯೆತ್ತಿ ಸಮ್ಮೇಳನದ ವಿರುದ್ಧ ಪ್ರಕಟನೆಗಳ ಮೂಲಕ ಪ್ರಚಾರವನ್ನು ನಡೆಸಿತು. ಸಮ್ಮೇಳನವು ಹತ್ತಿರ ಬಂದಂತೆ ಕಲ್ಯಾಣರಾಯರ ಧೈರ್ಯವು ಸಡಿಲಾಗತೊಡಗಿತು. ಬೇರೆ ಬೇರೆ ಕಾರ್ಯಶಾಖೆಯವರು ತಮ್ಮ ನಿಯತವಾದ ಕಾರ್ಯಗಳನ್ನು ಮುಂದರಿಸಿದ್ದರು, ಆದರೂ ಸಾಕಷ್ಟು ಉತ್ಸಾಹವು ಕಂಡುಬರಲಿಲ್ಲ. ವಾಮಣ್ಣನೂ ಹೇಗೋ ಕರ್ತವ್ಯಬುದ್ಧಿಯಿಂದ ಕುರುಡು ದಾರಿಯಲ್ಲಿ ನಡೆದಿದ್ದನು. ಆವನಿಗೂ ಪರಿಸ್ಥಿತಿಯ ಅರಿವು ತುಂಬಾ ನಿರಾಶೆಗೊಳಿಸಿತ್ತು. ಸಮ್ಮೇಳನವು ಇನ್ನು ೩-೪ ದಿವಸಗಳಲ್ಲಿ ನೆರೆಯುವುದಿತ್ತು. ಇಷ್ಟರಲ್ಲಿ ಇನ್ನೊಂದು ಕೊಡಲಿಯ ಪೆಟ್ಟು ಅದಕ್ಕೆ ಬಡಿಯಿತು. ಬೇರೆ ಅಗತ್ಯದ ರಾಷ್ಟ್ರಕಾರ್ಯವು ಮೈಮೇಲೆ ಬಂದ ಕಾರಣ ಸಮ್ಮೇಳನದ ಅಧ್ಯಕ್ಷನಾಗುವುದು ಸಾಧ್ಯವಿಲ್ಲವೆಂದು ವಿಷಾದಿಸಿ ಆ ಪರಪ್ರಾಂತದ ಮುಂದಾಳುಗಳು ತಂತಿಯಿಂದ ತಿಳಿಸಿಬಿಟ್ಟರು. ಆಯಿತು, ಸ್ವಾಗತ ಸಮಿತಿಯವರು ಮುಂದುಗಾಣದಾದರು. ಎಲ್ಲರೂ ಕೂಡಿ ಆಲೋಚನೆ ಮಾಡಿದರು. ತಲೆಗೊಂದು ವಿಚಾರವೆದ್ದಿತು. ಸಮ್ಮೇಳನವನ್ನು ಮುಂದೆ ಹಾಕಬೇಕೆಂದು ಒಬ್ಬರು, ಬಿಟ್ಟುಕೊಡಬೇಕೆಂದು ಇನ್ನೊಬ್ಬರು, ಇವರು ಅಧ್ಯಕ್ಷರಾಗಬೇಕು, ಅವರು ಆಗಬೇಕೆಂದು ಇತರರು ಹೀಗೆ ತುದಿ ಮೊದಲಿಲ್ಲದ ಚರ್ಚೆ ನಡೆಯಿತು. ಕೊನೆಗೆ ಕಲ್ಯಾಣರಾಯರು ಕಣ್ಣೀರು ತಂದು ಆವೇಶದ ಭಾಷಣಮಾಡಿದರು. ಅದರ ಪ್ರಭಾವದಿಂದಲೋ ಏನೋ ಕರ್ನಾಟಕದ ಒಬ್ಬ ಹಿರಿಯರನ್ನೇ ಅಧ್ಯಕ್ಷರನ್ನಾಗಿ ಕರೆತಂದು ಸಮ್ಮೇಳನವನ್ನು ಸಾಂಗಗೊಳಿಸಬೇಕೆಂದು ಗೊತ್ತಾಯಿತು. ಆ ಹಿರಿಯರು ಸುದೈವದಿಂದ ಅಧ್ಯಕ್ಷಸ್ಥಾನವನ್ನು ಸ್ವೀಕರಿಸಲು ಒಪ್ಪಿಕೊಂಡರು. ವಿರೋಧಕರು ಏನು ಮಾಡುವರೋ ಎಂಬ ಭಯವು ಸಮ್ಮೇಳನದ ಪ್ರಾರಂಭದ ವರೆಗೂ ಇದ್ದೇ ಇತ್ತು. ಆದರೂ ಒಂದು ಬೆಳಿಗ್ಗೆ ಸಮ್ಮೇಳನವು ಎಲ್ಲ ವಿಜೃಂಭಣೆಯಿಂದ ಪ್ರಾರಂಭವಾಯಿತು. ಜನಸಮುದಾಯವೂ ತುಂಬಾ

ಕೂಡಿತ್ತು. ಸ್ವಾಗತ ಗೀತವಾದ ತರುವಾಯ ಸ್ವಾಗತಾಧ್ಯಕ್ಷರು ತಮ್ಮ ಭಾಷಣವನ್ನು ಓದುತ್ತಿದ್ದರು. ಆಗ ಸಭಾ ಮಂದಿರದಲ್ಲಿ ಸ್ವಲ್ಪ ಗಡಿಬಿಡಿ ಯೆದ್ದಿತು. ಕೆಲ ತರುಣರು ಒಳಗೆ ನುಗ್ಗಿ ಹಸರು ಕಾಗದದ ಕೆಲವು ಪ್ರಕಟನೆ ಗಳನ್ನು ಹಂಚುತ್ತ ಹೊರಟರು. ಕಲ್ಯಾಣರಾಯರೂ ಸ್ವಾಗತ ಸಮಿತಿಯ ವರೂ ಗಾಬರಿಯಿಂದ ನೋಡುತ್ತಿದ್ದರು. ಅವರ ಕೈಗೂ ಪ್ರಕಟನೆ ಬಂದವು. ಅದರಲ್ಲಿ ವಿರೋಧಿ ಪಕ್ಷದವರ ಆತ್ಮಸಮರ್ಥನೆಯೂ ಸ್ವಾಗತ ಸಮಿತಿಯ ಅವಹೇಳನೆಯೂ ತುಂಬಿಹೋಗಿತ್ತು. ಇನ್ನು ಅಧಿವೇಶನಕ್ಕೆ ತಡೆಯುಂಟಾಗ ಬಹುದೆಂದು ಪ್ರಕಟನೆ ಹಂಚುತ್ತಿರುವವರನ್ನು ಹೊರಗೆ ಹಾಕಬೇಕೆಂದು ಕೆಲವರೆಂದರು. ಆದರೆ ಸಭಾಧ್ಯಕ್ಷರೇ ತಮ್ಮ ಜಾಣತನದಿಂದ ಅದಕ್ಕೆ ಅನು ಮತಿ ಕೊಡಲಿಲ್ಲ. ಅವರು 'ಹಂಚಿ ಹೋಗಲಿ, ಇನ್ನೇನೂ ಆಗುವದಿಲ್ಲ' ಎಂದರು. ಅವರು ಆಡಿದಂತೆ ಆಯಿತು. ಮುಂದಿನ ಕಾರ್ಯಕ್ರಮವು ಸುಸೂತ್ರವಾಗಿ ಸಾಗಿತು. ಸಮ್ಮೇಲನದ ಅಧ್ಯಕ್ಷರ ಭಾಷಣವು ಚಿಕ್ಕದಾಗಿ ದ್ದರೂ ಅತ್ಯಂತ ಸ್ಫೂರ್ತಿದಾಯಕವಾಗಿತ್ತು. ಅದರಿಂದ ಸಭಿಕರಲ್ಲಿ ಒಂದು ಹೊಸ ಶಕ್ತಿ ಸಂಚಾರವಾಯ್ತು. ಆದರೆ ಅದು ಚಿರಕಾಲಿಕವೆಂದು ಹೇಳಲಿಕ್ಕೆ ಬಾರದು. ಮರುದಿನದ ಅಧಿವೇಶನದಲ್ಲಿ ಕನ್ನಡ ನಾಡನ್ನು ಪರಕೀಯರ ಅಭಿ ಯೋಗದಿಂದ ಉಳಿಸಿ ಬೆಳಸುವ ಉದ್ದೇಶದಿಂದ ಎಷ್ಟೋ ಗೊತ್ತುವಳಿಗಳು ಪಾಸಾದವು. ಉಜ್ವಲ ಭಾಷಣಗಳೂ ಆದವು. ಎಲ್ಲಕ್ಕಿಂತ ಮುಖ್ಯವಾಗಿ 'ಕನ್ನಡ ಸಂಸ್ಕೃತಿ ರಕ್ಷಣ ಸಭೆ' ಎಂಬ ಸಂಘವನ್ನು ಸ್ಥಾಪಿಸುವ ನಿರ್ಣಯ ವಾಯಿತು. ಅದಕ್ಕೆ ಧನಸಹಾಯ ಮಾಡಬೇಕೆಂದು ಎದೆಕರಗಿಸುವ ಬಿನ್ನಹ ವನ್ನು ಸಭಿಕರಿಗೆ ಮಾಡಲಾಯಿತು. ಅದರ ಅದ್ಭುತ ಪರಿಣಾಮವು ತೀವ್ರವೇ ಕಂಡುಬಂದಿತು. ನೂರರಿಂದ ಸಾವಿರದವರೆಗೆ ಸಭೆಯ ನಿಧಿಗೆ ಸಹಾಯ ಮಾಡುವರಾಗಿ ಅನೇಕರು ಕುಳಿತ ಸ್ಥಳದಿಂದ ಎದ್ದು ನಿಂತು ಅಭಿವಚನ ಗಳನ್ನು ಕೊಟ್ಟರು. 'ಕನ್ನಡ ನಾಡಿನ ಭಾಗ್ಯ ತೆರೆಯಿತು. ಕನ್ನಡ ಸಂಸ್ಕೃ ತಿಯ ಉದ್ಧಾರವಾಗುವ ಕಾಲಬಂತು' ಎನ್ನುತ್ತ ಕಲ್ಯಾಣರಾಯರೂ ಉಳಿದ ಹಿರಿಯರೂ ಹಿಗ್ಗಿದರು. ತಮ್ಮ ಮುಖಗಳ ಮೇಲೆ ಮುಗುಳು ನಗೆಯನ್ನು ಮೆರೆಸಿದರು. ಔಪಚಾರಿಕವಾದ ಆಭಾರ ಪ್ರದರ್ಶನ ಮೊದಲಾದವುಗಳಿಂದ ಸಮ್ಮೇಲನವು ಯಶಸ್ವಿಯಾಗಿ ಕೊನೆಗಂಡಿತು.

ಸಮ್ಮೇಲನವು ಮುಗಿದ ಕೆಲವು ದಿನಗಳ ಮೇಲೆ ಕಲ್ಯಾಣರಾಯರು ಪಾಮಣ್ಣನ ಕೂಡ ಲೆಕ್ಕಪತ್ರಗಳನ್ನು ನೋಡುತ್ತಿದ್ದರು. ನಡುನಡುವೆ ಸಮ್ಮೇಲನಕ್ಕೆ ಸಂಬಂಧಿಸಿದ ಸ್ವಾರಸ್ಯವಾದ ಮಾತುಕತೆಗಳು ನಡೆಯುತ್ತಿದ್ದವು. ಅದೆಷ್ಟೋ ಎಡರುಗಳನ್ನು ದಾಟಿ ಒಂದು ಮಹಾಕಾರ್ಯವನ್ನು ಜರುಗಿಸಿದೆನಲ್ಲ ಎಂಬ ಒಂದು ಸಂತೋಷವೂ ದರ್ಪವೂ ಕಲ್ಯಾಣರಾಯರ ಮಾತಿನೊಳಗಿಂದ ಎದ್ದು ಕಾಣುತ್ತಿದ್ದವು. ಪಾಮಣ್ಣನು ಸಹಜವಾದ ಲವಲವಿಕೆಯಿಂದ 'ಈ ಕನ್ನಡ ಸಂಸ್ಕೃತಿ ರಕ್ಷಣ ಸಭೆ'ಯ ಕಾರ್ಯವೇನು ? ಮುಂದೆ ಹೇಗೆ ನಡೆಯುವದು ?' ಎಂದು ಕೇಳಿದನು. ಕಲ್ಯಾಣರಾಯರು ಇದಕ್ಕೆ ಉತ್ತರವಾಗಿ ತಮ್ಮ ಮನೋರಾಜ್ಯದ ರೂಪರೇಷೆಗಳನ್ನು ಸಂಭ್ರಮದಿಂದ ಬಣ್ಣಿಸಿದರು. ಕೊನೆಕೊನೆಗೆ ಪಾಮಣ್ಣನನ್ನು ಸ್ನೇಹ ಪೂರ್ಣದೃಷ್ಟಿಯಿಂದ ನೋಡಿ 'ನನ್ನ ಮನಸ್ಸಿನೊಳಗಿನ ಮಾತೊಂದು ಹೇಳುವೆ. ಈ ಕೆಲಸಕ್ಕೆ ನಿನ್ನಂಥ ಯುವಕರು ನಿಲ್ಲಬೇಕಾದರೆ ನಿಮ್ಮ ಉಪಜೀವನದ ವ್ಯವಸ್ಥೆ ಆಗಲೇಬೇಕು. ಅಂತೇ ನನಗೆ ಸಾಧ್ಯವಿದ್ದಷ್ಟು ಸಂಬಳವನ್ನು ಗೊತ್ತುಮಾಡಿ ಎಲ್ಲ ಹೊತ್ತಿನ ಕೆಲಸಗಾರನೆಂದು ನಿನ್ನನ್ನು ನೇಮಿಸಬೇಕೆಂದು ನನ್ನ ಅಪೇಕ್ಷೆಯಿದೆ. ಮಹಾರಾಷ್ಟ್ರದಲ್ಲಿ ಹೇಗೆ ಸಂಸ್ಥೆಗಳನ್ನು ಕಟ್ಟುತ್ತಾರೆ, ನೋಡಿರುವಿಯಲ್ಲವೇ ?'

ಪಾಮಣ್ಣನು ಅವರಿಗೆ ತಾನಾಗಿ ಬಂದ ಈ ವಿಚಾರದಿಂದ ಅದೆಷ್ಟು ಹಿಗ್ಗಿದನೆಂಬುದನ್ನು ಹೇಳಬೇಕಾಗಿಲ್ಲ. ಕನ್ನಡದ ಸೇವೆ, ಹೊಟ್ಟೆಯ ಸೇವೆ ಇವೆರಡನ್ನೂ ಹೊಂದಿಸಲಾಗದೆ ಯಾವಾಗ ಕನ್ನಡಕ್ಕೆ ಹೊರತಾಗಬಹುದೊ ಎಂಬ ಎಣಿಕೆಯು ದಿನಾಲು ಅವನನ್ನು ಇದುರಿಸುತ್ತಿತ್ತು. ಈಗ ಕಲ್ಯಾಣರಾಯರು ಕೊಟ್ಟ ಒಂದು ತರದ ಆಶ್ವಾಸನದಿಂದ 'ನಾನು ಬದುಕಿದೆ' ಎಂದುಕೊಂಡನು. ಆದರೆ ತನಗಾದ ಸಂತಸವನ್ನು ಹೊರಪಡಿಸದೆ 'ಅಷ್ಟಾದರೆ ಬಹಳ ಒಳ್ಳೇದು' ಎಂದಿಷ್ಟೇ ಆಡಿದನು. ಕಲ್ಯಾಣರಾಯರು ಕನ್ನಡ ಸಂಸ್ಕೃತಿಯ ಕಲ್ಯಾಣಮಂದಿರದ ಧುರೀಣರಾಗಿ ಮುಂದರಿಯಲೆಂದೂ ತಾನೊಬ್ಬ ದ್ವಾರಪಾಲಕನಾಗಿ ನಿಲ್ಲುವಂತಾಗಲೆಂದೂ ತನ್ನ ಮನದಲ್ಲಿಯೆ ನೆನೆದನು.

ಸಮ್ಮೇಲನದ ಸ್ವಾಗತಸಮಿತಿಯು ಅಧಿವೇಶದ ತರುವಾಯ ಒಂದು ತಿಂಗಳೊಳಗೆ ಸೇರಿ ಲೆಕ್ಕಗಳನ್ನೆಲ್ಲ ನೋಡಿಕೊಂಡಿತು. ಮುಖ್ಯವಾಗಿ

ಸಂಸ್ಥೆಯು ಕಾರ್ಯತತ್ಪರವಾಗಬೇಕಾದರೆ ವಚನ ಕೊಟ್ಟ ನಿಧಿಯು ಕೂಡ ಬೇಕು, ಆ ಕೆಲಸವನ್ನು ಪ್ರಾರಂಭಿಸಬೇಕೆಂದು ಗೊತ್ತಾಯಿತು. ಆದರೆ ಪ್ರಾರಂಬಿಸುವವರಾರು? ಸ್ವಂತದ ಕೆಲಸ, ಸೋಮಾರಿತನ ಇವುಗಳ ನಿಮಿತ್ತ ಉಳಿದ ಸದಸ್ಯರು ಏನೂ ಕೆಲಸಮಾಡಲಿಲ್ಲ. ತಾವು ಕೊಡಬೇಕಾದ ಹಣವನ್ನೇ ಕೆಲವರು ಕೊಡಲಿಲ್ಲ. ಕೆಲವು ದಿನ ನೋಡಿ ಕಲ್ಯಾಣರಾಯರು ಸಂಬಂಧಪಟ್ಟ ವ್ಯಕ್ತಿಗಳಿಗೆ ರಾಮಣ್ಣನಿಂದ ಬಿನ್ನಹದೋಲೆಗಳನ್ನು ಬರೆಸಿದರು. ಅವುಗಳಿಗೆ ಉತ್ತರ ಕೂಡ ಬರಲಿಲ್ಲ. ಅನಂತರ ತಾವೇ ಒಬ್ಬೊಬ್ಬ ಶ್ರೀಮಂತರ ಹತ್ತಿರ ಹೋಗಿ ಬಂದರು. ನಡುವಿನ ಅವಧಿಯಲ್ಲಿ ಆ ಸಮ್ಮೇಲನದ ಸಂಭ್ರಮದ ಉಕ್ಕು ಇಳಿದುಹೋಗಿತ್ತು. ಆಗದೆಂದು ಹೇಳಲಾಗದೆ ಮುಂದೆ ಹಾಕುವ ಹಂಚಿಕೆ ಹೂಡಿದರು. ಮತ್ತೆ ಕೆಲವು ವ್ಯಾಪಾರಸ್ಥರನ್ನು ಕಂಡರು. ಅವರಂತೂ ಸ್ಪಷ್ಟವಾಗಿ ಕೊಡುವುದಿಲ್ಲ ಎಂದರು. ಯಾಕಂದರೆ ಚಿಕ್ಕಮನೆ ವಕೀಲರ ಪ್ರಚಾರದ ಸಂಚು ವೇಗದಿಂದ ಹಬ್ಬುತ್ತಲಿತ್ತು. ಕಲ್ಯಾಣರಾಯರ ಪ್ರತಿಷ್ಠೆಗಾಗಿ ಈ ಕನ್ನಡ ಸಂಸ್ಥೆಯು ನಿರ್ಮಾಣವಾಗುತ್ತಿದೆಯೆಂದೂ ಅದರಲ್ಲಿ ಎಲ್ಲ ಸಮಾಜಗಳಿಗೆ ಪ್ರಾತಿನಿಧ್ಯವಿಲ್ಲವೆಂದೂ ಹೇಳಲಾಗುತ್ತಿತ್ತು. ಮೊದಲೇ ಜಾತೀಯ ಸಂಶಯವು ಒಳದೆರೆಯಾಗಿ ಹರಿಯುತ್ತಿರುವ ಕಾಲ. ಅದರಲ್ಲಿ ಈ ಅಪಪ್ರಚಾರವು ಕಲ್ಯಾಣರಾಯರ ಕೀರ್ತಿಗೂ ಕಾರ್ಯಸಾಧನೆಗೂ ಆತಂಕವುಂಟುಮಾಡಿತು. ಅವರ ಧೈರ್ಯವೂ ಆಶೆಯೂ ಕುಂದಹತ್ತಿದವು. ಸಂಸ್ಥೆಯ ಪತ್ರವ್ಯವಹಾರಕ್ಕೆ ಹಣವಿಲ್ಲ, ತಿರುಗಾಟಕ್ಕೆ ರೊಕ್ಕವಿಲ್ಲ. ಇದರಲ್ಲಿ ರಾಮಣ್ಣನಿಗೆ ಸಂಬಳಕೊಡುವುದಂತೂ ದೂರದ ಮಾತು. ಆದರೂ ಎದೆಗೆಡದೆ ಕಲ್ಯಾಣರಾಯರು ಪತ್ರಿಕೆಗಳಲ್ಲಿ ಲೇಖ ಬರೆದರು. ಕೈಖರ್ಚಿನಿಂದ ಸ್ವಲ್ಪ ಸುತ್ತಾಡಿಕೊಂಡು ಬಂದರು. ಇದರ ಪರಿಣಾಮವಾಗಿ ಸುಮಾರು ನೂರು ರೂಪಾಯಿಗಳು ಕೂಡಿದವು. ಆದರೆ ಅಷ್ಟರಿಂದ ದೊಡ್ಡ ಸಂಸ್ಥೆಯನ್ನು ನಿಲ್ಲಿಸುವುದು ಸಾಧ್ಯವೇ?

ರಾಮಣ್ಣನ ಮೊದಲಿನ ಆಶಾವಾದವು ಮಾಯವಾಗತೊಡಗಿತು. ನೌಕರಿಯೇನೂ ಇಲ್ಲದೆ ಕಳೆಯುವ ಪ್ರತಿಯೊಂದು ದಿನವೂ ಕೆಂಡದ ಉಂಡೆಯಂತೆ ಅವನನ್ನು ಉರಿಸುತ್ತಿತ್ತು. ಮನೆಯಲ್ಲಿ ಮೇಲಿಂದ ಮೇಲೆ ಆಗುವ ಅವಮಾನ ಅಸಹ್ಯವಾಗುತ್ತಿತ್ತು. ಇದಲ್ಲದೆ ಗೋಪಾಲನಿಗೆ ಸಣ್ಣಾಗಿ ಜ್ವರ-

ಆದರಿಂದ ಆವನು ಸೊರಗಿಹೋಗಿರುವನು. ಅವನಿಗೆ ಡಾಕ್ಟರರೇನೋ ಔಷಧ ಕೊಡುತ್ತಿದ್ದರು. ಆದರೆ ಡಾಕ್ಟರರ ಫೀಯನ್ನು ಕೊಡುವ ಯೋಗ್ಯತೆ ತನಗಿಲ್ಲ. ಭೀಮರಾಯರು ನೂರು ಮಾತಾಡಿ ತಾವೇ ಕೊಡುತ್ತಿದ್ದರು. ಪದ್ದಕ್ಕನಿಗೂ ಚಿಂತೆಯಿಂದ ಒಂದು ತರದ ಬೇನೆ. ಉಂಡ ಅನ್ನವು ಮೈಗೆ ಹತ್ತದು. ಆದರಲ್ಲಿ ಎರಡನೆಯ ಬಸುರು. ಮನೆಯಲ್ಲಿಯ ಪರಿಸ್ಥಿತಿ ಹೀಗೆ, ಹೊರಗೆ ಇನ್ನಿಷ್ಟು ಭೀಕರ. ಕಲ್ಯಾಣರಾಯರ ಆಶಾಮಂದಿರಕ್ಕೆ ತಳಹದಿಯನ್ನು ಕೂಡ ಹಾಕುವುದಾಗಿಲ್ಲ ಎಂದ ಮೇಲೆ ತಾನು ಅದನ್ನು ಸಂಜರುವುದು ಹೇಗೆ? 'ಕನ್ನಡ ಸಾಯುವುದು, ನಾನೂ ಸಾಯುವೆ' ಎಂಬ ಘೋರ ವಿಚಾರವನ್ನು ಮಾಡುವವರೆಗೆ ಅವನ ಮನಸ್ಸು ಹೋಯಿತು.

ಕಲ್ಯಾಣರಾಯರು ಕೂಡಿದಷ್ಟು ಹಣವನ್ನೆ ಇಟ್ಟುಕೊಂಡು ಮೆಲ್ಲಗೆ ಕೆಲಸವನ್ನು ಪ್ರಾರಂಭಿಸಬೇಕೆಂದು ಒಂದು ಯೋಜನೆ ಮಾಡಿದರು. ಗಡಿನಾಡುಗಳ ಅಂಕಿಗಳನ್ನು ಸಂಗ್ರಹಿಸಿ ಪುಸ್ತಕರೂಪವಾಗಿ ಸತ್ಯಸಂಗತಿಗಳನ್ನು ಪ್ರಕಟಿಸಬೇಕೆಂದು ಗೊತ್ತುಮಾಡಿದರು. ವಾಮಣ್ಣನು ಇದ್ದಷ್ಟು ಉತ್ಸಾಹದಿಂದ ಅವರಿಗೆ ನೆರವಾದನು. ಒಂದೆರಡು ತಿಂಗಳು ಇಬ್ಬರೂ ಜೊತೆಯಾಗಿ ಕೆಲಸವನ್ನು ನಡಸಿದ್ದರು. ಇಷ್ಟರಲ್ಲಿ ಮತ್ತೊಂದು ಗಂಡಾಂತರವು ದಾಳಿಯೆತ್ತಿ ಬಂದಿತು. ಯಾರಿಂದಲೋ ಊರತುಂಬೆಲ್ಲ ಒಂದು ಹಾರು ಸುದ್ದಿ ಹರಡಿತು: 'ಕನ್ನಡ ಸಂಸ್ಕೃತಿ ಸಭೆಯವರು ಸಾವಿರ ರೂಪಾಯಿಗಳವರೆಗೆ ನಿಧಿಯನ್ನು ಕೂಡಿಸಿ ಏನೂ ಮಾಡದೆ ಕುಳಿತಿರುವರು. ಅಲ್ಲದೆ ಆ ಕೂಡಿದ ಹಣದಿಂದ ಅಧ್ಯಕ್ಷನೂ ಕಾರಕೂನನೂ ತಮ್ಮ ತಿಂಗಳ ಪಗಾರವನ್ನು ತಗೊಳ್ಳುತ್ತಿರುವರು.' ಹೋದಲ್ಲಿ ಬಂದಲ್ಲಿ ಇದೇ ಸುದ್ದಿ. ಇದನ್ನು ಕೇಳಿ ವಾಮಣ್ಣನು ನೊಂದುಕೊಂಡನು. ಕಲ್ಯಾಣರಾಯರು ಮಾತ್ರ ಬಹಳ ರುಷ್ಟರಾದರು. ಅವರ ರೋಷವು ಬ್ರಹ್ಮರಂಧ್ರಕ್ಕೆ ಹೋಯಿತು. ಅದು ಕ್ಷಣಿಕವಾಗಿ ಉಳಿಯಲಿಲ್ಲ. ತಮ್ಮ ಮೇಲಿನ ಆರೋಪಗಳನ್ನು ಸಿದ್ಧಮಾಡಬೇಕೆಂದು ಆಹ್ವಾನಕೊಡುವುದಕ್ಕಾಗಿ ಅವರು ಒಂದು ಸಾರ್ವಜನಿಕ ಸಭೆಯನ್ನು ಕರೆದರು. ಅದರಲ್ಲಿ ತೂಕತಪ್ಪಿ ಬಹಳ ಉಗ್ರವಾದ ಭಾಷಣಮಾಡಿ ತಮ್ಮ ವಿರೋಧಕ ವ್ಯಕ್ತಿಗಳನ್ನು ಚುರುಕುಮಾತಿನಿಂದ ಟೀಕಿಸಿದರು. 'ನನಗೆ ತೋರಿದಂತೆ ನಾನು ಕೆಲಸ ಮಾಡುತ್ತೇನೆ. ನನಗೆ ಯಾರೂ ಕೇಳಲಿಕ್ಕೆ

ಬಾಧ್ಯಸ್ಥರಿಲ್ಲ. ನಾನು ಮುಂದಾಳುವೆಂದು ಒಪ್ಪಿಕೊಂಡ ಮೇಲೆ ನನ್ನನ್ನು ನಂಬಬೇಕು' ಮುಂತಾಗಿ ಅಹಂಕಾರವನ್ನು ಸಡಿಲುಬಿಟ್ಟು ಮಾತಾಡಿದರು. ಇದು ಕೂಡಿದ ಬಹುಜನಕ್ಕೆ ಸರಿಬರಲಿಲ್ಲ. ಅವರ ಹಿತೈಷಿಗಳೂ ಗುಣ ಗುಟ್ಟಿದರು. ಇದರಿಂದ ಉತ್ತೇಜನಗೊಂಡು ಶ್ರೀ. ಚಿಕ್ಕಮನೆ ವಕೀಲರು ಎದ್ದುನಿಂತು ಅಷ್ಟೇ ಪರಿಣಾಮಕಾರಕವಾದ ಭಾಷಣಮಾಡಿ ಜನಸಮು ದಾಯದ ಸಹಾನುಭೂತಿಯನ್ನು ಒಲಿಸಿಕೊಂಡರು. ಅದಕ್ಕೆ ಉತ್ತರಕೊಡ ಬೇಕೆಂದು ಕಲ್ಯಾಣರಾಯರು ಎದ್ದು ನಿಂತರೆ ಸಭೆಯಲ್ಲಿ ಗೊಂದಲವೆದ್ದಿತು. ಪುಂಡ ಜನರು ಕೇಕೆಹಾಕಹತ್ತಿದರು. ಒಂದರ್ಧ ತಾಸಿನವರೆಗೆ ಕಲ್ಯಾಣ ರಾಯರು ಕಂಠಶೋಷವನ್ನೇನೊ ಮಾಡಿಕೊಂಡರು. ಆದರೆ ಎಳ್ಳಷ್ಟೂ ಆಗರ ಪರಿಣಾಮವಾಗಲಿಲ್ಲ. ಗಲಭೆಯಲ್ಲಿಯೇ ಸಭೆಯು ಕೊನೆಗಂಡಿತು. ಕಲ್ಯಾಣ ರಾಯರು ನಖಶಿಖಾಂತ ತಪ್ತರಾಗಿ ಯಾರನ್ನೂ ಮಾತಾಡಿಸದೆ ತಮ್ಮ ಮನೆಯ ದಾರಿಯನ್ನು ಹಿಡಿದರು.

ವಾಮಣ್ಣನು ಈ ಎಲ್ಲ ದೃಶ್ಯವನ್ನು ಕಣ್ಣಾರೆ ನೋಡಿ ಬೆಂದನು. ಸ್ವಲ್ಪ ಅಲಕ್ಷ್ಯಮಾಡಿದ್ದರೆ ಕಲ್ಯಾಣರಾಯರು ಈ ವಿಡಂಬನೆಯ ನಾಟಕ ವನ್ನು ತಪ್ಪಿಸಬಹುದಾಗಿತ್ತಲ್ಲ ಎಂದುಕೊಂಡನು. ಕನ್ನಡದ ದಾರುಣಭವಿ ತವ್ಯವು ಅವನ ಕಣ್ಣಲ್ಲಿ ದಳದಳ ನೀರು ಹರಿಸಿತು. ತನ್ನ ಮನೆಗೆ ಹೋಗುತ್ತ ದಾರಿಯಲ್ಲಿ ಹುಚ್ಚುಹುಚ್ಚಾಗಿ ಬಡಬಡಿಸಿದನು. 'ಒಡಕು, ಬಡಿದಾಟ, ಸ್ವಾರ್ಥ, ಆಲಸ್ಯ ಇದೇ ಕನ್ನಡ ಸಂಸ್ಕೃತಿ. . ಆಯಿತು ಕನ್ನಡ ಸಂಸ್ಕೃತಿ ಸಮ್ಮೇಲನ ಆಯಿತು . . ಯೋಗ್ಯವಾಗಿ ಆಯಿತು . . ಇದೇ ಸಂಸ್ಕೃತಿಯನ್ನು ಎಲ್ಲ ಕನ್ನಡಿಗರು ಕಾಯುತ್ತಿರುವರು . . ಇದೇ ಕನ್ನಡ ಸಂಸ್ಕೃತಿ ರಕ್ಷಣೆಯ ಸಂಸ್ಥೆ. . ಇನ್ನಾಕೆ ಬೇರೆ ಸಂಸ್ಥೆ ?. . . .' ಅದೇನೊ ಕೆಟ್ಟನಗೆ ಬಂದಿತು, ನಕ್ಕುಬಿಟ್ಟನು. ತುಂಬಾ ಜನರು ಓಡಾಡುವ ಬೀದಿ ಬಂದಿತು. ಎಚ್ಚರದಿಂದ ಆಗ ಹೆಜ್ಜೆಯಿಡಬೇಕಾಯಿತು. ಸ್ವಲ್ಪ ಮನಸ್ಸಿಗೆ ಶಾಂತಿಯನ್ನು ತಂದು ಕೊಂಡು ಗಂಭೀರವಾಗಿ ವಿಚಾರಮಾಡಹತ್ತಿದನು. ಆದರ ನೂರಡಿ ಆಳದಿಂದ ಸಂಕಟದ ಕೂಗೊಂದು ಹೊರಬಿದ್ದಿತು. ಸುತ್ತುಮುತ್ತಿನವರು ಅದನ್ನು ಕೇಳಿದರೂ ವಾಮಣ್ಣನು ಲೆಕ್ಕಿಸಲಿಲ್ಲ. 'ಕನ್ನಡದ ಕಾರಣಪುರುಷ, ನೀ ಎಂದು

ಬರುವಿ ? ಕನ್ನಡ ಜನವನ್ನೆಲ್ಲ ಒಲಿಸಿ ಬಲಿಸಿ ಕನ್ನಡ ಸಂಸ್ಕೃತಿಯ ವೈಭವ ವನ್ನು ಎಂದು ಮೆರಸುವಿ ? '

## ಪ್ರಕರಣ ೧೧.

ಸತ್ಯಕಾಮರ ಜೀವನವು ತುದಿಮೊದಲಿಲ್ಲದ ಶಾಂತಿಯ ಕಡಲಾಗಿತ್ತು. ಮುಂಬಯಿಯಂಥ ನಿತ್ಯಸಂತೆಯ ನಗರದಲ್ಲಿ ವಾಸವಾಗಿದ್ದರೂ ತಮ್ಮ ತಪಸ್ಸಿನಿಂದಲೂ ಮೌನದಿಂದಲೂ ಅವರು ಆಳವಾದ ತಣಿವನ್ನು ಗಳಿಸಿಕೊಂಡಿದ್ದರು. ಒಮ್ಮೊಮ್ಮೆ ಮಾತ್ರ ಈ ಶಾಂತಿಯ ಕಡಲಲ್ಲಿ ದಿಗ್ಗೆಂದು ಚಿಂತೆಯ ಮೊಸಳೆಗಳು ಎದ್ದು ನೀರನ್ನು ಕದಡಿಸುವವು, ಉದ್ದನ್ನ ಬಾಯಿ ತೆರೆಯುವವು. ಅಂಥ ಹೊತ್ತಿನಲ್ಲಿ ತಮ್ಮ ಸಾಧನ ಸಂಪತ್ತಿಯನ್ನೆಲ್ಲ ನೆರವಿಗೆ ಕರೆದು ಸತ್ಯಕಾಮರು ತಮ್ಮನ್ನು ತಾವು ಸಮಾಧಾನಗೊಳಿಸುತ್ತಿದ್ದರು. ತಮ್ಮ ನಿತ್ಯಪಾರಾಯಣಕ್ಕೆಂದು ಆರಿಸಿಟ್ಟ ಉಪನಿಷತ್ತು, ಭಗವದ್ಗೀತೆಗಳ ವಾಕ್ಯಗಳನ್ನು ತಿರುತಿರುಗಿ ಮನನಮಾಡುತ್ತಿದ್ದರು. ಅವುಗಳಲ್ಲಿ ಅವರಿಗೆ ಅತ್ಯಂತ ಶಾಂತಿಯನ್ನು ನೀಡುವ ಭಗವದ್ಗೀತೆಯ ಶ್ಲೋಕವೆಂದರೆ ' ಆಪೂರ್ಯಮಾಣಮಚಲಪ್ರತಿಷ್ಠಂ ಸಮುದ್ರಮಾಪಃ ಪ್ರವಿಶಂತಿ ಯದ್ವತ್ । ತದ್ವತ್ ಕಾಮಾ ಯಂ ಪ್ರವಿಶಂತಿ ಸರ್ವೇ ಸ ಶಾಂತಿಮಾಪ್ನೋತಿ ನ ಕಾಮಕಾಮೀ ॥ ' (ಯಾವಾಗಲೂ ತುಂಬುತ್ತಲಿರುವ, ಕದಲದ ನೆಲೆಯುಳ್ಳ ಸಮುದ್ರವನ್ನು ನೀರು ಹೇಗೆ ಸೇರುವುದೋ ಹಾಗೆ ಎಲ್ಲಾ ಕಾಮಗಳು ಯಾರನ್ನು ಸೇರುವವೋ ಅವನಿಗೆ ಶಾಂತಿ ದೊರೆಯುವುದು, ಕಾಮಕಾಮಿಗಲ್ಲ.) ಇದರಲ್ಲಿ ಜೀವನದ ಸಾರಸಂದೇಶವೇ ಮಾತಿನ ಮೈಗೊಂಡು ನಿಂತಿರುವುದೆಂದು ಸತ್ಯಕಾಮರ ಭಾವನೆ. ಜೀವನವು ಸಮುದ್ರದಂತಾಗಬೇಕು, ಮಳೆಯ ಹೊಳೆಯ ನೀರಿನಂತೆ ಕಾಮನೆಗಳು ಅದರಲ್ಲಿ ಸೇರಬೇಕು; ಅವುಗಳಿಂದ ಸಮುದ್ರದ ನೀರಿಗೆ ಹೆಚ್ಚಿಲ್ಲ, ಕೊರತೆಯಿಲ್ಲ. ಹೀಗಾದ ಜೀವನಕ್ಕೆ ನಿಜವಾದ ಶಾಂತಿ ಸೂಸುವುದು. ಹೊರಗಿನ ಕಾಮನೆಯ ತೃಪ್ತಿಯಾಗಲಿ, ಆಗದಿರಲಿ ಒಳಗಿನ ತೃಪ್ತಿಯು ತುಂಬಿದ್ದರೆ ಸಾಕು. ಜೀವನ ಸುಖದ ಸಾಧನಕ್ಕೆ ಇದಕ್ಕಿಂತ ಬೇರೆ ಯಾವ ಮಂತ್ರೋಪದೇಶವೂ ಬೇಡ. ಈ ರೀತಿಯಾಗಿ ಮನನಮಾಡುತ್ತ

ಸತ್ಯಕಾಮರು ತಮ್ಮ ಸಂಸಾರದ ಸಿಂಹಾವಲೋಕನ ಮಾಡುತ್ತಿದ್ದರು. ಏನೇನೋ ಯೋಚನೆಗಳಿಂದ ಮನಸ್ಸು ಮೊದಲು ಯುದ್ಧದ ಕಣವಾಗುತ್ತಿತ್ತು. ಆದರೆ ಮುಂದೆ ಅದು ಸ್ತಿಮಿತಕ್ಕೆ ಬಂದು 'ನನ್ನ ದಾಂಪತ್ಯಕಥೆಯು ಹಾಳುದೇಗುಲದ ಗಾಳಿಯಾದರೇನು, ನನ್ನ ಆಶೋತ್ತರಗಳೆಲ್ಲ ಹಳ್ಳ ಕೂಡಿದರೇನು, ಅಂತರಂಗ ಸಮುದ್ರದ ಸತ್ಯವನ್ನು ಅರಿತಿರುವೆ, ಅದೇ ನನ್ನ ಗುರಿ, ಅದೇ ನನ್ನ ಸಿದ್ಧಿ.' ಎಂದು ಒಳಗೊಳಗೆ ಕೂಗಿಕೊಂಡು ಕುಣಿದಾಡುತ್ತಿತ್ತು.

ಹೀಗಿರುವಾಗ ಸತ್ಯಕಾಮರನ್ನು ಒಂದು ಕೋಟಲೆಯು ಬಾಧಿಸುತ್ತಿತ್ತು. ತಿಂಗಳಿಗೊಮ್ಮೆಯಾದರೂ ಹೆಸರ ಹೆಂಡತಿಯಾದ ಕಮಲಕಿಶೋರಿಯಿಂದ ಉದ್ದುದ್ದವಾದ ಕಾಗದಗಳು ಬರುತ್ತಿದ್ದವು. ಅವುಗಳ ಬರುವಿಕೆಯನ್ನು ತಡೆಯುವುದು ಅವರಿಗೆ ಅಸಾಧ್ಯವಾಯಿತು. ಯಾರೋ ತಮ್ಮ ವಿಶೇಷ ಪರಿಚಯದವರು ಅವಳಿಗೆ ಪ್ರೇರಿಸುತ್ತಿರಬಹುದೆಂದೂ ತಮ್ಮ ಬದಲುವ ವಿಳಾಸವನ್ನು ತಿಳಿಸುತ್ತಿರಬಹುದೆಂದೂ ತೋರಿತು. ರಾಮಣ್ಣನೇ ಇದನ್ನು ಮಾಡುತ್ತಿರಬಹುದೇ ಎಂಬ ಸಂಶಯವು ಒಮ್ಮೆ ಬಾರದೆ ಇರಲಿಲ್ಲ. ಅವನು ಅವರನ್ನು ನೋಡಲಿಕ್ಕೆ ಹೋದಾಗ ಆ ಸಂಶಯಚಕ್ರದಲ್ಲಿ ಅವರು ಸಿಲುಕಿದ್ದರು. ಅಂತೇ ಅವನ ಕೂಡ ಮನಸ್ಸು ಬಿಚ್ಚಿ ಮಾತಾಡಲಿಲ್ಲ. ಆದರೆ ಇತ್ತೀಚೆ ಅವನು ಮುಂಬಯಿಯ ನೌಕರಿಯನ್ನು ಕಳೆದುಕೊಂಡು ಧಾರವಾಡಕ್ಕೆ ಹೋದನೆಂದು ಅವರಿಗೆ ಗೊತ್ತಿತ್ತು. ಆದರೂ ಕಿಶೋರಿಯ ಪತ್ರಪ್ರಪಂಚವು ನಿಲ್ಲಲಿಲ್ಲ. 'ಎಂದು ನಿಮ್ಮಲ್ಲಿ ಬರಲಿ ? ನಿಮ್ಮ ಕೂಡ ಬಡವಿಯಾಗಿ ಇರಲಿಕ್ಕೆ ಜೀವ ಹಂಬಲಿಸುತ್ತಿದೆ.' ಮುಂತಾಗಿ ಭಾವೋದ್ರೇಕದ ವಾಕ್ಯಗಳು ಪ್ರತಿಯೊಂದು ಪತ್ರದಲ್ಲಿ ಇರುತ್ತಿದ್ದವು. ಸತ್ಯಕಾಮರಿಂದ ಬರೀ ಸಹಿ ಮಾಡಿದ ಉತ್ತರವೊಂದು ಹೋಗಿದ್ದರೆ ಅವಳು ವಿಮಾನದಿಂದ ಹಾರಿ ಬರುತ್ತಿದ್ದಳೇನೋ ! ಅಷ್ಟನ್ನೂ ಅವರು ಮಾಡಲಿಲ್ಲ. ಅವಳ ಪತ್ರ ನೋಡುವದೆಂದರೇ ಅವರಿಗೆ ಅಸಹ್ಯವಾಗಿತ್ತು. ಅದು ಬಂದ ದಿನವೆಲ್ಲ ಅವರ ಶಾಂತಿ ಸಮುದ್ರವು ಬತ್ತಿ ಬತ್ತಿ ಮತ್ತೆ ನೀರೇರುತ್ತಿತ್ತು. ಒಮ್ಮೆ ಎರಡು ಮೂರು ತಿಂಗಳು ಸರಿದವು. ಆ ಬೇಡಾದ ಓಲೆಯು ಬರಲಿಲ್ಲ. ಅದರಿಂದ ಸತ್ಯಕಾಮರ ಮನಸ್ಸು ಹಗುರಾಯಿತು. 'ಇನ್ನವಳ ಸುದ್ದಿಯೂ ಬೇಡ, ಸಂಪರ್ಕವೂ ಬೇಡ' ಎಂದು ತಮ್ಮ ಸಾಧನದಲ್ಲಿ ಮುಳುಗಿ ಇದ್ದರು. ಒಂದು ರಾತ್ರಿಯಲ್ಲಿ

ತಮ್ಮ ಕ್ರಮದಂತೆ ಧ್ಯಾನಮೌನವನ್ನು ಆಚರಿಸಿ ಸಂತುಷ್ಟಿಯ ಪರಾಕಾಷ್ಠೆ ಯನ್ನು ಹೊಂದಿ ನಿದ್ರೆಹೋದರು. ಬೆಳಗಾಗ ಜುಮುಜುಮು ನಸುಕಿ ನಲ್ಲಿ ಎಚ್ಚರಾಯಿತು. ಹಾಸಿಗೆಯಲ್ಲಿ ಎದ್ದು ಕುಳಿತು 'ಓಂ ಪರಬ್ರಹ್ಮಣೇ ನಮಃ ಅಸತೋ ಮಾ ಸದ್ಗಮಯ, ತಮಸೋ ಮಾ ಜ್ಯೋತಿರ್ಗಮಯ, ಮೃತ್ಯೋರ್ಮಾ ಅಮೃತಂ ಗಮಯ ' (ಅಸತ್ತಿನಿಂದ ಸತ್ತಿಗೆ ನನ್ನ ಒಯ್, ಕತ್ತಲೆಯಿಂದ ಬೆಳಕಿಗೆ ಒಯ್, ಸಾವಿನಿಂದ ಅಮೃತಪದವಿಗೆ ಒಯ್) ಎಂದು ಪರಮಾತ್ಮನಲ್ಲಿ ಮೊರೆಯಿಟ್ಟರು. ತಮ್ಮ ಮೆಚ್ಚಿನ ಬೇರೆ ಶ್ಲೋಕ ಗಳನ್ನು ಮನಸ್ಸಿನಲ್ಲಿ ಅನ್ನತೊಡಗಿದರು. ತಂಗಾಳಿಯ ತೀಟದಿಂದಲೂ ಎಳೆ ಬೆಳಗಿದ ಸೋಂಕಿನಿಂದಲೂ ಮೈಯು ಸುಖಮಯವಾಗಿತ್ತು, ಮನಸ್ಸು ಪ್ರಫುಲ್ಲವಾಗಿತ್ತು. ಇಷ್ಟರಲ್ಲಿ ತಲೆಬಾಗಿಲನ್ನು ಮೆಲ್ಲಗೆ ಯಾರೋ ತಟ್ಟಿ ದಂತಾಯಿತು. ಏನೋ ಗಾಳಿಯ ಆಟವಿರಬೇಕೆಂದು ಅವರು ಅತ್ತ ಲಕ್ಷ್ಯ ಕೊಡಲಿಲ್ಲ. ಒಂದೆರಡು ನಿಮಿಷಗಳ ಮೇಲೆ ಪಟ್‌ಪಟ್ಟೆಂಬ ಸಪ್ಪಳವು ತಡೆದು ಆಗತೊಡಗಿತು. ಈಗ ಮಾತ್ರ ಯಾರೋ ಕೈಯಿಂದ ತಟ್ಟುತ್ತಿರಬೇಕೆಂದು ಅವರಿಗೆ ಅನಿಸಿತು. ಕೂಡಲೆ 'ಯಾರವರು ?' ಎಂದು ಕೇಳಿದರು. ಅದಕ್ಕೆ ಉತ್ತರಬರಲಿಲ್ಲ. ಹಾಗಾದರೆ ಮನುಷ್ಯರು ಯಾರೂ ಇರಲಾರರೆಂದು ತಿಳಿದು ಕೊಂಡರು. ಒಮ್ಮೆ ಮಳೆಗಾಲದಲ್ಲಿ ಬಾಗಿಲಿಗೆ ಆತುಕೊಂಡು ಹೊರಗಡೆ ಮಲಗಿದ ನಾಯಿಯೊಂದು ನಡುನಡುಗಿದಾಗ ಇದೇ ಬಗೆಯ ಸಪ್ಪಳವಾದ ಅನುಭವವು ಅವರಿಗೆ ಬಂದಿತ್ತು. ಅಂಥ ಒಂದು ನಾಯಿಯೇ ಇರಬಹು ದೆಂದರು. ಆದರೆ ಸದ್ದು ನಿಲ್ಲಲೇ ಇಲ್ಲ. ಅಲ್ಲಿಂದ ಸತ್ಯಕಾಮರು ಚಟ್ಟನೆ ಎದ್ದು ಬಾಗಿಲ ಹತ್ತಿರ ಹೋಗಿ ಕಿವಿಹಚ್ಚಿ ಕೇಳಿದರು. ಮನುಷ್ಯ ವ್ಯಕ್ತಿಯೇ ಹೊರಗೆ ನಿಂತಿರಬಹುದೆಂದು ಶಂಕೆಯು ಹೆಚ್ಚಿತು. ನೋಡಿಯೆ ಬಿಡೋಣ ಎಂದು ಬಾಗಿಲ ತೆರೆದರು. ಅಕಲ್ಪಿತವಾದ ದೃಶ್ಯವು ಕಣ್ಣಿಗೆಬಿದ್ದಿತು. ಪ್ರೌಢ ವಯಸ್ಸಿನ ಚೆಲುವೆಯಾದ ಹೆಂಗಸೊಬ್ಬಳು ದಿನಮುಖದಿಂದ ಇದಿರು ನಿಂತಿದ್ದಳು. ನೆರೆಹೊರೆಯಾಕೆ ಯಾರಾದರೂ ಮನೆ ತಪ್ಪಿ ತಮ್ಮಲ್ಲಿ ಬಂದಿರ ಬಹುದೆಂದು ಸತ್ಯಕಾಮರು ಬಾಗಿಲನ್ನು ಇಕ್ಕಹೋದರು. ಆದರೆ ಆ ಹೆಂಗಸು ಒಮ್ಮೆಲೆ ಮನೆಯೊಳಕ್ಕೆ ಕಾಲಿಟ್ಟು ಅವರ ಕಾಲಿಗೆ ಬಿದ್ದು ಅಳ ಹತ್ತಿದಳು. ಇದೇನು ಅದ್ಭುತವೆಂದು ಕ್ಷಣಹೊತ್ತು ಅವರು ದಂಗುಬಡಿದು

ನಿಂತರು. ಮುಂದೆ ಬುದ್ಧಿಯನ್ನು ಸ್ವಾಧೀನಕ್ಕೆ ತಂದು ಕಾಲು ಕೊಸರಿ ಕೊಂಡು ಹಿಂಜರಿದರು. 'ಇದೇನು? ಯಾರು ನೀವು?' ಎಂದು ಗದ್ದರಿಸಿ ದರು. ಮುಂಬಯಿಯಲ್ಲಿ ಮೋಸಗಾತಿಯರಿಗೆ ಕೊರತೆಯೇನಿಲ್ಲ. ಅಂಥ ಒಬ್ಬಳು ಈ ಕರುಣೆಯ ನಟನೆಯನ್ನು ಮಾಡುತ್ತಿರಬಹುದೆಂದು ಸತ್ಯಕಾಮರು ದೂರ ನಿಂತು ತುಂಬಾ ಒದರಾಡಿದರು. 'ನಾಚಿಕೆಗೇಡಿ ಹೆಂಗಸೇ, ಹೊರಡು ಇಲ್ಲಿಂದ ಈ ಕ್ಷಣ!' ಎಂದು ಆಜ್ಞಾಪಿಸಿದರು. ಆದರೆ ಆ ಹೆಂಗಸು ಒಂದೊಂದು ಮಾತಿಗೆ ದಳದಳವಾಗಿ ಕಂಬನಿಗರೆಯುತ್ತ ಮೂಲೆಯಲ್ಲಿ ಬಾಗಿ ನಿಂತಳು. ಎರಡೂ ಕಣ್ಣಿನಿಂದ ಹರಿಯುವ ದ್ವಿದಲವಾದ ತಡಸಲವೇ ಅವರ ಮಾತಿಗೆ ಅವಳ ಉತ್ತರ. ಬೇರೆ ಮಾತುಗಳು ಅವಳಿಂದ ಹೊರಡಲಿಲ್ಲ. ಹೀಗೆ ಐದು-ಹತ್ತು ನಿಮಿಷಗಳು ಕಳೆದವು. ಸತ್ಯಕಾಮರು ತಮ್ಮ ಆರಾಮ ಖುರ್ಚಿಯಲ್ಲಿ ಬಿದ್ದುಕೊಂಡು ಆ ಸ್ತ್ರೀಯನ್ನು ನಿಟ್ಟಿಸಿ ನೋಡಿದರು. ತುಸು ಉದ್ದನ್ನ ತೆಳ್ಳನ್ನ ಮೈ, ಕೆಂಪು ಮೋರೆ, ಸಂಪಗೆಯ ತೆನೆಯಂಥ ಮೂಗು. ಉಂಗುರ ಗೂದಲುಗಳು ಕಿವಿಗಳ ಮೇಲೆಯೂ ಹಣೆಯ ಮೇಲೆಯೂ ಬಳ್ಳಿಗುಡಿಯಂತೆ ಸುಳಿಯುತ್ತಿರುವವು. ಸೋತುಹೋದ ಮೈಯಲ್ಲಿ ಸಪ್ಪೆಯಾದ ಮುಖ. ಕಣ್ಣೀರಿನ ಕಲೆಗಳಿಂದ ಅದು ಇನ್ನಿಷ್ಟು ಕಳೆಗೆಟ್ಟಿದೆ. ಇಂಥ ಸ್ಥಿತಿಯಲ್ಲಿಯೂ ತಾವು ಹಿಂದೆ ಎಲ್ಲಿಯೋ ಯಾವಾಗಲೋ ಕಂಡ ಸೌಂದರ್ಯ ಮೂರ್ತಿಯ ಪ್ರತಿಬಿಂಬವನ್ನು ಸತ್ಯಕಾಮರು ಆ ಹೆಂಗಸಿನಲ್ಲಿ ಕಂಡರು. ಹಿಂದಿನ ನೆನಪು ಸೂರ್ಯನ ಕಿರಣದಂತೆ ಸೂಸಿ ಬರತೊಡಗಿತು. ಅದರ ಸವಿಯಲ್ಲಿ ಮನಸ್ಸು ಒಂದು ನಿಮಿಷ ಸುಖಹೊಂದಿತು. ಕಲ್ಪನೆಯ ಚಿತ್ರಗಳು ಆ ವ್ಯಕ್ತಿಯನ್ನೆ ಪಟಮಾಡಿ ಮುಂದೆ ಚಲಿಸಿದವು. ಆದರೆ ಅವಳೇ ತಮ್ಮ ಹೆಂಡತಿಯಾಗಿ ಈಗ ಬಂದಿರಬಹುದೇ? ಎಂಬ ಯೋಚನೆ ಬಂದೊಡನೆ ಮೋಡ ಕವಿದಿತು, ಮುಖ ಗಂಟಿಕ್ಕಿತು. ಸತ್ಯಕಾಮರು ಕಣ್ಣುಮುಚ್ಚಿ ಕುಳಿತರು. ಆ ಹೆಂಗಸು ಮೆಲ್ಲಗೆ ಹೆಜ್ಜೆಯಿಡುತ್ತ ಬಾಗಿಲನ್ನು ಸದ್ದಿಲ್ಲದೆ ಮುಚ್ಚಿ ಆರಾಮಖುರ್ಚಿಯ ಬದಿಗೆ ಹೋಗಿ ಮಂಡೆಯೂರಿ ಕುಳಿತಳು. ಹೊರಗಿನ ಜೀವನವೆಲ್ಲ ಎಚ್ಚತ್ತು ದಿನಚರಿಯ ಕಲಕಲವನ್ನು ಆರಂಭಿಸಿದೆ. ಇಲ್ಲಿ ಒಳಗೆ ಎರಡು ಮೈಗಳು ಸ್ತಬ್ಧವಾಗಿವೆ. ಸತ್ಯಕಾಮರಿಗೆ ಕಣ್ಣು ತೆರೆದು ನೋಡಲು ಆಗದು. ಆ ಹೆಂಗಸಿಗೆ ಬಾಯಬಿಟ್ಟು ಆಡಲು ಆಗದು. ಕೆಲನಿಮಿಷಗಳಾದವು. ಕೊನೆಗೆ

ಅವಳೇ ಧೈರ್ಯತಂದುಕೊಂಡು ಅರೆಸುಂಗಿದ ಮಾತಿನಿಂದ ಇಂಗ್ಲಿಶಿನಲ್ಲಿ ಹೇಳಿದಳು: 'ಪ್ರಿಯ, ನಾನು..ನಿಮ್ಮ..ಕಿಶೋರಿ. ಕೂಡಲೆ ಮಿಂಚು ವೇಗದಿಂದ ಸತ್ಯಕಾಮರು ಕಣ್ಣು ತೆರೆದು ಇದಿರು ನೋಡಿ ತರುವಾಯ ಬದಿಗೆ ನೋಡಿದರು. ಆ ಮಾತು, ಆ ಧ್ವನಿ, ಆ ರೂಪ ಎಲ್ಲವೂ ಕೂಡಿಕೊಂಡು ಅವಳೇ ಬಂದಿರುವಳೆಂದು ಸಾರಿದವು. ಯಾವಳ ಹೆಸರನ್ನು ನೆನೆಯಲೂ ಯಾರ ಪತ್ರವನ್ನೊಡೆದು ಓದಲೂ ತಾವು ಉರಿಯ ಮೇಲೆ ನಡೆದಂತೆ ತಪಿಸು ತ್ತಿದ್ದರೋ ಆ ಹೆಂಗಸೇ ಬಂದಿರುವಳೆಂದು ಅವರಿಗೆ ಮನದಟ್ಟಾಯಿತು. ಕುರ್ಚಿಯಿಂದ ಚಟ್ಟನೆ ಎದ್ದು ಆ ಕೋಣೆಯಲ್ಲಿ ಹೋಗಬಹುದಾದಷ್ಟು ದೂರ ಸರಿದುಹೋದರು. ಕಿಶೋರಿಯೂ ಎದ್ದು ನಿಂತು ಕೈಮುಗಿದು 'ಪ್ರಿಯ, ನನ್ನ ತಪ್ಪನ್ನು ಕ್ಷಮಿಸು. ನಿನ್ನ ಕೂಡ ಕಡೆತನಕ ಇರಲಿಕ್ಕೆ ಬಂದಿರುವೆನು.' ಈ ಮಾತುಗಳಿಂದ ಸತ್ಯಕಾಮರಿಗೆ ಇನ್ನಿಷ್ಟು ವೇದನೆ ಯಾಯಿತು. 'ತಾವು ದಯಮಾಡಿ ಇಲ್ಲಿಂದ ಹೊರಡಿರಿ, ನನ್ನ ಪಾಡಿಗೆ ನನ್ನನ್ನು ಬಿಡಿರಿ' ಎಂದು ಎತ್ತರದ ದನಿಯಲ್ಲಿ ಕೇಳಿಕೊಂಡರು. ಅದರ ಪರಿ ಣಾಮವೇನೂ ಆಗಲಿಲ್ಲ. ಕಿಶೋರಿಯೂ ಹಾಗೆಯೇ ದೀನಳಾಗಿ ನಿಂತು ಕೊಂಡಳು. ಕಡೆಗೆ 'ನಾನೇ ಹೊರಟು ಹೋಗುವೆ' ಎಂದು ಸತ್ಯಕಾಮರು ಬಾಗಿಲತ್ತ ಸಾಗಿದರು. 'ನಾನೂ ನಿಮ್ಮೊಡನೆ ಬರುವೆ' ಎಂದು ಕಿಶೋ ರಿಯೂ ಬೆನ್ನು ಹತ್ತಿದಳು.

ಹೊರಗೆ ಹೋದಲ್ಲೆಲ್ಲ ತಮ್ಮ ದಾಂಪತ್ಯ ದುರಂತದ ಡಂಗುರ ಸಾರ ಬಾರದೆಂದು ಸತ್ಯಕಾಮರು ಬಾಗಿಲಿಗೆ ಒಳಗಿನ ಬೋಲ್ಟು ಹಾಕಿ ತಮ್ಮ ಚಾಪೆಯ ಮೇಲೆ ದೊಪ್ಪನೆ ಕುಳಿತು ನಿಟ್ಟುಸಿರು ಬಿಟ್ಟರು. ಇದುರಿನ ಕಿಡಿಕಿ ಯಿಂದ ಸೂರ್ಯಕಿರಣಗಳು ಕಂಬಕಂಬವಾಗಿ ಬಂದು ಮೈಯನ್ನು ಮುತ್ತಿ ದವು. ಕಿಶೋರಿಯೂ ಹತ್ತಿರ ಬಂದು ಗೋಡೆಗೆ ಬೆನ್ನು ಹಚ್ಚಿ ತುದಿಗಾಲ ಮೇಲೆ ವಿಲಾಸವಾಗಿ ಬಾಗಿ ನಿಂತು ನೋಡಿದಳು. ತಲೆಯ ಮೇಲೆ ತುಂಬ ಜಡೆಗಟ್ಟಿದ ಕೂದಲು, ಮುಖದ ತುದಿಗೆ ಗಡ್ಡದ ಬಿಳಲು ನರೆಯಾಗುತ್ತ ಹೊರಟಿವೆ. ಸೂರ್ಯಕಿರಣದಲ್ಲಿ ಅವರ ಮುಖವು ಲಕಲಕಿಸಿತು, ಆದರೆ ಒಳ ಗಿನ ಜೀವವು ತಪ್ತವಾಗಿತ್ತು. ಎಷ್ಟೋ ಹೊತ್ತು ಹಾಗೇ ಹೋಯಿತು. ಕೊನೆಗೆ ಯಾವದೋ ಒಂದು ನಿರ್ಧಾರಕ್ಕೆ ಬಂದು ಸತ್ಯಕಾಮರು ಇದಿರು

ನೋಡುತ್ತಲೆ ಭಾವರಹಿತವಾದ ಸರದಲ್ಲಿ 'ಕೂತುಕೋ' ಎಂದರು. ಕಿಶೋರಿಯ ಮೋರೆಯುಬ್ಬಿತು, ತತ್‌ಕ್ಷಣ ಹತ್ತಿರ ಕುಳಿತಳು. 'ಕಿಶೋರಿ.... ನನ್ನದೇ ತಪ್ಪಾಯಿತು, ಕ್ಷಮಿಸು' ಎಂದು ಸತ್ಯಕಾಮರು ಅದೇ ಸರದಲ್ಲಿ ಆಡಿದರು. ಕಿಶೋರಿಗೆ ಅದೆಂಥ ಸಮಾಧಾನ! ಪ್ರೇಮವು ಮರಳಿ ತಮ್ಮ ಬಾಳಿನಲ್ಲಿ ಸೂಸಾಡಿತೆಂದೂ ತಾನಿನ್ನು ನಿಶ್ಚಿಂತವಾಗಿ ಪ್ರಿಯ ಪತಿಯ ಕೂಡ ಸಂಸಾರ ಮಾಡುವೆನೆಂದೂ ಕಲ್ಪನೆಯ ಗೋಪುರಗಳನ್ನು ಕಟ್ಟಿದಳು. ಸತ್ಯಕಾಮರು ಇಂಗ್ಲಿಶಿನಲ್ಲಿ ಮುಂದುವರಿಸಿದರು: 'ಕಿಶೋರಿ, ಪರದೇಶದ ನಂದನ ವನದಲ್ಲಿ ನಿನಗೆ ಮರುಳಾಗಿ ನಿನ್ನ ಮದುವೆಯಾದೆ. ಸ್ವದೇಶಕ್ಕೆ ಬಂದು ನಿನ್ನನ್ನು ಧಿಕ್ಕರಿಸಿದೆ. ನನ್ನದೇ ಅಪರಾಧವಾಯಿತು. ಹೋಗಲಿ, ನಾವಿನ್ನು ಕೂಡಿರುವದು ಸಾಧ್ಯವಿಲ್ಲ. ಇಗೋ, ನಾನು ಸಂಗ್ರಹಮಾಡಿದ ಹಣವು ಹತ್ತುಸಾವಿರಕ್ಕೆ ಮೇಲಿದೆ. ಬ್ಯಾಂಕಿನ ಪುಸ್ತಕವನ್ನು ನಿನ್ನ ಕಡೆ ಕೊಡುತ್ತೇನೆ, ನಿನಗೆ ಎಲ್ಲ ಅಧಿಕಾರವನ್ನು ಕೊಡುತ್ತೇನೆ. ನಿನಗೆ ಎಲ್ಲಿ ಬೇಕಾದಲ್ಲಿ ಸುಖವಾಗಿ ಇರು. ನನ್ನನ್ನು ಕಾಡಿಸಬೇಡ.'

ಕಿಶೋರಿಯ ಕ್ಷಣಿಕ ಸುಖವು ಬಿಸಿಲುಗುದುರೆಯಂತೆ ಮಾಯವಾಯಿತು. ಹೊಟ್ಟೆಯಲ್ಲಿ ವಿಚಿತ್ರ ಸಂಕಟವಾಯಿತು. 'ನನಗೆ ಅದೆಲ್ಲ ಬೇಕಾಗಿಲ್ಲ. ನಿಮ್ಮ ಹತ್ತಿರ ಇರುವದು ಬೇಕು' ಎಂದು ಸತ್ಯಕಾಮರ ಕೈ ಹಿಡಿಯಹೋದಳು. ಕೈ ಸಿಕ್ಕದೆ ಜಾರಿಹೋಯಿತು. ಎಷ್ಟು ಪರಿಯಿಂದ ಹೇಳಿದರೂ ಅವಳು ಕೇಳಲಿಲ್ಲ. ಸತ್ಯಕಾಮರ ಸಹನೆ ಕೈಮೀರಿತು. ಆಸನದಿಂದ ಎದ್ದು ಮೂಲೆಯಿಂದ ಮೂಲೆಗೆ ಅಲೆದರು. ಕಿಶೋರಿಯು ದಿಙ್ಮೂಢಳಾಗಿ ಅಲ್ಲಿಯೇ ಕುಳಿತಳು.

'ಕಿಶೋರಿ, ನನ್ನ ಜೀವನದ ಸಮಸ್ಯೆ, ಶಾಪವಾಗಿ ನೀ ಬಂದೆ. ಯಾವ ಶಾಂತಿಸುಖವನ್ನು ಇಷ್ಟು ವರುಷ ಜೇನಿನ ಕೊಡದಂತೆ ಪಡೆದಿರುವೆನೊ ಅದನ್ನು ಒಡೆದು ಹಾಳುಮಾಡಲಿಕ್ಕೆ ನೀನು ಬಂದಿರುವೆ! ನಿನ್ನ ಸ್ಥಳವನ್ನು ಬಿಟ್ಟು ಯಾಕೆ ಬಂದೆ, ಹೇಗೆ ಬಂದೆ?'

'ಪ್ರಿಯ, ನಿನಗೆ ಸುಖವನ್ನು ಕೊಡಲಿಕ್ಕೆ ನಾನು ಬಂದಿರುವೆನು. ಎಷ್ಟೋ ದಿನಗಳವರೆಗೆ ನನ್ನ ಶ್ರೀಮಂತಿಕೆ, ಪೌಢಶಿಕ್ಷಣ ಇವುಗಳ ಮಹಾಮದವು ನಿನ್ನ ವಿಷಯಕ್ಕೆ ಅಲಕ್ಷ್ಯವುಂಟುಮಾಡಿತ್ತು. ಈಗ ಒಂದೆರಡು

ವರ್ಷದಿಂದ ನನ್ನ ಪ್ರೇಮವು ಮತ್ತೆ ಜಾಗೃತವಾಯಿತು. ಇಲ್ಲಿಯ ನನ್ನೊಬ್ಬ ಪರಿಚಿತ ಗೆಳತಿಯಿಂದ ನಿನ್ನ ಸಮಾಚಾರವು ತಿಳಿದುಬಂದು ನನಗೆ ಮರುಕ ಹುಟ್ಟಿತು. ನಿನ್ನ ಬಳಿ ಬರಬೇಕೆಂದು ಈ ಹೃದಯ ಹಾತೊರೆದರೂ ನಿನ್ನಿಂದ ಕರೆಬಾರದೆ ಹೋಗುವದು ಹೇಗೆ ಎಂದು ಅಹಂಕಾರವು ತಡೆದು ನಿಲ್ಲಿಸು ತ್ತಿತ್ತು. ಅಂತೇ ನಿನಗೆ ಆಗಾಗ ಕಾಗದಗಳನ್ನು ಬರೆಯಲು ತೊಡಗಿದೆ. ನಿನ್ನಿಂದ ಒಂದು ಉತ್ತರವೂ ಬರಲಿಲ್ಲ. ಅದರಿಂದ ಈ ಎರಡು ಮೂರು ತಿಂಗಳು ಕಾಗದ ಬರೆಯುವದನ್ನೂ ಬಿಟ್ಟೆ. ಈಗ ಅಹಂಕಾರವನ್ನೂ ಬಿಸುಟಿ ಪ್ರೇಮದಿಂದ ಎಂಥ ಜುಗುಪ್ಸೆಯನ್ನೂ ಗೆಲ್ಲಬಹುದು ಎಂಬ ಆಶೆಯಿಂದ ಇಂದು ಬೆಳಿಗ್ಗೆ ಇಲ್ಲಿಗೆ ಬಂದೆ. ಆ ನನ್ನ ಗೆಳತಿಯೇ ಬಂದು ಈವರೆಗೆ ಬಿಟ್ಟು ಹೋದಳು..'

ಕಿಶೋರಿಯ ಕಣ್ಣೆವೆಯು ಹನಿಗೂಡಿ ಕೊರಳುಬ್ಬಿಸಿತು. ಸತ್ಯಕಾಮರು ಒಮ್ಮೆ ಕಣ್ಣೆತ್ತಿ ನೋಡಿದರು, ಕನಕರವು ಹುಟ್ಟಿ ಅಡಗಿತು.

'ಸರಿ. ಆ ನಿನ್ನ ಗೆಳತಿ ಅವಳೇ ನನ್ನ ವೈರಿಯಾದಳು. ನನ್ನ ಶಾಂತಿ ದುರ್ಗವನ್ನು ಭೇದಿಸಿ ಮಾಮಾಯೆಯನ್ನು ಹೊಗಿಸಿದಳು.' ಹೀಗೆ ಸಂತಾಪ ದಿಂದ ಕುದಿವ ಮಾತುಗಳಾದವು. ಗಡಿಯಾರದಲ್ಲಿ ಹತ್ತು ಬಡಿಯಿತು. ಹನ್ನೊಂದಕ್ಕೆ ತಾವು ಶಾಲೆಯ ಕೆಲಸಕ್ಕೆ ಹೋಗಬೇಕೆಂದು ಸತ್ಯಕಾಮರು ನಿತ್ಯವಿಧಿಗಳಲ್ಲಿ ತೊಡಗಿದರು. ಹೀಗಾದರೂ ಕಿಶೋರಿಯನ್ನು ತಪ್ಪಿಸಬಹು ದೆಂದು ಅವರ ಯೋಚನೆ. ಕಿಶೋರಿಯು ಚಾಪೆಯ ಮೇಲೆ ಅಲ್ಲಿಯೇ ಒರಗಿ ಕೊಂಡಳು. ಸತ್ಯಕಾಮರು ಡಬ್ಬಿಯೂಟ ಮಾಡಿದರು. ಬೇರೊಂದು ತಾಟಿ ನಲ್ಲಿ ಅವಳಿಗೂ ಊಟ ಬಡಿಸಿಕೊಟ್ಟರು. ಅವಳು ಮುಟ್ಟಿದಂತೆ ಮಾಡಿ ಹಾಗೇ ಎದ್ದಳು. 'ದಯವಿಟ್ಟು ಇನ್ನು ಇಲ್ಲಿಂದ ಹೊರಡು' ಎಂದು ಸತ್ಯ ಕಾಮರು ಶಾಲೆಗೆ ಹೊರಟರು. 'ನಾನು ನೀವು ಹೋದಲ್ಲಿ ಬರುವೆ' ಎಂದು ಕಿಶೋರಿಯು ಬೆನ್ನ ಹಿಂದೆ ನೆರಳಿನಂತೆ ನಡೆದಳು. ಶಾಲೆಯಲ್ಲಿ ಸತ್ಯಕಾಮರು ಹೊಕ್ಕು ಹಿಂದಿರುಗಿ ನೋಡಲು ಅವಳು ಕಾಣಲಿಲ್ಲ. ಒಳ್ಳೇದಾಯಿತು ಎಂದು ಉಸಿರ್ಗರೆದರು. ಶಾಲೆಯ ಕೆಲಸವನ್ನು ಮುಗಿಸಿ ಇನ್ನು ಆ ಮನೆಯನ್ನು ಬದಲಿಸಬೇಕೆಂಬ ನಿಶ್ಚಯದಿಂದ ಅವರು ಗೇಟಿಗೆ ಬರಲು ಅಲ್ಲಿ ಕಿಶೋರಿಯು ನಷ್ಟದಾಂಪತ್ಯದ ಶಿಲಾಪ್ರತೀಕದಂತೆ ನಿಂತುಬಿಟ್ಟಿರುವಳು! ಸತ್ಯಕಾಮರು

ಅಯ್ಯೋ ಎಂದುಕೊಂಡರು. ಈಗ ಮನೆಗೆ ಹೋಗುವುದೇ ಬೇಡವೆಂದು ಲೋಕಲ್ ಗಾಡಿಯನ್ನು ಹತ್ತಿ ಜುಹುಕ್ಕೆ ಹೋದರು. ಅಲ್ಲಿಯೂ ಕಮಲ ಕಿಶೋರಿಯು ಬಂದಳು. ಸಮುದ್ರದ ದಡೆಯ ಮರಳಿನಲ್ಲಿ ಮುಂದೆ ಸತ್ಯ ಕಾಮರು, ಹಿಂದೆ ಕಮಲಕಿಶೋರಿ ಹೀಗೆ ತಿರುಗುತ್ತಿರುವರು. ಸೂರ್ಯನು ಮುಳುಗಿದನು, ಮಬ್ಬುಗತ್ತಲೆಯಾಯಿತು. ಜನಸಂದಣಿಯು ಕರಗಿತು. ಸತ್ಯ ಕಾಮರು ಒಂದೆಡೆ ಹೋಗಿ ಕುಳಿತರು. ಕಿಶೋರಿಯು ಅಲ್ಲಿಯೇ ಬಂದು ನಿಂತುಕೊಂಡಳು. ಸತ್ಯಕಾಮರು 'ಆಯಿತು, ಕೂಡು' ಎಂದರು. ಇಬ್ಬರೂ ಹೊಂದಿ ಕುಳಿತರು. ಸ್ನೇಹದ ಕಾವು ಇಬ್ಬರನ್ನೂ ಕೂಡಿಸಿದಂತೆ ಮಾಡಿತು. ಸಮುದ್ರದ ತೆರೆಗಳು ನೊರೆಗಟ್ಟಿ ಸಳಸಳ ಸಪ್ಪಳಮಾಡುತ್ತ ಹರಿದು ಬಂದು ತೀರಕ್ಕೆ ಅಪ್ಪಳಿಸಿ ಹೊರಟು ಹೋಗುವವು. ಸೃಷ್ಟಿಯೆಲ್ಲ ಶಾಂತವಾಗಿತ್ತು. ಕಮಲಕಿಶೋರಿಯು ಉತ್ಸಾಹಿತಳಾಗಿ ಸತ್ಯಕಾಮರ ಹೆಗಲ ಮೇಲೆ ಮೆಲ್ಲಗೆ ಕೈಹಾಕಿ 'ಪ್ರಿಯ, ಅಂದು ನಮ್ಮನ್ನು ಸೆಳೆದ ಪ್ರೇಮವು ಎಲ್ಲಿ ಹೋಯಿತು? ಇಂಗ್ಲಂಡಿನ ಆ ಸೊಗಸಾದ ಬೇಸಿಗೆಯ ದಿನ, ಹಚ್ಚಹಸುರು ಹೂಗಳ ಕಿರೀಟವನ್ನು ಧರಿಸಿ ಮೆರೆಯುವಾಗ ಪ್ರೇಮಾತುರರಾಗಿ ನಾವಿಬ್ಬರೂ ಕೂಡಿ ಕಲೆದೆವು, ಏಕಜೀವರಾದೆವು. ಇಂದಿನಂತೆ ಸಮುದ್ರದ ದಂಡೆಗೆ ಹೋಗಿ ವಿವಿಧ ವಿನೋದದಲ್ಲಿ ಅಮೃತನಿಮಿಷಗಳನ್ನು ಕಳೆದೆವು. ನಾವಿನ್ನು ಕಡೆವರೆಗೆ ಒಂದು, ಬಾಳಿನಲ್ಲಿಯೂ ಸಾವಿನಲ್ಲಿಯೂ ಒಂದು ಎಂದು ಇಬ್ಬರೂ ಕೂಗಿದೆವು. ಆ ಪ್ರೆಮವು ಎಲ್ಲಿ ಹೋಯಿತು?'

'ಎಲ್ಲಿಯೋ ಹೋಯಿತು. ಕಿಶೋರಿ' ಅದರ ನೆನವಿನಿಂದ ನನ್ನ ಮನ ದುರಿಯನ್ನು ಹೊತ್ತಿಸಬೇಡ. ಅದು ಪ್ರೇಮವಲ್ಲ, ಹುಚ್ಚು ಮೋಹವೆಂದು ತಿಳಿದುಹೋಯಿತು ನನಗೆ. ನೀನು ನನ್ನ ಬುದ್ಧಿಗೆ, ಮುಂದೆ ಬರುವ ಧನ ದಾಸೆಗೆ ಮೆಚ್ಚಿದೆ. ನಾನು ನಿನ್ನ ಸೌಂದರ್ಯಕ್ಕೆ, ಶರೀರಕ್ಕೆ ಮೆಚ್ಚಿದೆ. ಇದ ರಲ್ಲಿ ಎಲ್ಲಿಯ ಪ್ರೇಮ? ತಿರುಗಿ ಈ ದೇಶಕ್ಕೆ ಬಂದ ಮೇಲೆ ನನ್ನ ಬಡತನವು ಹೆಚ್ಚಿತು, ನಿನ್ನ ಪ್ರೇಮವು ಕರಗಿತು. ಬೇಡ, ಅದರ ಧ್ಯಾನವೇ ಬೇಡ, ಎಂದು ಸತ್ಯಕಾಮರು ಒಲುಮೆಯಿಂದ ಎದ್ದು ಹೊರಟರು. ಕಿಶೋರಿಯೂ ಹಿಂದೆ ನಡೆದಳು. ಅವರು ಮನೆ ಸೇರಿದರು, ಅವಳೂ ಒಳಹೊಕ್ಕಳು. ಪ್ರೇಮ ಜೀವಿಗಳಾಗಿ ಬೆಳಕು-ನೆರಳಿನಂತೆ ಯಾರು ತಮ್ಮ ಐಕ್ಯವನ್ನು ಜಗತ್ತಿಗೆ

ಆದರ್ಶವಾಗಿ ತೋರಬೇಕಾಗಿತ್ತೋ ಅವರು ಪ್ರೇಮಶೂನ್ಯರಾಗಿ ಅದನ್ನೇ ತೋರುತ್ತಿರುವರು. ರಾತ್ರಿಯೆಲ್ಲ ಅದೇ ಮನೆಯ ಎರಡು ಬೇರೆಬೇರೆ ಕೋಣೆಗಳಲ್ಲಿ ನಿದ್ದೆಗೇಡಾಗಿ ಕಳೆದರು. ಈ ದಂದುಗದಲ್ಲಿ ಎರಡು ಮೂರು ದಿನಗಳು ಎಳೆದೆಳೆದು ಹೋದವು. ಇನ್ನೇನು ಮಾಡಬೇಕೋ ಸತ್ಯಕಾಮರಿಗೆ ತಿಳಿಯದಾಯಿತು. ಕಮಲಕಿಶೋರಿಗೆ ನಿಜವಾದ ಪಶ್ಚಾತ್ತಾಪವಾಗಿತ್ತು. ಎಂಥ ಹೀನ ಸ್ಥಿತಿ ಬಂದರೂ ಸತ್ಯಕಾಮರ ಕೂಡ ಇನ್ನು ಜೀವಿಸಬೇಕೆಂದು ಅವಳು ಪ್ರೇಮಮಯಿಯಾಗಿ ಬಂದಿದ್ದಳು. ಆದರೆ ಹಿಂದಿನ ಪಶ್ಚಾತ್ತಾಪದ ಸೋಗುಗಳನ್ನು ಕಂಡ ಸತ್ಯಕಾಮರಿಗೆ ಇಂದಿನದು ನಿಜವೆಂದು ತಿಳಿಯುವುದು ಸಾಧ್ಯವೇ ಇರಲಿಲ್ಲ. ಅಲ್ಲದೆ, ಈ ಎಂಟು ಹತ್ತು ವರುಷಗಳ ಅಗಲಿಕೆಯಲ್ಲಿ ಅವರ ಜೀವನದ ಪ್ರವಾಹವೇ ಬೇರೆ ದಿಕ್ಕಿನಲ್ಲಿ ಹರಿಯುತ್ತಿತ್ತು; ದಾಂಪತ್ಯ ಜೀವನವು ಅದಕ್ಕೆ ನಿರ್ಮಾಲ್ಯದ ಹೂವಿನಂತಾಗಿತ್ತು. ಪ್ರೊ. ವೈಶಂಪಾಯನರಾಗಿದ್ದಾಗ ಕಮಲಕಿಶೋರಿಯನ್ನು ಆರಾಧ್ಯ ದೇವತೆಯೆಂದು ತಿಳಿದು ಸತ್ಯಕಾಮರು ಅದೆಷ್ಟು ಪರಿಯಿಂದ ಒಲಿಸಿಕೊಳ್ಳಲು ಹವಣಿಸಿದ್ದರು ! ಆಗ ಅದೆಲ್ಲವೂ ಬೋರಗಲ್ಲ ಮೇಲಿನ ನೀರಾಯಿತು. ಐಶ್ವರ್ಯ-ತಾರುಣ್ಯಗಳ ದರ್ಪವು ಆಗ ಕಿಶೋರಿಯ ಪ್ರೇಮವನ್ನು ಕರಗಿಸಿತು. ಈಗ ಅದು ಮರಳಿ ಬರುವಷ್ಟರಲ್ಲಿ ಸತ್ಯಕಾಮರ ಪ್ರೇಮವು ಸುಟ್ಟುಹೋಗಿದೆ. ಎರಡು ಜೀವಗಳು ಯಾವಾಗಲೂ ಒಲಿದು ಬಾಳುವುದು ಸಣ್ಣ ಮಾತೇ ?

ಹುರಿಹಂಚಿನ ಮೇಲೆ ಹಾಕಿದಂತೆ ಯಾತನೆಯ ಕೈಗೊಂಬೆಯಾಗಿ ಇನ್ನು ಮುಂದಿರುವುದು ಸತ್ಯಕಾಮರಿಗೆ ಅಸಾಧ್ಯವಾಯಿತು. ಬಲಾತ್ಕಾರದಿಂದ ಕಿಶೋರಿಯನ್ನು ಹೊರಗಟ್ಟಲು ಅವರ ಮನಸ್ಸೊಪ್ಪದು; ಸಾಮೋಪಚಾರದ ಮಾತುಗಳನ್ನು ಅವಳು ಕೇಳದಾದಳು. ಮತ್ತೆ ಐದಾರು ದಿನಗಳು ಜಡವಾಗಿ ನಡೆದವು. ಕೊನೆಗೆ ಒಂದು ರಾತ್ರಿಯೆಲ್ಲ ತಮ್ಮ ಧ್ಯಾನವನ್ನೂ ಮನನವನ್ನೂ ಮಾಡಿ ಆಳವಾಗಿ ತಮ್ಮೊಳಗೆ ಆಲೋಚಿಸಿ ಸತ್ಯಕಾಮರು ಒಂದು ವಜ್ರನಿಶ್ಚಯಕ್ಕೆ ಬಂದರು. ಅದರಿಂದ ಜೀವಕ್ಕೆ ಒಂದು ಧೈರ್ಯ, ಒಂದು ತೃಪ್ತಿ ಉಂಟಾದವು. ಬೆಳಿಗ್ಗೆ ಎದ್ದು ಸ್ನಾನಾದಿಗಳನ್ನು ತೀರಿಸಿ ತಾವು ಕೆಲಸಮಾಡುತ್ತಿರುವ ಶಾಲೆಗೆ ರಾಜೀನಾಮೆಯ ಪತ್ರವೊಂದನ್ನು ಬರೆದುಹಾಕಿದರು. ತಮಗೆ ತೀರ ಅಗತ್ಯ ಬೀಳುವ ಬಟ್ಟೆ ಬರೆಗಳನ್ನು ಒಂದು

ದೊಡ್ಡ ಕೈಚೀಲದಲ್ಲಿ ತುರುಕಿ ಇಟ್ಟು ಉಳಿದ ಸಾಮಾನಸಟ್ಟುಗಳನ್ನು ಮೂರು ನಾಲ್ಕು ದೊಡ್ಡ ಪೆಟ್ಟಿಗೆಗಳಲ್ಲಿ ಹಾಕಿ ಕೀಲಿ ಬಿಗಿದರು. ಕಿಶೋರಿಗೆ ಇದೇನೆಂದು ಅರ್ಥವಾಗಲಿಲ್ಲ. ಇನ್ನೊಂದು ಮನೆಗೆ ಹೊರಡುತ್ತಿರಬಹು ದೆಂದು ತಿಳಿದಳು. ಅವಳು ಕೇಳಿದ ಪ್ರಶ್ನೆಗೆ ಉತ್ತರವಿಲ್ಲ. ಏನು ಮಾಡು ವರೋ ನೋಡೋಣ ಎಂದು ಸುಮ್ಮಗಿದ್ದಳು. ಸತ್ಯಕಾಮರು ಹೊರಡು ವುದಕ್ಕೆ ಸಿದ್ಧವಾಗಿ ಮನೆಯ ಮಾಲಕನನ್ನು ಕರೆದು ಹೇಳಿದರು: 'ನಾನಿಂದು ಮನೆ ಬಿಡುತ್ತಿರುವೆ. ಇದು ನಿಮ್ಮ ಬಾಡಿಗೆ ಹಣ. ಇಲ್ಲಿ ನನ್ನ ಕೆಲವು ಪೆಟ್ಟಿಗೆ ಗಳಿವೆ. ಈ ಸ್ತ್ರೀಯು ಅವುಗಳ ಮಾಲಕಳು. ಅವಳು ಬಂದರೆ ಅವಳಿಗೆ ಕೊಟ್ಟು ಬಿಡಿರಿ. ಇಲ್ಲದಿದ್ದರೆ ನಿಮಗೆ ತೋರಿದಂತೆ ದಾನಮಾಡಿರಿ.' ಹೀಗೆಂದು ತಮ್ಮ ಚೀಲವನ್ನು ಹಿಡಿದುಕೊಂಡು ಹೊರಡಲನುವಾದರು. ಕಿಶೋರಿಯು ಕಣ್ಣೀರು ತುಂಬಿಕೊಂಡು ಅಡ್ಡಗಟ್ಟಿದಳು. 'ನೀವಿಲ್ಲದೆ ಯಾವದಿದ್ದರೇನು ?' ಎಂದು ಬಿಕ್ಕುತ್ತ ಆಡಿದಳು.

'ಇನ್ನು ನನ್ನನ್ನು ಯಾರೂ ತಡೆಯಲಾರರು' ಎಂದು ಸತ್ಯವನ್ನು ಅರಸುತ್ತ ಕಾಡಿಗೆ ಹೊರಟ ಧ್ರುವರಾಯನಂತೆ ಸತ್ಯಕಾಮರು ಹಾದಿ ಹಿಡಿ ದರು. ಜೀವ ನಿಲ್ಲದೆ ಕಿಶೋರಿಯು ಹಿಂದೆ ಹಿಂದೆ ನಡೆದಳು. ಕಾಲುನಡಿಗೆ ಯಿಂದ ಮುಂಬಯಿಯ ಉದ್ದಾನುದ್ದ ಊರನ್ನು ಸಂಜೆಯ ಹೊತ್ತಿಗೆ ದಾಟಿ ದರು. ಎಲ್ಲಿಗೆ ಹೋಗಬೇಕೆಂಬ ಗುರಿಯಿಲ್ಲ. ಸಣ್ಣಪುಟ್ಟ ಹಳ್ಳಿಗಳನ್ನೆಲ್ಲ ದಾಟಿ ದ್ದಾಯಿತು. ಬೆಟ್ಟುಗುಡುವ ಕಾಡು ಹತ್ತಿತು. ಸತ್ಯಕಾಮರಿಗೆ ಇನ್ನೂ ಆಯಾಸವೆಂಬುದು ಆಗಿರಲಿಲ್ಲ. ಆದರೆ ಕಾಲೆಳೆಯುತ್ತ ಬೆನ್ನಟ್ಟಿದ ಕಿಶೋರಿಯ ಸ್ಥಿತಿಯು ಕರುಣಾಜನಕವಾಯಿತು. ಕಾಲಿನ ಶಕ್ತಿ ಕುಂದಿತು. ಅಂದು ಊಟ ವಿಲ್ಲದ್ದರಿಂದ ಮೈಯ ತ್ರಾಣವೂ ಇಲ್ಲದಾಯಿತು. 'ಬರಬೇಡ, ನನ್ನ ಹಿಂದೆ ಬರಬೇಡ' ಎಂದು ಸತ್ಯಕಾಮರು ಎಷ್ಟು ಅಲ್ಪರಿದು ಹೇಳಿದರೂ ಅವಳು ಕೇಳಲಿಲ್ಲ. ಪ್ರೇಮದ ಆವೇಶವು ಅವಳನ್ನು ನೂಕುತ್ತ ತಂದಿತ್ತು. ರಾತ್ರಿಯ ಮಬ್ಬು ದಟ್ಟವಾಯಿತು. ಕತ್ತಲೆಯಲ್ಲಿ ಒಂದು ಸಣ್ಣ ತೆಗ್ಗಿನಲ್ಲಿ ತಿಳಿಯದೆ ಜಾರಿ ಬಿದ್ದು ಕಿಶೋರಿಯು ಮೂರ್ಛೆ ಹೊಂದಿದಳು. ಸತ್ಯಕಾಮರು ತಿರುಗಿ ನೋಡಿದರು, ಧಾವಿಸಿ ಹೋಗಿ ಅವಳನ್ನು ತೊಡೆಯ ಮೇಲೆ ಹಾಕಿಕೊಂಡು ಗಾಳಿ ಹಾಕಿದರು. ಕೆಲ ನಿಮಿಷಗಳಲ್ಲಿ ಎಚ್ಚರು ಬಂದಿತು. ಅವಳನ್ನು ಹಾಗೆ

ಬಿಟ್ಟು ಹೋಗುವುದು ಅವರಿಗೆ ಅಮಾನುಷವೆಂದು ತೋರಿತು. ಮೆಲ್ಲಗೆ ಕೈಹಿಡಿದು ಹತ್ತಿರದ ಸ್ಟೇಶನ್ನಿಗೆ ಕರೆದುಕೊಂಡು ಹೋಗಿ ಮುಂಬಯಿಯ ಗಾಡಿಯೊಂದನ್ನು ಅವಳ ಕೂಡ ಹತ್ತಿದಿರು. ಅವಳ ಹಿಂದಣ ಮಾತಿನಲ್ಲಿ ಅವಳ ಗೆಳತಿಯ ಮನೆಯ ಪತ್ತೆಯನ್ನು ಸತ್ಯಕಾಮರು ಕೇಳಿಕೊಂಡಿದ್ದರು. ಅವಳನ್ನು ಈಗ ಅಲ್ಲಿಗೆ ಕರೆದುಕೊಂಡು ಹೋಗಿಬಿಟ್ಟು 'ಇವಳನ್ನು ನೋಡಿಕೊಳ್ಳಿರಿ' ಎಂದರು.

ನಡೆದಾಟದಿಂದ ನಿರ್ವಿಣ್ಣಳಾದ ಕಿಶೋರಿಗೆ ಮಾತು ಕೂಡ ಆಡಲು ತ್ರಾಣವಿರಲಿಲ್ಲ.

ಸತ್ಯಕಾಮರು 'ಆಯಿತು, ಕಿಶೋರಿ, ಹೋಗುತ್ತೇನೆ, ಕೊನೆಯ ಪ್ರಣಾಮ' ಎಂದು ಗಟ್ಟಿಮನಸ್ಸಿನಿಂದ ಹೊರಟುಬಿಟ್ಟರು.

ಮಧ್ಯರಾತ್ರಿಗೆ ಮುಂಬಯಿ ಬಿಡುವ ಗಾಡಿಯೊಂದು ಇದ್ದಿತು. ಅದರಲ್ಲಿ ಕುಳಿತು ಸತ್ಯಕಾಮರು ಬೆಳಿಗ್ಗೆ ಪುಣೆ ಸೇರಿದರು. ಎತ್ತಹೋಗಬೇಕೆಂಬ ನಿರ್ಣಯವು ಗಾಡಿಯಲ್ಲಿ ಆಗಿಬಿಟ್ಟಿತ್ತು. ಪುಣೆ-ಬೆಂಗಳೂರಿನ ಗಾಡಿಯನ್ನು ಹತ್ತಿ ಮಾರನೆಯ ದಿನ ಬೆಳಿಗ್ಗೆ ಒಂದೆರಡು ತಾಸು ರಾತ್ರಿ ಇರುವಾಗ ಹುಬ್ಬಳ್ಳಿಗೆ ಇಳಿದರು. ಇಳಿದವರು ಹಾಗೇ ಕತ್ತಲೆಯಲ್ಲಿ ಮಲೆನಾಡಿನ ಕಡೆಯ ದಾರಿಗುಂಟ ನಡೆದರು. ಬೆಳಗಾಯಿತು, ಊರು-ಉದ್ಯಾನವನ್ನು ಬಿಟ್ಟು ತುಂಬಾ ದೂರ ಬಂದಿದ್ದರು. ದಾರಿಗುಂಟ ಎತ್ತರ ಮರಗಳು ಬೆಳೆದು ನಿಂತಿವೆ. ಯಾನ್ನೊಬ್ಬ ಮನುಷ್ಯನ ಸುಳಿವಿಲ್ಲ. ಸೂರ್ಯನು ಎದ್ದನು. ಬೆಳಕು ಬಣ್ಣಗಳು ಚಿಮ್ಮಿದವು. ತಮ್ಮ ಸಾಧನವನ್ನು ಮತ್ತೆ ಮುಂದರಿಸಬೇಕೆಂದೂ ಕದಡಿದ ಶಾಂತಿಯ ಕಣಲನ್ನು ತಿರುಗಿ ತಿಳಿಮಾಡಬೇಕೆಂದೂ ಸತ್ಯಕಾಮರು ಹೊಸ ಉತ್ಸಾಹದಿಂದ ಪ್ರೇರಿತರಾದರು. ಹಾಗೇ ಮುಂದೆ ಸಾಗುತ್ತ ಹಿರಿದಾರಿಯನ್ನು ಬಿಟ್ಟು ಕಾಡಿನಲ್ಲಿ ಹೊಕ್ಕರು. 'ಸೃಷ್ಟಿಯು ಕೊಡುವ ಕಾಯಿ ಹಣ್ಣುಗಳೇ ನನಗೆ ತಿನಿಸು, ಗಿಡದ ನೆರಳೇ ನನಗೆ ಮನೆ' ಎನ್ನುತ್ತ ಮುನ್ನಡೆದರು. ಕಿಶೋರಿಯು ಎಲ್ಲಿ ಹಿಂಬಾಲಿಸುವಳೆಂದು ನೋಡಿನೋಡಿ ರೂಢವಾದ ಗೋಣುಮರಳಿ ಹಾಗೆ ನೋಡಿತು; ಅವಳು ಸಾವಿರಾರು ಗಾವುದ ದೂರವೆಂದು ಮನಗಂಡಿತು. ಒಂದು ದಿನ್ನೆಯನ್ನು ಏರಿ ನಿಂತು ಸತ್ಯಕಾಮರು ತಮ್ಮೊಳಗೆ ಅಂದರು. 'ಕಿಶೋರಿಯು ಬರಲಾಗದ ಕನ್ನಡ ದೇಶಕ್ಕೆ ಬಂದು

ಬಿದ್ದೆ. ಇಲ್ಲಿಗೆ ಅವಳೂ ಬರಳು, ಅವಳ ಗೆಳತಿಯೂ ಬರಳು.' ಅದೇ ದಿನ್ನೆಯ
ಒಂದು ಕಲ್ಲುಬಂಡೆಯ ಮೇಲೆ ಆಸನ ಹಾಕಿಕೊಂಡು ಸೂರ್ಯನಿಗೆ ಇದಿ
ರಾಗಿ ಕುಳಿತುಕೊಂಡು ಅವರು ಧ್ಯಾನಮಗ್ನರಾದರು. ಅಗಲಿದ ಶಾಂತಿಯು
ಮತ್ತೆ ಬರತೊಡಗಲು ಹರ್ಷಭರದಿಂದ ಕೂಗಿದರು: 'ಕೊನೆಗೆ ನನ್ನ ಕನ್ನಡ
ನಾಡೇ ನನ್ನ ತಪೋಭೂಮಿಯಾಯಿತು. ನನ್ನ ತಪಸ್ಸಿನಿಂದ ನನಗೇನೂ
ದೊರೆಯದೆ ಹೋಗಲಿ, ನನ್ನ ನಾಡು ಧನ್ಯವಾಗಲಿ. ಕನ್ನಡವನ್ನು ಮೇಲೆತ್ತಿ
ಮೆರಸುವ ಕಾರಣಪುರುಷನು ಹುಟ್ಟಿ ಬರಲಿ.'

---

## ಪ್ರಕರಣ ೧೨

ಕಲ್ಯಾಣರಾಯರಿಗೆ ಅಂದಿನ ಸಭೆಯಲ್ಲಿ ಆದ ಅವಮಾನದಿಂದಲೂ
ಕನ್ನಡದ ಕೆಲಸಕ್ಕೆ ಬಿದ್ದ ಪೆಟ್ಟಿನಿಂದಲೂ ಮಾಮಣ್ಣನು ಖಿನ್ನಗೊಂಡು ಹತಾಶ
ನಾಗಿ ಕೆಲವು ದಿನಗಳನ್ನು ನೂಕಿದನು. ಅವನ ಉತ್ಸಾಹವೂ ವಿಚಾರಶಕ್ತಿಯೂ
ಅಳಿದುಹೋಗಿದ್ದವು. ಇಷ್ಟರಲ್ಲಿ ಪದ್ಮಕ್ಕನಿಗೆ ದಿನದಲ್ಲಿ ಬಿದ್ದುದರಿಂದ ಹಡೆ
ಯುವ ದಿನವು ಹತ್ತಿರ ಬಂದಿತು. ಅವಳಿಗೆ ತೊಂದರೆಯಾಗಬಾರದೆಂದು
ಗೋಪಾಲನನ್ನು ಆಡಿಸುವುದು ಅವನ ಮುಖ್ಯ ಕೆಲಸವಾಗಿತ್ತು. ಮನೆಯಲ್ಲಿ
ತನ್ನ ನಿರುದ್ಯೋಗದ ಬಗ್ಗೆ ಭೀಮರಾಯರಿಂದಲೂ ಇತರರಿಂದಲೂ ಯಾವ
ಚುಚ್ಚುಮಾತುಗಳು ಕೇಳಬಂದರೂ ಅವನು ನಿರ್ವಾಹವಿಲ್ಲದೆ ತಡಕೊಳ್ಳ
ಬೇಕಾಯಿತು. ಅತ್ತೆಮಾವಂದಿರ ಸಮಾಧಾನಕ್ಕಾಗಿ ಈ ಸಾರೆ ಮನೆಯ
ಲ್ಲಿಯೆ ಬಾಣಂತನವನ್ನು ಮಾಡುವುದೆಂದು ಗೊತ್ತಾಗಿತ್ತು. ಆದರೆ ಹೆರಿಗೆಯು
ಸುಸೂತ್ರವಾಗಲಿಲ್ಲ. ಎರಡುಮೂರು ದಿನ ಬೇನೆ ತಿಂದು ಪದ್ಮಕ್ಕ ಅತಿಯಾಗಿ
ಶ್ರಮಬಟ್ಟು ಹೆಣ್ಣು ಹಡೆದಳು. ಅವಳ ಹತ್ತಿರ ಇರುವುದಕ್ಕಾಗಿ ನರ್ಸ್ ಒಬ್ಬ
ಳನ್ನು ಕರೆದಿತ್ತು. ಅವಳಿಂದ ಉಪಯೋಗವಾಯಿತೊ ಇಲ್ಲವೊ, ಎಲ್ಲರ
ಗಾಬರಿಯು ಮಾತ್ರ ಕಡಿಮೆಯಾಯಿತು. ಹಡೆದ ದಿನದಿಂದ ಎಂಟುಹತ್ತು
ದಿನಗಳವರೆಗೆ ಬಿಟ್ಟುಬಿಡದೆ ಸಣ್ಣ ಜ್ವರ ಇರುತ್ತಿದ್ದವು. ಅದಕ್ಕೆ ಔಷಧ ಉಪ
ಚಾರ ನಡೆಯಿತು. ನಿರುದ್ಯೋಗಿ ಅಳಿಯನಿಗಾಗಿ ತಾವು ವೆಚ್ಚ ಮಾಡಬೇಕು,
ಅವನಿಗಾದರೊ ಅದರ ಉಪಕಾರವಿಲ್ಲ ಎನ್ನುತ್ತ ಭೀಮರಾಯರು ಮನಸ್ಸಿ

ನಲ್ಲಿ ರೇಗುತ್ತಿದ್ದರು; ಒಮ್ಮೊಮ್ಮೆ ಇನ್ನೊಂದು ಮಾತಿನಮೇಲೆ ಹಾಯಿಸಿ ರಾಮಣ್ಣನಿಗೆ ಛೀಥೂ ಎನ್ನುತ್ತಿದ್ದರು. ಹಂದಿಗಿಂತ ತನ್ನ ಬಾಳು ಹೇಸಿ ಎಂದು ರಾಮಣ್ಣನು ಅನಿಸಿಕೊಂಡು ಮರುಗುತ್ತಿದ್ದನು. ಮುಂದೆ ಪದ್ದಕ್ಕನ ಜ್ವರ, ನಿಂತವು. ಯಥಾಪ್ರಕಾರವಾಗಿ ಬಾಣಂತನವು ನಡೆಯಿತು. ರಾಮಣ್ಣನಿಗೆ ಎಷ್ಟೋ ಚಿಂತೆ ತಪ್ಪಿತು.

ತನ್ನ ಮುಂದಿನ ಕಾರ್ಯವನ್ನು ಗೊತ್ತುಪಡಿಸಬೇಕೆಂದು ರಾಮಣ್ಣನು ವಿಚಾರಪರನಾದನು. ಕನ್ನಡವನ್ನು ಬಿಟ್ಟು ಬೇರೆ ಕೆಲಸದಲ್ಲಿ ತೊಡಗುವುದೆಂದರೆ ಮನಸ್ಸಿಗೆ ಒಗ್ಗದು. ಆದರೆ ಕನ್ನಡದ ಕೆಲಸವೆಂದರೆ ಮುಳ್ಳಿನ ಹಾಸಿಗೆ, ಕಿಚ್ಚಿನ ಕೊಂಡ. ತನ್ನ ಸ್ವಾಭಿಮಾನಕ್ಕಾಗಿ ಎಲ್ಲಿಯಾದರೂ ನೌಕರಿಯನ್ನು ಹಿಡಿದು ಹೆಂಡತಿ ಮಕ್ಕಳನ್ನು ಕರೆದುಕೊಂಡು ಹೋಗಿ ತನ್ನ ಸಂಸಾರವನ್ನು ಹೂಡಬೇಕೆಂದು ಅವನ ವ್ಯಾವಹಾರಿಕ ಮನಸ್ಸು ಹೇಳುತ್ತಿತ್ತು. ಆದರೆ ಕನ್ನಡದ ಸೇವೆಗೆ ಆಯುಷ್ಯವನ್ನು ಅರ್ಪಿಸು ಎಂದು ಆದರ್ಶವಾದವು ಕೈಮಾಡಿ ಹೇಳುತ್ತಿತ್ತು. ಒಮ್ಮೆ ಆದರ್ಶವಾದಕ್ಕೆ ಬೇಸತ್ತು ಎಂಥ ಚಾಕರಿಯನ್ನಾದರೂ ಹಿಡಿಯೋಣ ಎಂದು ಹುಡುಕುತ್ತ ಹೊರಟನು. ಮೊದಲಿನ ಪರಿಸ್ಥಿತಿಯೇ ಕಂಡುಬಂದಿತು. ಒಂದು ಆಫೀಸಿಗೆ ಹೋಗಿ ಅರ್ಜಿ ಕೊಟ್ಟನು. ಅಲ್ಲಿ ಅದೇ ಇಪ್ಪತ್ತು ರೂಪಾಯಿಯ ಚಾಕರಿಗೆ ಐನೂರು ಅರ್ಜಿಗಳು ಬಂದಿರುವವೆಂದು ತಿಳಿಯಿತು. ರಾಮಣ್ಣನಿಗೆ ಹುಚ್ಚು ನಗೆ ಬಂದಿತು. ಆ ಆಫೀಸಿನಿಂದ ಹೊರಬೀಳುವಷ್ಟರಲ್ಲಿ ಸೂಟುಬೂಟಿನಲ್ಲಿ ಸುತ್ತಾಡುವ ಮಿತ್ರ ಮುರಲಿಯು ಸಿಕ್ಕನು. ಅವನು ಅದೇ ಸ್ಥಳಕ್ಕೆ ಪ್ರಯತ್ನಮಾಡುವನೆಂದು ಗೊತ್ತಾಯಿತು. ಮುಂಬಯಿಯಲ್ಲಿ ಮಾಡಿದ ತನ್ನ ವಿಶ್ವಪ್ರಯತ್ನಗಳು ಹೇಗೆ ನಿಷ್ಫಲವಾದವೆಂಬುದನ್ನು ಮುರಲಿಯು ದೈನ್ಯದಿಂದ ಬಣ್ಣಿಸಿದನು. ಅವನ ಮುಂಚಿನ ಹಮ್ಮು ಕಡಿಮೆಯಾಗಿತ್ತು.

'ಆಯಿತು ಮುರಲಿ, ನಿರುದ್ಯೋಗ ಸೈನ್ಯಕ್ಕೆ ಇಬ್ಬರೂ ಸೈನಿಕರಾಗಿ ಸೇರಿದೆವೇಳು' ಎಂದು ರಾಮಣ್ಣ ಆಡಿದನು. ಇಬ್ಬರೂ ಸಂಕಟ ನುಂಗಿಕೊಂಡು ನಕ್ಕರು.

'ಇನ್ನು ಹಳ್ಳಿಯೊಳಗೇ ಇದ್ದುಕೊಂಡು ನಮ್ಮ ರೋಮಾನ್ಸ ನಡೆಸಬೇಕೇ, ರಾಮಣ್ಣಾ' ಎಂದು ಮುರಲಿಯು ನಿರಾಶೆಯಿಂದ ಉಸುರಿದನು.

'ಅದೇ ಒಳ್ಳೇದು, ಮುರಲಿ. ಅದನ್ನು ಹೀಯಾಳಿಸಬೇಡ. ನಿನಗೆ ಹೊಲಗಳಿವೆ, ಮನೆಯಿದೆ. ನಿನ್ನ ಹಳ್ಳಿಗೆ ಹೋಗಿ ಒಕ್ಕಲಿಗನಾಗು, ಸೊಗಸಾಗಿ ಬಾಳುವೆ ಮಾಡು. ಅದರಲ್ಲಿಯೂ ರೋಮಾನ್ಸ ಇರುವದು.'

'ಆಗಿಹೋಯಿತು. ವಾಮಣ್ಣಾ, ನಿನ್ನ ಮಾತು ಕೇಳಿದರೆ ಮೊಲಕ್ಕೆ ಕೋಡು ಹುಟ್ಟಬೇಕು. ಯಾರು ಇದ್ದಾರೋ ಆ ಅರಿಷ್ಟ ಹಳ್ಳಿಯಲ್ಲಿ! ಶಹರದಲ್ಲಿ ನೌಕರಿ ಸಿಕ್ಕಿತು ನೆಟ್ಟಗಾಯಿತು. ಇಲ್ಲದೆ ಹೋದರೆ ಹಳ್ಳಿಯ ಆಸ್ತಿಯನ್ನೆಲ್ಲ ಮಾರಿ ಬಂದ ರಕಮನ್ನೆಲ್ಲ ಬ್ಯಾಂಕಿನಲ್ಲಿಟ್ಟು ಧಾರವಾಡದಲ್ಲಿ ಅದರ ಬಡ್ಡಿಯ ಮೇಲೆ ಇರತೀನಿ. ಸಿನೇಮಾ, ರೇಡಿಯೊ, ಮೋಟರ, ರೇಲ್ವೆ ಇವನ್ನೆಲ್ಲಾ ಬಿಟ್ಟು ಹಳ್ಳೀ ಕೊಂಪಿಯೊಳಗೆ ಇದ್ದರೂ ಸತ್ತಂಗೇ ಸರಿ!'

ಮುರಲಿಯ ಕೂಡ ಮಾತು ಮುಂದರಿಸುವುದು ವಾಮಣ್ಣನಿಗೆ ಬೇಡವಾಯಿತು. 'ಒಳ್ಳೇದು, ಹಾಗೇ ಆಗಲಿ' ಎಂದು ಬೀಳ್ಕೊಟ್ಟು ತನ್ನ ಮನೆಯತ್ತ ಹೊರಟನು. ಹಾದಿಯಲ್ಲಿ ವಿಚಾರಮಾಲೆಗಳು ಮುಸುರಿ ಬಂದವು. ಮುರಲಿಯನ್ನೂ ಮುರಲಿಯ ಸ್ವಭಾವದ ಅನೇಕ ತರುಣರನ್ನೂ ನೆನೆದು ಗೋಳಿಟ್ಟನು. ಯಾವ ಕಾಲದಲ್ಲಿ ಕನ್ನಡಕ್ಕೆ ಲೆಕ್ಕವಿಲ್ಲದ ತರುಣರು ಮುಂಬರಿದು ಬಂದು ತಮ್ಮ ವಿವಿಧ ಸೇವೆಯನ್ನು ಸಲ್ಲಿಸಬೇಕಾಗಿದೆಯೋ ಅಂಥ ಕಾಲಕ್ಕೆ ಮುರಲಿಯಂಥ ಸ್ವಾರ್ಥಿಗಳೂ ಸುಖಲೋಲುಪರೂ ಆದರ್ಶದ್ವೇಷಿಗಳೂ ಈ ನಾಡಿನಲ್ಲಿ ಹುಟ್ಟಿರುವರಲ್ಲ ಎಂದು ಬೆಂದು ಬೆಂಡಾದನು. ಕನ್ನಡದ ಕೆಲಸದಲ್ಲಿ ತನಗೂ ತನ್ನ ಪ್ರಪಂಚಕ್ಕೂ ಸಾವು ಅಡರಿದರೂ ತಪ್ಪಿಲ್ಲ, ತಾನು ತನ್ನ ನಿಶ್ಚಿತ ಆದರ್ಶವನ್ನು ಬಿಡಕೂಡದೆಂದು ಅಗಳೆ ಸಂಕಲ್ಪಮಾಡಿದನು.

ಒಂದು ದಿನ ವಾಮಣ್ಣನಿಗೆ ತನ್ನ ಭವಿಷ್ಯದ ಬಗ್ಗೆ ವಿಚಾರವೊಂದು ಹೊಳೆಯಿತು. ಕನ್ನಡದ ಅಕ್ಕರೆಯು ಜನದಲ್ಲಿ ಹಬ್ಬಬೇಕಾದರೆ ಕನ್ನಡದ ಪುಸ್ತಕಗಳ ಓದು ಹೆಚ್ಚಬೇಕು. ತಾವಾಗಿಯೇ ನಮ್ಮ ಜನರು ಪುಸ್ತಕಗಳನ್ನು ಕೊಂಡು ಓದುವುದಿಲ್ಲ. ಹಾಗಾದರೆ ಆನಂದಮೂರ್ತಿಗಳ ಒಂದೆರಡು ಕವಿತೆಯ ಪುಸ್ತಕಗಳನ್ನೂ ಉಳಿದವರ ಕಥೆ-ಕಾದಂಬರಿಗಳನ್ನೂ ತಗೊಂಡು ಊರೂರಿಗೆ ಮಾರಾಟ ಮಾಡುತ್ತ ಹೋದರೆ ಕನ್ನಡ ಸಾಹಿತ್ಯದ ಪ್ರಸಾರವಾಗುವುದು, ತನಗೆ ತುಸು ಆದಾಯವೂ ಬರುವುದು. ಆನಂದ

ಮೂರ್ತಿಗಳು ಅದಕ್ಕೆ ಒಪ್ಪಿಗೆ ಕೊಟ್ಟರು. ಕೆಲವು ಪುಸ್ತಕಾಲಯದವರು ತಮ್ಮ ಪುಸ್ತಕಗಳನ್ನು ಕಮೀಶನ್ನಿನ ಕರಾರಿನ ಮೇಲೆ ಮಾರಲು ಕೊಟ್ಟರು. ತಾನು ಪದವೀಧರನು ಇಂಥ ಕೆಲಸವನ್ನು ಮಾಡಬೇಕಾಯಿತೆಂದು ಅವ ನೇನು ಹಳಹಳಿಸಲಿಲ್ಲ. ಕುಚೋದ್ಯಗಾರರು ನಗೆಯಾಡಿದರು. ಅದನ್ನು ಅವನು ಲೆಕ್ಕಿಸಲಿಲ್ಲ. ಮನೆಯಲ್ಲಿ ಎಲ್ಲರೂ ವಿರೋಧಿಸಿದರು. ಅವನು ಅದಕ್ಕೆ ಸೊಪ್ಪುಹಾಕಲಿಲ್ಲ. ಧಾರವಾಡ ಜಿಲ್ಹೆಯ ಮುಖ್ಯ ಊರುಗಳಿಗೆ ಮೊದಲು ಹೋಗಬೇಕೆಂದು ಹೊರಟನು. ಪುಸ್ತಕ ಹೊತ್ತುಕೊಂಡು ಮನೆಮನೆಗೆ ತಿರುಗಿದನು. ಕವಿತೆಯ ಪುಸ್ತಕಗಳಿಂದ ಕವಿತೆಗಳನ್ನು ಒಮ್ಮೊಮ್ಮೆ ಓದಿ ತೋರಿಸುವನು, ಕತೆ-ಕಾದಂಬರಿಗಳ ಕಥಾಸಾರವನ್ನು ಹೇಳುವನು, ಗ್ರಂಥ ಪರಿಚಯವನ್ನು ಮಾಡಿಕೊಡುವನು. ಇಷ್ಟೆಲ್ಲ ಒಂದು ತಾಸಿನವರೆಗೆ ಆದ ಮೇಲೆ ತೀರ ಸುಲಭ ಬೆಲೆಯ ಯಾವದಾದರೊಂದು ಕಿರುಕುಳ ಪುಸ್ತಕವನ್ನು ಕೆಲವರು ಕೊಂಡು ಕಳಿಸುತ್ತಿದ್ದರು. ಕೆಲವರು ಪುಸ್ತಕವನ್ನು ಇಟ್ಟು ಹೋಗಲು ಹೇಳಿ ಎರಡು ಮೂರು ದಿನಗಳಲ್ಲಿ ಓದಿ, ಬೆಲೆ ಕೇಳಲಿಕ್ಕೆ ಹೋದಾಗ ಮಾಸಿದ ಪುಸ್ತಕವನ್ನೆ ತಿರುಗಿ ಕೊಡುತ್ತಿದ್ದರು. ಕನ್ನಡ ಜನವು ಉದಾರತೆಗೆ ಹೆಸರಾದದ್ದಲ್ಲವೇ ? ತಾವು ಕೊಳ್ಳುವ ಮನಸ್ಸಿಲ್ಲದೆ ಕೆಲವರು 'ಲಾಯಬ್ರಿಗೇ ಕೊಡಿರಿ, ನಾವು ಅಲ್ಲಿಯೇ ಓದುತ್ತೇವೆ' ಎಂದು ಹೇಳಿ ಬಿಡುತ್ತಿದ್ದರು. ಲಾಯಬ್ರರಿಯ ಸೆಕ್ರೆಟರಿಯನ್ನು ಕಂಡರೆ ಅವರ ನಿರಾಶಾ ಪುರಾಣವು ಆರಂಭವಾಗುತ್ತಿತ್ತು. 'ಲಾಯಬ್ರರಿಯಲ್ಲಿ ವರ್ತಮಾನಪತ್ರಕ್ಕೆ ಸಾಕಷ್ಟು ದುಡ್ಡಿಲ್ಲ, ಮೆಂಬರ ಜನರು ಐದಾರು ವರ್ಷದ ಬಾಕೀ ಕೊಟ್ಟಿಲ್ಲ' ಮುಂತಾಗಿ ರಗಳೆ ನಡೆಯುತ್ತಿತ್ತು. ವಾಮಣ್ಣನಿಗೆ ತೋರಿತು: ' ನಮ್ಮಲ್ಲಿ ವಾಚನಾಲಯಗಳು ಹೆಚ್ಚಾಗಿ ವ್ಯವಸ್ಥಿತವಾಗಿ ನಡೆಯಬೇಕೆಂದರೆ ನಮ್ಮ ಜನರ ಪುಸ್ತಕಪ್ರೀತಿಯು ಹೆಚ್ಚಬೇಕು. ಪುಸ್ತಕಪ್ರೀತಿಯು ಹೆಚ್ಚಬೇಕಾ ದರೆ ವಾಚನಾಲಯಗಳು ಹೆಚ್ಚಬೇಕು ! ' ಇಂಥ ಎಷ್ಟೋ ವಿಷಮಚಕ್ರ ಗಳಲ್ಲಿ ಕನ್ನಡ ನಾಡು-ನುಡಿಗಳು ಈಗ ಸಿಲುಕಿರುವವೆಂದು ಯೋಚಿಸಿ ಅವನು ಬಹಳವಾಗಿ ವಿಷಾದಪಟ್ಟನು. 'ಒಂದು ಕೆಲಸವನ್ನು ಮಾಡಹೋದರೆ ಇನ್ನೊಂದು ಮಾಡುವುದು ಹೆಚ್ಚು ಅಗತ್ಯವೆಂದು ತೋರುತ್ತದೆ. ಅದನ್ನು ಮಾಡಹೋದರೆ ಮೊದಲಿನದು ಹೆಚ್ಚು ಅಗತ್ಯವೆಂದು ಅನಿಸುತ್ತದೆ. ಅಯ್ಯೋ ಕನ್ನಡವೇ ಎಂದು ' ಕೊರಗಿದನು.

ಪುಸ್ತಕ ವ್ಯಾಪಾರದಿಂದ ತಿಂಗಳಿಗೆ ಹತ್ತು ರೂಪಾಯಿ ಕೂಡ ರಾಮಣ್ಣ ನಿಗೆ ಸಿಗುವುದು ಕಷ್ಟಸಾಧ್ಯವಾಯಿತು. ಬೆಳೆದ ಸಂಸಾರಕ್ಕೆ ಇಪ್ಪತ್ತು ಬಂದರೂ ಸಾಲುವಂತಿರಲಿಲ್ಲ. ಆದ್ದರಿಂದ ಲಾಭದ ಲೆಕ್ಕಚಾರವನ್ನು ಬಿಟ್ಟು ಕೊಟ್ಟು ವಾಚನಾಲಯಗಳ ಕೇವಲ ಪ್ರಚಾರಕ್ಕೆಂದು ಹಳ್ಳಿಹಳ್ಳಿಗೆ ಕಾಲು ನಡಿಗೆಯಿಂದ ಒಂದು ತಿಂಗಳು ತಿರುಗಿದನು. ಆಯಾ ಹಳ್ಳಿಯ ಚಾವಡಿಗೆ ಹಿರಿಯರನ್ನು ಕರೆದು ಲೆಕ್ಚರು ಕೊಟ್ಟು ಹಾಡು ಹೇಳಿ ವಾಚನಾಲಯ ವೊಂದನ್ನು ಜೊರಡಿಸಬೇಕೆಂದು ಕೇಳುತ್ತಿದ್ದನು. ಏನೋ ಗಾಂದೆಪ್ಪನ ಚಳ ವಳಿಯ ಸಂಬಂಧಿ ಲೆಕ್ಚರೆಂದು ಹಳ್ಳಿಗರನೇಕರು ಅರ್ಥಮಾಡಿಕೊಂಡು ಹೋಗುತ್ತಿದ್ದರು. ಅದರಲ್ಲಿಯೇ ತಿಳವಳಿಕೆಯಿದ್ದವರು 'ಎಲ್ಲೀ ಲಾಯಬ್ರರೀರಿ ಎಪ್ಪ. ಮಳಿ ಇಲ್ಲ, ಬೆಳಿ ಇಲ್ಲ, ದನಕ್ಕ ಮೇವಿಲ್ಲ, ನಮ್ಮ ಹೊಟ್ಟೆಗೆ ರೊಟ್ಟಿಲ್ಲ' ಎಂದು ಮುಂತಾಗಿ ಹಲುಬುತ್ತಿದ್ದರು. ಒಂದೆರಡು ಕಡೆ ಅಳದಕ್ಕಿಯಾದ ಸ್ಥಿತಿಯಲ್ಲಿ ಲಾಯಬ್ರರಿಗಳು ಹೊರಟಿದ್ದವು, 'ಮೋಫತವಾಚನಾಲಯ' ಎಂದು ಹೆಸರು. ಅವಕ್ಕೆ ವರ್ತಮಾನಪತ್ರ ಪುಸ್ತಕ ಎಲ್ಲವೂ ಮೋಫತಾಗಿಯೇ ಬರಬೇಕು, ಎಂದರೆ ಹೆಚ್ಚಾಗಿ ಯಾವೂ ಬರುತ್ತಿರಲಿಲ್ಲ ಎಂದರ್ಥ. ಈ ತಿರುಗಾ ಟದ ಅನುಭವದಿಂದ ಕನ್ನಡದ ಭವಿತವ್ಯದ ವಿಷಯದಲ್ಲಿ ರಾಮಣ್ಣನ ಆತ್ಮ ವಿಶ್ವಾಸವು ಅಲುಗಾಡಿತು. ಕನ್ನಡ ಜನಕ್ಕೆ ಅನ್ನನೀರಿಲ್ಲದೆ ಕನ್ನಡ ನಾಡು ಬೆಳೆಯುವುದಿಲ್ಲ. ಕನ್ನಡ ನಾಡುನುಡಿಗಳು ಬೆಳೆಯದೆ ಕನ್ನಡ ಜನಕ್ಕೆ ಅನ್ನ ನೀರಿಲ್ಲ, ಬದುಕಿಲ್ಲ, ಬೆಳಕಿಲ್ಲ. 'ಛೇ, ಮತ್ತೊಂದು ವಿಷಮಚಕ್ರ' ಎಂದು ರಾಮಣ್ಣನು ನೋವುಗೊಂಡು ಮರಳಿ ಧಾರವಾಡಕ್ಕೆ ಬಂದನು. ನಿರಾಶೆಯು ಸುತ್ತರಿದು ಅವನನ್ನು ಕೆಣಕಿ ಅಣಕಿಸುತ್ತಿತ್ತು.

ಅತ್ತ ಕನಕಾಪುರದಲ್ಲಿ ಸುಗುಣಾಬಾಯಿಯ ಸ್ಥಿತಿಯು ಅತ್ತೆ ಮನೆಯ ಸೆರೆಮನೆಯಲ್ಲಿ ಬಹಳ ದುಃಖದಾಯಕವಾಯಿತು. ಸಣ್ಣವರಿಂದ ದೊಡ್ಡವರ ವರೆಗೆ ಮನೆಯಲ್ಲಿ ಒಬ್ಬರೂ ಅವಳ ಕೂಡ ಸರಿಯಾಗಿ ಮಾತನಾಡುವವರಿಲ್ಲ. ಅವಳ ಪಾಲಿಗೆ ಪ್ರೇಮವೆಂಬುದು ಮಸಣದ ಹೂವಾಯಿತು. ಬದುಕಿನಲ್ಲಿ ಸುಖವಿಲ್ಲ, ಸಾವಿಗೆ ಸ್ವಾತಂತ್ರ್ಯವಿಲ್ಲ ಎಂಬಂತೆ ಅವಳು ಆಯುಷ್ಯವನ್ನು ಸವೆಸಹತ್ತಿದಳು. ಇಂಥದರಲ್ಲಿ ದೇವರಲ್ಲಿಯ ಗುರುಗಳಲ್ಲಿಯೂ ಅವ್ಯಾಜ ಭಕ್ತಿಯೊಂದು ಅವಳ ಅಂತಃಕರಣದಲ್ಲಿ ಬೆಳೆಯುತ್ತಿತ್ತು. ತನ್ನ ಕೋಣೆಯಲ್ಲಿ

ಒಬ್ಬಳೇ ಕುಳಿತು ದೇವರ ಸ್ತೋತ್ರಗಳನ್ನೂ ಹಾಡುಗಳನ್ನೂ ಓದುವುದರಲ್ಲಿ ಹೆಚ್ಚು ಕಾಲವನ್ನು ಕಳೆಯುತ್ತಿದ್ದಳು. ಅದೆಲ್ಲವೂ ಸೋಗಲಾಡಿತನವೆಂದೂ ಸೋಮಾರಿತನವೆಂದೂ ಅತ್ತೆಯವರು ಅರ್ಥ ಕಟ್ಟುತ್ತಿದ್ದರು. ತಿರುತಿರುಗಿ ಅದೇ ಬೈಗಳನ್ನು ಬಯ್ಯುತ್ತಿದ್ದರು. ಅದರಿಂದಲೇ ಅವುಗಳ ಮೊನೆಯು ಮೊಂಡವಾಗಿ ಅವಳಲ್ಲಿ ನಾಟದೆ ಹೋಗುತ್ತಿದ್ದುವು. ಇನ್ನೊಮ್ಮೆ ಪ್ರಯತ್ನ ಮಾಡಿ ಮನವೊಲಿಸಿ ತನ್ನ ಕರೆದುಕೊಂಡು ಹೋಗಬೇಕೆಂದು ಭೀಮರಾಯರಿಗೆ ದೈನಾಸಪಟ್ಟು ಒಂದೆರಡು ಸಾರೆ ಕಾಗದ ಬರೆದಳು. ಆದರೆ ದತ್ತಕದ ಭೂತವು ಅಡ್ಡ ಬಂದು ಭೀಮರಾಯರನ್ನು ತಡೆಯುತ್ತಿತ್ತು. ದತ್ತಕದ ವಿಚಾರವನ್ನು ತಾವು ಈಗ ಬಿಟ್ಟಿರುವುದಾಗಿಯೂ ಸುಗುಣಾಬಾಯಿಯನ್ನು ಸುಮ್ಮನೆ ತವರುಮನೆಗೆಂದು ಕಳಿಸಬೇಕೆಂದೂ ಅವರು ಬಾಬೂರಾಯರಿಗೆ ಪತ್ರ ಹಾಕಿ ನೋಡಿದರು. ಅದರ ಪರಿಣಾಮವು ಇನ್ನಿಷ್ಟು ವಿಪರೀತವಾಯಿತು. ಅದೊಂದು ಹೊಸ ಕುಯುಕ್ತಿಯನ್ನು ಸುಗುಣಾಬಾಯಿಯು ಹೂಡಿಸಿರುವಳೆಂದು ಅವಳ ಮೇಲಿನ ರೋಷವು ಕೆಲವು ದಿನ ಗಾಢವಾಯಿತು. ಕಳ್ಳ ಉಸುಬಿನ ಮೇಲೆ ಎಲ್ಲಿ ನಡೆದರೂ ಬುಡದಲ್ಲಿ ಮುಳ್ಳು ನಡುವಂತೆ ಸುಗುಣಾಬಾಯಿಯ ಬಾಳು ಆಯಿತು. ಅದೆಲ್ಲ ಕರುಣ ಕಥೆಯನ್ನು ಭೀಮರಾಯರ ಮುಖದಿಂದ ಆಗಾಗ ಕೇಳುತ್ತಿದ್ದ ವಾಮಣ್ಣನು ಕಸಿವಿಸಿಗೊಳ್ಳುತ್ತಿದ್ದನು. ತನ್ನ ಪ್ರವಾಸದಿಂದ ತಿರುಗಿ ಬಂದ ಮೇಲೆ ಸುಗುಣಾಬಾಯರನ್ನು ಕಂಡು ಬರಬೇಕೆಂದೂ ತನ್ನಿಂದ ಸಾಧ್ಯವಾದರೆ ಅವರ ಬಿಡುಗಡೆಗೊಳಿಸಬೇಕೆಂದೂ ತೀವ್ರವಾದ ಅಪೇಕ್ಷೆಯು ಅವನಲ್ಲಿ ಹುಟ್ಟಿತು. ಹಾಗೆ ಮನೆಯಲ್ಲಿ ತಿಳಿಸಿ ಒಮ್ಮೆ ಕನಕಾಪುರಕ್ಕೆ ಹೋದನು. ತನ್ನ ಪರಿಚಯವನ್ನು ತಾನೇ ಮಾಡಿಕೊಂಡು ಜಾಗಿರದಾರರ ಅತಿಥಿಯಾಗಿ ಸುಗುಣಾಬಾಯರನ್ನು ಕಂಡನು. ಅವರಿಗೆ ಬಹಳ ಹರುಷವಾಯಿತು. ಮನೆಯ ಜನರು ಮೊದಲು ಇವನೇಕೆ ಬಂದನೆಂದು ಸಂಶಯದ ಕಣ್ಣಿನಿಂದ ನೋಡಿದರು. ಆದರೆ ಬರ ಬರುತ್ತ ಅವನ ಸರಳ ಸ್ವಭಾವದ ಬಗ್ಗೆ ಖಾತ್ರಿಯಾಯಿತು. ಬಾಬೂರಾಯರ ಕೂಡ ಅದೆಷ್ಟೋ ಮಾತಾಡಿ ಸುಗುಣಾಬಾಯರ ಬಗ್ಗೆ ಹೊಟ್ಟೆಮೊದಲು ಕನಿಕರದ ಒಂದು ಲವಲೇಶವಾದರೂ ಅವರಲ್ಲಿ ಹುಟ್ಟುವಂತೆ ಅವನು ಮಾಡಿದನು. ಕೊನೆಗೆ ಸುದೈವದಿಂದ ಅವನಿಗೆ ಬಿಡುಗಡೆಯ ಹಂಚಿಕೆಯೊಂದು

ಹೊಳೆಯಿತು. ಅದನ್ನು ಬಾಬೂರಾಯರ ಮುಂದಿಡಲು ಅವರು ಪ್ರಯಾಸ ದಿಂದ ಒಡಂಬಟ್ಟರು. ಹನವಾಪುರದಲ್ಲಿ ಬಹಳ ಜಾಗೃತವಾದ ಹನುಮಂತ ದೇವರ ಗುಡಿಯೊಂದು ತುಂಗಾತೀರದಲ್ಲಿ ಬಹಳ ಪ್ರಶಾಂತವಾಗಿತ್ತು. ಅದನ್ನು ಸುಗುಣಾಬಾಯಿರು ಅವನ ಮುಂದೆ ಅನೇಕ ಸಾರೆ ಹೊಗಳಿದ್ದರು. ಅದೇ ಊರಲ್ಲಿ ಬಾಬೂರಾಯರ ಸೆಂಟರು ಇದ್ದರು. ಅವರ ಮನೆಯಲ್ಲಿಯೇ ಒಂದು ಒಕ್ಕಲು ಮಾಡಿ ಸುಗುಣಾಬಾಯಿಗೆ ಅಲ್ಲಿ ಇರಗೊಡಬೇಕೆಂದೂ ತಿಂಗಳಿಗೆ ಹದಿನೈದು ರೂಪಾಯಿಯಂತೆ ಅವಳಿಗೆ ಪೋಟಗಿಕೊಡಬೇಕೆಂದೂ ಗೊತ್ತಾಯಿತು. ಆ ಸೆಂಟರು ಬಾಬೂರಾಯರಿಗೆ ತುಂಬಾ ಅನುಕೂಲರಾಗಿದ್ದ ರಿಂದ ಸುಗುಣಾಬಾಯಿಯು ಊರು ಬಿಟ್ಟು ಅಲೆದಾಡದಂತೆ ಅವರು ನೋಡಿ ಕೊಳ್ಳುವರೆಂಬ ಭರವಸೆಯಿಂದ ಬಾಬೂರಾಯರು ಒಪ್ಪಿಗೆ ಕೊಟ್ಟರು. ಆದರೆ ಮನೆಯ ಹೆಂಗಸರು ಒಪ್ಪಲಿಲ್ಲ. ಅತ್ತೆಯವರಂತೂ ತಾವು ಕಾಡುವ ಮನುಷ್ಯಗೊಂಬೆಯು ಕೈಬಿಡುವುದೆಂದೊ ಏನೊ ಬಾಯಿ ಬಿಟ್ಟು ಒದರಿ ಕೊಂಡರು. ಬಾಬೂರಾಯರ ಬೆಂಬಲದಿಂದ ಒಂದು ದಿನ ಎಲ್ಲರ ಶಾಪರಾಶಿ ಯನ್ನು ಹೊತ್ತು, ತನ್ನ ಇದ್ದು ಬಿದ್ದ ಸಾಮಾನುಗಳನ್ನು ಕಟ್ಟಿ ಸುಗುಣಾ ಬಾಯಿಯು ವಾಮಣ್ಣನ ಕೂಡ ಹನವಾಪುರಕ್ಕೆ ಹೊರಟಳು. ಅವಳಿಗೆ ಅಲ್ಲಿ ಬಿಟ್ಟು ಎಲ್ಲ ಏರ್ಪಾಟುಮಾಡಿ ವಾಮಣ್ಣನು ಮರಳಿ ಧಾರವಾಡಕ್ಕೆ ಬಂದನು. ಸುಗುಣಾಬಾಯಿಯಂತೇ ಇರುವ ಕನ್ನಡವು ದೇವರಲ್ಲಿ ಮೊರೆ ಹೊಕ್ಕು ತಪಸ್ವಿನಿಯಾಗದೆ ಮುಂದೆ ಬರುವ ಬಾಳುವೆಯಾದರೂ ಮುತ್ತೈದೆಯಂತೆ ಸಿಂಗಾರವಾಗದೆ? ಎಂಬ ಭಾವನೆಯು ಅವನಲ್ಲಿ ತಲೆದೋರಿತು.

ವಾಮಣ್ಣನು ಧಾರವಾಡಕ್ಕೆ ಬರುವುದೊಂದೇ ತಡ, ಅವನ ದುಷ್ಟ ಗ್ರಹಗಳು ಒಟ್ಟುಗೂಡಿ ದಾಳಿಯಿಟ್ಟವು. ಇಲ್ಲದ ಕಾರಭಾರವನ್ನು ಮಾಡುತ್ತ ಹೆಂಡರು ಮಕ್ಕಳನ್ನು ತಮ್ಮ ಕೊರಳಿಗೆ ಕಟ್ಟಿ ವಾಮಣ್ಣನು ತಿರುಗುತ್ತಿ ರುವನೆಂದು ಭೀಮರಾಯರು ಎಂದಿನಿಂದ ಮುಸುಗುಡುತ್ತಿದ್ದರು. ಕನ್ನಡ ಕನ್ನಡ ಎಂದು ಬಡಬಡಿಸುತ್ತ ಹುಚ್ಚು ಹಿಡಿಯುವ ಹವ್ಯಾಸವು ಅವರಿಗೆ ಎಂದೂ ಸೇರಿರಲಿಲ್ಲ. ಎಲ್ಲಿಯೂ ಒಂದು ಹೊಟ್ಟೆಹೊರೆಯುವ ಕೆಲಸ ಹಿಡಿಯ ಲಿಲ್ಲವೆಂಬ ಸಿಟ್ಟೂ ಕೂಡಿತು. ಅವರಿಗೆ ತಡೆತಡೆದು ಸಾಕಾಯಿತು, ತಾಳ್ಮೆಯು ತುದಿಮುಟ್ಟಿತು. ಒಂದು ದಿನ ಊಟಕ್ಕೆ ಕುಳಿತಾಗ ಈ ವಿಷಯವನ್ನು

ಕೆದರಿ ಅವನನ್ನು ಅರ್ಧಕ್ಕೆ ಎಬ್ಬಿಸಿಬಿಟ್ಟರು. ಊಟವಾದ ಮೇಲೆಯೂ ಅವರ ಆರ್ಭಟೆಯು ನಿಲ್ಲಲಿಲ್ಲ. ಪಾಮಣ್ಣನನ್ನು ಇದಿರಿಗೆ ಕೂಡಿಸಿಕೊಂಡು ಥಡಥಡ ಆಡತೊಡಗಿದರು: 'ನಿಮ್ಮಂಥ ನಿರುಪಯೋಗಿಗಳಿಗೆ ಯಾತಕ್ಕೆ ಊಟಕ್ಕೆ ಹಾಕಬೇಕು? ನಿಮಗೆ ನಿಮ್ಮ ಸಂಸಾರದ ಚಿಂತಿಲ್ಲ. ನಿಮ್ಮ ಹೆಂಡಿರು ಮಕ್ಕಳ ಕಾಳಜಿ ಇಲ್ಲ. ಇಂಥವರು ಮದವಿಮಾಡಿಕೋಬಾರದು. ಬೂದಿ ಬಡಕೊಂಡು ಸನ್ಯಾಸಿ ಆಗಬೇಕು. ನಾವೇನು ನಿಮ್ಮಂಥ ನಿರುದ್ಯೋಗಿಗಳ ದಸಿಂದ ಇಲ್ಲಿ ಅನ್ನಛತ್ರವನ್ನು ಇಟ್ಟಿಲ್ಲ. ಸ್ವಂತದ ಹೊಟ್ಟೀ ಉದ್ಯೋಗ ಬಿಟ್ಟು ಕೆತ್ತೀಬಜೆ ಕಾರಭಾರ ಮಾಡಲಿಕ್ಕೆ ಮಾತ್ರ ನಿಮಗೆ ಬರತದೆ. ಕನ್ನ ಡದ ಚಳವಳಿಯಂತ ಚಳವಳಿ. ಕಲ್ಲುಹಾಕಲಿ ಅದಕ್ಕೆ! ಅದು ಸಾಲದೆ ಆ ಸುಗುಣಾಬಾಯಿಗೆ ಉಪಕಾರ ಮಾಡಲಿಕ್ಕೆ ಜ್ಯಾರೆ ಹೋಗೋದು. ನಮ್ಮಂ ಥವರಿಂದ ನೀಗದ ಕೆಲಸ ತಾವು ಮಾಡಲಿಕ್ಕೆ ಕೈಹಾಕೋದು. ಇನ್ನಮ್ಯಾಲಾ ದರೂ ಎಲ್ಲಾ ಉಸಾಬರಿ ಬಿಟ್ಟು ಕೆಲಸ ಹಿಡಿದು ಇರತಿದ್ರೆ ನನ್ನ ಮನಿಯೊಳಗೆ ಇರ್ರಿ, ಇಲ್ಲದಿದ್ದರೆ....' ಭೀಮರಾಯರು ಖಬರುತಪ್ಪಿದವರಂತೆ ಸಿಕ್ಕಾ ಪಟ್ಟೆ ಒದರಾಡಿದರು.

ಅವರ ಹೆಂಡತಿಯು ಒಳಗಿನಿಂದ ಓಡಿಬಂದು 'ಸಾಕುಮಾಡರಿ, ಏನಿದು ರಂದಿ?' ಎಂದಾಗಲೆ ಅವರಿಗೆ ಎಚ್ಚರ ಬಂದಿತು. ಪಾಮಣ್ಣನು ಪಿಟ್ಟೆಂದು ಆಡದೆ ಕೆಳಮೋರೆಮಾಡಿ ಕೇಳುತ್ತಲಿದ್ದನು. ಭೀಮರಾಯರ ಮಾತು ಮುಗಿ ಯಿತು. 'ನೀವಂಬೋದು ಸರಿ' ಎಂದಿಷ್ಟು ಉತ್ತರಕೊಟ್ಟು ಪದ್ದಕ್ಕ ಮಲಗಿ ರುವ ಬಾಣತಿ ಕೋಣೆಗೆ ಭರಭರ ಹೋದನು. ಪದ್ದಕ್ಕ ಕೂಸನ್ನುಮಗ್ಗುಲಿಗೆ ಮಲಗಿಸಿಕೊಂಡು ಅಡ್ಡಾಗಿದ್ದಳು. ಹೊರಗೆ ನಡೆದದ್ದು ಅವಳಿಗೆ ಕೇಳಿರಲಿಲ್ಲ. ಪಾಮಣ್ಣನು 'ಏಳು' ಎಂದು ಮೈಯಲುಗಿಸಿದನು. ಗಾಬರಿಯಿಂದ ಪದ್ದಕ್ಕ ಎದ್ದು ಕುಳಿತಳು. ಎರಡನೆಯ ಮಾತಿಲ್ಲದೆ ಪಾಮಣ್ಣನು ಅಬ್ಬರದಿಂದ ಹೇಳಿ ದನು: 'ನಾನು, ನೀನು, ಈ ಎರಡು ಮಕ್ಕಳು ಈಗಿಂದೀಗ ನಾವು ಈ ಮನೆ ಬಿಟ್ಟು ಹೊರಬೀಳಬೇಕು. ಏಳು, ನೀ ಕಟ್ಟಿಕೊಳ್ಳುವದನ್ನು ಕಟ್ಟಿಕೋ.'

ಪದ್ದಕ್ಕನಿಗೆ ದಿಕ್ಕು ತಪ್ಪಿದಂತಾಗಿ 'ಅದ್ಯಾಕೆ? ಏನಾತು?' ಎನ್ನುತ್ತ ತಲೆಯ ಮೇಲಿ ಸೆರಗನ್ನು ಸಂವರಿಸುತ್ತ ಹೊರಸಿನಿಂದ ಎದ್ದು ನಿಂತಳು.

ಅದನ್ನು ನನಗೆ ಕೇಳಬೇಡ. ನಿಮ್ಮ ಅಪ್ಪ-ಅಪ್ಪನನ್ನು ಕೇಳು. ನಾನು

ಅಟ್ಟಕ್ಕೆ ಹೋಗಿ ಸಾಮಾನು ಕಟ್ಟುವೆನು. ನೀನೂ ಅಷ್ಟರಲ್ಲಿ ಕಟ್ಟಿಡು ಎಂದವನೇ ರಾಮಣ್ಣನು ನಿಲ್ಲದೆ ಅಟ್ಟಕ್ಕೆ ಹೋದನು. ಪದ್ದಕ್ಕನು ಏನೂ ತಿಳಿಯದಾಗಿ ಅವ್ವನ ಹತ್ತಿರ ಹೋದಳು. ನಡೆದ ಸಂಗತಿಯೆಲ್ಲ ಗೊತ್ತಾಯಿತು. ಈಗಳೆ ಹೊರಡು ಎನ್ನುವರೆಂದು ತಾಯಿಗೆ ಹೇಳಿದಳು. ಇಬ್ಬರೂ ತೆಕ್ಕೆಬಿದ್ದು ಅತ್ತರು. ನೀನೇ ಹೋಗಿ ಸಮಾಧಾನ ಮಾಡೆಂದು ತಾಯಿಯು ಪದ್ದಕ್ಕನನ್ನು ಕಳಿಸಿದಳು. ಆದೇ ಮೂರು ತಿಂಗಳ ಬಾಣಂತಿಯಾದರೂ ಉಸ್ಸೆನ್ನುತ್ತ ಅಟ್ಟಹತ್ತಿ ಪದ್ದಕ್ಕ ಹೋದಳು.

'ಸಾಮಾನು ಕಟ್ಟಿದೆಯಾ?' ಎಂಬ ಪ್ರಶ್ನೆಯಿಂದ ಸ್ವಾಗತವಾಯಿತು.

'ಅದು ಹೆಂಗ ಕಟ್ಟತಾರದು! ಇನ್ನೂ ಗುಡಿಗೆ ಹೋಗಿಲ್ಲ.'

'ಗುಡಿಗೆ ಹೋಗಿಲ್ಲ? ಗುಡಿಗೆ ಹೊರಡಲಿಕ್ಕೇ ಕಟ್ಟು ಅನ್ನೋದು–ಹಾಳು ಗುಡಿಗೆ! ಎಲ್ಯಾದರೂ ಹೋಗಿ ಹದ್ದು ಪಾಲಾದರೂ ತಪ್ಪಿಲ್ಲ, ಇಲ್ಲೆ ಇರೋದು ಬ್ಯಾಡ ಇನ್ನು.'

'ಹಂಗೆಲ್ಲಾ ಅಪ್ಪನ ಮಾತು ಹಚಿಗೋಬಾರದು. ಎಲ್ಯಾರ ಕೆಲಸ ನೋಡಿರಿ ಅಂಬೂ ಮಾತು ಹಂಗ ಸ್ವಲ್ಪ ಸಿಟ್ಟಿಲೆ ಹೇಳಿದರು.'

'ಹೌದು ಹೌದು, ನೀನು ಅವರ ಮಗಳು. ಅದೇ ಜಾತಿ. ನೀ ಇರು ಅವರ ಜೋಡಿ. ನಾ ಹೊರಟುಹೋಗತೀನಿ. ಈ ಮನೆಯೊಳಗೆ ಇನ್ನು ಮೇಲೆ ಒಂದು ಕ್ಷಣ ಹೆಚ್ಚು ಇದ್ದರೆ ಸ್ಮಶಾನದೊಳಗೆ ಇದ್ದಂತೆ.'

ಆಯಿತು. ಪದ್ದಕ್ಕನಿಗೆ ತುಂಬಾ ಅಳು ಬಂದಿತು. ನೆಲಕ್ಕೆ ಬಿದ್ದುಕೊಂಡು ಒರಲಿದಳು. ರಾಮಣ್ಣನ ಎದೆಯು ಕಲ್ಲಾಗಿತ್ತು. ತಾಸೆರಡು ತಾಸಿನವರೆಗೆ ಮನೆಯಲ್ಲಿ ಭೀಮರಾಯರ ಹೊರತು ಎಲ್ಲರೂ ಮನವಲಿಸುವ ಯತ್ನಮಾಡಿದರು; ಅತ್ತೆಯವರು ಅಡ್ಡಬಿದ್ದು ಗುಡಿಗೆ ಹೋದಮೇಲೆ ಹೋಗಬೇಕೆಂದರು. ರಾಮಣ್ಣನು ಯಾರನ್ನೂ ಕೇಳದೆ ಒಂದು ಎಕ್ಕಾಗಾಡಿಯಲ್ಲಿ ಎಲ್ಲ ಸಾಮಾನು ಹೇರಿ ಇನ್ನೊಂದರಲ್ಲಿ ಹುಡುಗರನ್ನೂ ಹೆಂಡತಿಯನ್ನೂ ಬಲುಮೆಯಿಂದ ಕೂಡಿಸಿ ಹೊರಟುಬಿಟ್ಟನು. ಗೋಳೋ ಎಂದು ಅಳುವ ಅಪಸ್ವರದ ಸಂಗೀತವು ಅವನಿಗೆ ಬೀಳ್ಕೊಟ್ಟಿತು. ಭೀಮರಾಯರಿಗೂ ಅತ್ತೆಯವರಿಗೂ ಬಾಗಿ ಅವನು ಕೊನೆಯ ನಮಸ್ಕಾರ ಮಾಡಿದನು. ಅವರು ಯಾರೂ ಸಂತೋಷದಿಂದ ಅದನ್ನು ಸ್ವೀಕರಿಸಲಿಲ್ಲ. ಗಾಡಿಯು ಹೊರಟಿತು.

'ಈಗ ಎಲ್ಲಿಗರ ಹೋಗುದು?' ಪದ್ದಕ್ಕ ಕೇಳಿದಳು.

' ಎಲ್ಲಿಗೊ! ಸುಡಗಾಡಿಗೆ! '

' ಏನಿದು ಅಡ್ನಾಡಿ ಮಾತು? ಎಲ್ಲಿಗೆ ಹೋಗೂದು ಹೇಳರಿ. '

' ಮೊದಲು ಊರ ಹೊರಗೆ ಹೋಗೋಣ. ಆ ಮೇಲೆ ನೋಡೋಣ. '

ಹೀಗೆ ಅನಿಶ್ಚಯದ ಮನಃಸ್ಥಿತಿಯಲ್ಲಿಯೇ ವಾಮಣ್ಣನು ಹೊರಟಿರಲು ಆನಂದಮೂರ್ತಿಗಳ ಕಡೆ ಹೋಗಿ ಅವರ ಕಡೆಯ ಸಂದರ್ಶನ ತಗೊಂಡು ಮುಂದಿನ ದಾರಿಯನ್ನು ಕಾಣಬೇಕೆಂದು ಅವನಿಗೆ ತಟ್ಟನೆ ತೋಚಿತು. ಸಪ್ತಾಪುರದತ್ತ ಹೊಡೆಯಬೇಕೆಂದು ಗಾಡಿಯವನಿಗೆ ಹೇಳಿದನು. ಪದ್ದಕ್ಕನಿಗೂ ತಿಳಿಸಿದನು.

ಆನಂದಮೂರ್ತಿಗಳು ತೋಟದಲ್ಲಿ ಮಡಿಗಳಿಗೆ ನೀರುಬಿಡುತ್ತಲಿದ್ದರು. ನೀರ ಮೊಟ್ಟೆಯ ಸೊಂಯ್ ಎಂಬ ಸಪ್ಪಳವು ಕೇಳುತ್ತಿತ್ತು. ವಾಮಣ್ಣನು ಈಗೇಕೆ ಬಂದನೆಂದು ಅವರಿಗೆ ಸೋಜಿಗವೆನಿಸಿತು. ಅದರಲ್ಲಿ ತೋಟದ ಹೊರಗಡೆ ಎರಡು ಎಕ್ಕಾಗಾಡಿಗಳು ಬೇರೆ ಕಂಡವು.

' ಇನ್ನೂ ಬಿಸಿಲು ತಗ್ಗಿಲ್ಲ, ಈಗೇಕೆ ಬಂದೆ ವಾಮಣ್ಣಾ? ಅದೇನು ಆ ಗಾಡಿಗಳು? '

ವಾಮಣ್ಣನ ಮುಖವು ಕೆಂಪಗಾಗಿ ಗಂಭೀರವಾಗಿತ್ತು. ತೋಟದಲ್ಲಿಯೇ ನಿಂತು ತನ್ನ ಧೀರ ಕೃತ್ಯವನ್ನು ಬಣ್ಣಿಸಿ ಹೇಳಿದನು. ಮೂರ್ತಿಗಳಿಗೆ ಅವನ ಹಿಂದಿನ ಇತಿಹಾಸವೆಲ್ಲ ಗೊತ್ತಾಗಿಹೋಗಿದ್ದರಿಂದ ಅವರಿಗೆ ಈ ಘಟನೆಯು ಸ್ವಾಭಾವಿಕ ಪರಿಣತಿಯೆಂದೇ ತೋರಿತು. ಆದರೂ ಅವರು ಒಳಗೊಳಗೆ ನೊಂದುಕೊಂಡರು. ಕೂಡಲೆ ಹೆಂಡತಿಯನ್ನೂ ಮಕ್ಕಳನ್ನೂ ಗುಡಿಸಲಿಗೆ ಕರೆದುತಾರೆಂದು ವಾಮಣ್ಣನಿಗೆ ಹೇಳಿದರು. ಸಾಮಾನುಗಳೆಲ್ಲ ತಮ್ಮಲ್ಲಿ ಇಳಿಸಿಕೊಂಡು ಗಾಡಿಗಳನ್ನು ಕಳಿಸಿಕೊಡಲು ತಿಳಿಸಿದರು.

ವಾಮಣ್ಣನು ' ಇಲ್ಲ, ನಾನು ಈಗಳೆ ಹೊರಡಬೇಕು, ನಿಮ್ಮನ್ನು ಕಂಡು ಹೋಗಲು ಬಂದಿರುವೆ ' ಎಂದು ಹಟತೊಟ್ಟನು. ಎಲ್ಲಿಗೆ ಹೊರಡುವುದು ಗೊತ್ತಿಲ್ಲ. ಇದು ಯೋಗ್ಯವಲ್ಲವೆಂದು ಅಧಿಕಾರವಾಣಿಯಿಂದಲೇ ಗದ್ದರಿಸಿ ಮೂರ್ತಿಗಳು ತಾವೇ ವಾಮಣ್ಣನ ಬದಲು ಎಲ್ಲವನ್ನೂ ಮಾಡಲೆಳಸಿದರು. ಆಗ ವಾಮಣ್ಣನು ಸುಮ್ಮನಿರುವುದಾಗಲಿಲ್ಲ. ಪದ್ದಕ್ಕನನ್ನೂ ಹುಡುಗರನ್ನೂ ಕರಕೊಂಡು ಮೂರ್ತಿಗಳ ಗುಡಿಸಲು ಸೇರಿದನು. ಸಾಮಾನುಗಳೆಲ್ಲ ಒಳಗೆ ಸಾಗಿದವು. ಮೂರ್ತಿಗಳು ಪದ್ದಕ್ಕನನ್ನು ಕರೆದು ಕೂಡಿಸೆಂದು

ತಮ್ಮ ಮನೆಯಾಕೆಗೆ ಹೇಳಿದರು. ಮೊದಲೊಮ್ಮೆ ಭೆಟ್ಟಿಯಾಗಿ ಅವರಿಬ್ಬರು ಮಾತಾಡಿದ್ದರು. ಅದರಿಂದ ಸಂಕೋಚಕ್ಕೆ ಎಡೆಯು ಇರಲಿಲ್ಲ. ಆದರೆ ಪದ್ದಕ್ಕನ ಮನಸ್ಸು ಹೌಹಾರಿದಂತಾಗಿತ್ತು. ತನ್ನ ಗಂಡನು ಮಾಡುತ್ತಿರುವುದು ತಪ್ಪೋ ಸರಿಯೋ ಅವಳಿಗೆ ತಿಳಿಯದು. ಆದರೂ ಅವನು ಹೇಳಿದಂತೆ ಕೇಳುವುದು ತನ್ನ ಕರ್ತವ್ಯವೆಂದು ತಿಳಿದು ಸುಮ್ಮಗಿದ್ದಳು. ಮೂರ್ತಿಗಳ ಮನೆಯಲ್ಲಿ ಅವಳಿಗೆ ಎಲ್ಲ ಆರೈಕೆಯು ಮನೆಗಿಂತ ಹೆಚ್ಚಾಗಿ ಪ್ರಾರಂಭವಾಯಿತು. ಆದೇ ಹಡೆದೆದ್ದವಳೆಂದು ತಿಳಿದು ಮೂರ್ತಿಗಳ ಮನೆಯವರು ಇನ್ನಿಷ್ಟು ತತ್ಪರರಾದರು. ಮೂರ್ತಿಗಳ ಮಕ್ಕಳಿಂದಲೂ ಹೊಸ ಹುಡುಗರಿಂದಲೂ ಮನೆ ತುಂಬಿ ತುಳುಕಿತು. ಅಕ್ಕರೆಯ ಪ್ರಭಾವದಿಂದ ಎರಡು ಸಂಸಾರಗಳು ಹತ್ತಾರು ವರುಷದಿಂದ ಕೂಡಿ ಇದ್ದಂತೆ ಅನ್ಯೋನ್ಯವಾದವು. ಮೂರ್ತಿಗಳು ವಾಮಣ್ಣನ ಕೂಡ ತೋಟದಲ್ಲಿ ಅಲ್ಲಿಯೇ ಬಿಟ್ಟು ಕೆಲಸಕ್ಕೆ ಹೋದರು. ಕೆಲಸವನ್ನು ಸಾಗಿಸುತ್ತ ಕೇಳಿದರು: 'ಏನು ವಾಮಣ್ಣಾ, ಸ್ವಾಭಿಮಾನ ಮೂರ್ತಿಯಾಗಿ ಮಾವನ ಮನೆಯನ್ನಂತೂ ಬಿಟ್ಟು ಬಂದೆ. ಮುಂದಿನ ವಿಚಾರವೇನು ? '

ವಾಮಣ್ಣನು ಬೇಗನೆ ಉತ್ತರ ಕೊಡಲಿಲ್ಲ. ಮತ್ತೆ ಕೇಳಿದರು.

' ವಿಚಾರವೇನು ? ಕನ್ನಡಕ್ಕಾಗಿ ದುಡಿಯುವದು, ಅದರಲ್ಲಿಯೇ ಮಡಿಯುವದು ' ಎಂದು ಉತ್ತರ ಬಂದಿತು.

ಮೂರ್ತಿಗಳಿಗೆ ಸಂತೋಷವಾಯಿತು. ಸಂಕಟವೂ ಆಯಿತು. ' ಅಲ್ಲ, ವಾಮಣ್ಣ, ಹೊಟ್ಟೆಪಾಡಿನ ವಿಚಾರವೇನು ?'

'ನನ್ನ ಹಳ್ಳೂರಿಗೆ ಹೋಗಿ ನೋಡುವೆ. ಅಲ್ಲಿ ಸಿಕ್ಕದ್ದು ತಿಂದಿರುವೆ ಹೆಂಡರು ಮಕ್ಕಳ ಕೂಡ. ಸಿಗದಿದ್ದರೆ ಸತ್ತುಹೋಗುವೆ.'

ಮೂರ್ತಿಗಳು ಕೆಳಬಾಗಿದಂಥವರು ಚಟ್ಟನೆ ಬೆನ್ನೆತ್ತಿ ವಾಮಣ್ಣನನ್ನು ಸಿಟ್ಟಿಸಿದರು. ನಿರಾಶೆ-ನಿರ್ವಿಣ್ಣತೆಗಳಿಂದ ಮೊಗವು ಕಪ್ಪಿಟ್ಟಿತ್ತು. ಕೂಡಲೆ ತಮ್ಮ ಕೆಲಸವನ್ನು ಬಿಟ್ಟು ತೋಟದ ನಡುವಿನ ಒಂದು ಆಲದ ಕಟ್ಟೆಗೆ ಬಂದರು. ' ಇಲ್ಲಿ ಕೂಡು ' ಎಂದು ಅವನನ್ನು ಕೂಡಿಸಿ ತಾವೂ ಕುಳಿತು ಹೇಳಿದರು: ' ಚಿಂತಿಸಬೇಡ, ವಾಮಣ್ಣಾ. ನಾನು ಬಹಳ ದಿನದಿಂದ ನಿನಗೆ ತಿಳಿಸಬೇಕೆಂದು ಗೊತ್ತುಮಾಡಿದ ಹೃದ್ಗತವನ್ನು ಇಂದು ಹೇಳುತ್ತೇನೆ. ನಾನೂ ನೀನೂ ಕೂಡಿ ಸಂಸಾರೊಂದಿಗರಾಗಿ ಇದೇ ತೋಟದಲ್ಲಿರೋಣ. ಇಲ್ಲಿಯೇ

ಇಬ್ಬರೂ ದುಡಿದು ಬಂದದ್ದರಲ್ಲಿ ಜೀವನ ಸಾಗಿಸೋಣ. ಇದಕ್ಕೆ ನೀನು ಒಲ್ಲೆನ್ನಬೇಡ. ನನ್ನ ಆಯುಷ್ಯದಲ್ಲಿ ನಾನು ಬೇರೇನೂ ಮಾಡದಿದ್ದರೂ ಕನ್ನಡವೆಂದು ಕನವರಿಸುವ ಒಬ್ಬ ವಾಮಣ್ಣನ ಗೆಳೆತನವನ್ನು ಪಡೆದೆ. ನನಗದೇ ಹೆಚ್ಚಿನದು. ನಾವು ಕೂಡಿದ್ದು, ಕನ್ನಡವು ಮುಂದಾಗಲಿ ಎಂದು ಬರೀ ಹಾರೈಸಿದರೂ ಸಾಕು, ಕನ್ನಡಕ್ಕೆ ಕಲ್ಯಾಣವಾದೀತು.'

'ಮೂರ್ತಿಗಳೇ, ನಿಮ್ಮ ಕೂಡ ಇರುವದಕ್ಕಿಂತ ನನಗೆ ಇನ್ನೇನು ಬೇರೆ ಬೇಕು? ಆದರೆ ನಿಮಗೆ ಎಷ್ಟೆಂದು ನಾನು ಭಾರ ಹಾಕಬೇಕು?'

'ಹಾಗೆ ತಿಳಿಯದಿರು ವಾಮಣ್ಣಾ. ಇದು ಭಾರವಲ್ಲ, ಪ್ರೀತಿಯ ಹಾರ. ಪ್ರೀತಿಯಿಲ್ಲದೆ ಜೀವನವಿಲ್ಲ. ಪ್ರೀತಿಯುಳ್ಳ ಜೀವನವಿಲ್ಲದೆ ರಸವುಳ್ಳ ವಾಙ್ಮಯವಿಲ್ಲ. ಇದೇ ನನ್ನ ನಂಬಿಗೆ, ವಾಮಣ್ಣಾ.'

ವಾಮಣ್ಣನು ಒಪ್ಪಿದನು, ತಮ್ಮ ಸಂಯುಕ್ತ ಜೀವನದ ವಿವರಗಳನ್ನು ಇಬ್ಬರೂ ಮಾತಾಡಿದರು. ಇನ್ನೊಂದು ಮಾಟ ಗುಡಿಸಲನ್ನು ವಾಮಣ್ಣನ ಪ್ರಪಂಚಕ್ಕಾಗಿ ಕಟ್ಟಬೇಕೆಂದು ಗೊತ್ತಾಯಿತು. ಆದರೆ ಕನ್ನಡ ಸೇವೆಯ ಯಾವ ಕೆಲಸವನ್ನು ತಾನು ಕೈಕೊಳ್ಳಬೇಕೆಂಬ ಮುಖ್ಯ ಯೋಚನೆಯು ವಾಮಣ್ಣನನ್ನು ಬಿಡಲಿಲ್ಲ.

'ಮೂರ್ತಿಗಳೇ, ಕನ್ನಡಕ್ಕಾಗಿ ನಾನೇನು ಮಾಡಬಲ್ಲೆ? ಅದನ್ನು ನನಗೆ ಮಾಡಹಚ್ಚಿರಿ. ಏನೂ ಮಾಡದೆ ನಾನು ಬದುಕಲಾರೆ'

'ವಾಮಣ್ಣಾ, ಕನ್ನಡದ ಬಗ್ಗೆ ಚಿಂತಿಸಬೇಡ. ಬಿರುಗಾಳಿಯು ಮಾಡುವ ಕೆಲಸವನ್ನು ಬೀಸಣಿಕೆ ಗಾಳಿಯು ಮಾಡಲಾರದು. ಕನ್ನಡದ ಮನೆಯಲ್ಲಿ ನೂರಾರು ಕೆಲಸಗಳಿವೆ. ಮುಖ್ಯವಾಗಿ ಕನ್ನಡಿಗರನ್ನು ಮಿಂಚು ಹೊಡೆದೆಬ್ಬಿಸುವ ಹಿರಿಗೆಲಸವಿದೆ. ಅದಕೊಬ್ಬ ಮಹಾಯೋಜಕನು ಬೇಕು. ಆ ಕಾರಣ ಪುರುಷನು ಬರುವನು. ಕನ್ನಡವು ಏಳುವುದು, ಬಾಳುವುದು. ನನ್ನಿಂದ ನಿನ್ನಿಂದ ಆಗದ ಕೆಲಸವು ಅವನಿಂದ ಆಗುವುದು.'

'ಹಾಗಾದರೆ ನಾನೇನು ಮಾಡಬೇಕು? ತಣ್ಣಗಿರಬೇಕೆ?'

'ಹಾಗಲ್ಲ. ನಾವು ಮಾಡುವ ಕೆಲಸವೂ ಇದೆ. ನಮ್ಮ ಕೈಲಾದ್ದನ್ನು ನಾವು ಮಾಡುತ್ತಲೇ ಹೋಗಬೇಕು. ದೊಡ್ಡ ಕೆಲಸಗಳನ್ನು ಅರಕಳಿಯಾಗಿ ಮಾಡುವದಕ್ಕಿಂತ ನಾವು ಸಣ್ಣಕೆಲಸಗಳನ್ನು ಸಂಪೂರ್ಣವಾಗಿ ಮಾಡಬೇಕು. ಸಂಸ್ಥೆ ಕಟ್ಟಿ ಮಾಡುವದಾಗದಿದ್ದರೆ ವ್ಯಕ್ತಿಶಃ ಮಾಡುವದನ್ನು

ಮಾಡಬೇಕು ಅಕೋ ಅಲ್ಲಿ ನೋಡು. ಹತ್ತಿಪ್ಪತ್ತು ಬಂಗಲೆಗಳಿವೆ, ಗುಡಿ ಸಲುಗಳಿವೆ. ಅಲ್ಲಿರುವ ಜನವೇ ನಮ್ಮ ಜಗತ್ತೆಂದು ತಿಳಿಯೋಣ. ಅವರ ಮಕ್ಕಳಿಗೆ ಕನ್ನಡದ ಶಾಲೆಯನ್ನು ಹಾಕಿ ಕಲಿಸೋಣ. ಅವರಿಗೆ ವಾಚನಾ ಲಯವೊಂದನ್ನು ಮಾಡಿ ಕನ್ನಡ ಪ್ರೀತಿಯನ್ನು ಹೆಚ್ಚಿಸೋಣ. ಅವರಿಗೆ ಬೇಕಾದ ಸೌಕರ್ಯಗಳನ್ನು ಮಾಡಿಕೊಡೋಣ. ಅವರು ಮಕ್ಕಳು ಮಮ್ಮಕ್ಕಳು ಮುಂದೆ ಒಂದಾಗುವ ಕನ್ನಡನಾಡಿನ ವಿಶಾಲಛತ್ರದ ಕೆಳಗೆ ಕನ್ನಡ ರಾಷ್ಟ್ರಗೀತದಲ್ಲಿ ದನಿಗೂಡಿಸಿ ಹಾಡಿದರೆ ಅದೇ ನಮ್ಮ ಧನ್ಯತೆ, ಅದೇ ನಮ್ಮ ಪರಮಾರ್ಥ.

ವಾಮಣ್ಣನು ಆನಂದಮೂರ್ತಿಗಳ ಮಾತಿನ ಹೊಳೆಯಲ್ಲಿ ಈಸಿ ಹರ್ಷ ಪರವಶನಾಗಿ ನೋಟ ನಿಚ್ಚಳವಾಗಿ ತನ್ನ ಮುಂದಿನ ಗುರಿಯನ್ನು ಕಂಡು ಕೊಂಡನು. ಕನ್ನಡ ಕೋಗಿಲೆಯು ಇಂದು ಮನದಣಿಯೆ ಕುಕಿಲುತ್ತಿರುವು ದನ್ನು ಅವನಿಗೆ ಹಾಗೇ ಕೇಳುತ್ತ ಕೂಡಬೇಕೆನಿಸಿತು.

ಇಷ್ಟರಲ್ಲಿ ಹೊತ್ತು ಕೆಳಗಿಳಿಯಿತು, ಸೂರ್ಯನು ಮುಳುಗಲಿಕ್ಕೆ ಬಂದನು. ಆದೇ ನೋಟವನ್ನು ನೋಡುತ್ತ ಇಬ್ಬರೂ ಸೃಷ್ಟಿಯ ಪೂಜಾರಿ ಗಳಂತೆ ಭಕ್ತಿಯಿಂದ ಕುಳಿತರು.

ಬೇಸಿಗೆಯು ಮುಗಿಯಬಂದಿರುವ ಕಾಲವದು. ಹಗಲೆಲ್ಲ ಬಿಸಿಲು ಹೆಚ್ಚಾಗಿ ಸಂಜೆಗೆ ಮೋಡದ ಪದರುಗಳು ಮುಗಿಲಲ್ಲಿ ತೇಲುತ್ತಿದ್ದವು. ಸೂರ್ಯನು ಅವುಗಳಲ್ಲಿ ಸಿಲುಕಿ ನಿಸ್ತೇಜನಾಗಿ ಸರಿಯುತ್ತಿದ್ದನು. ನೆಲವೆಲ್ಲ ಒಣಗಿಹೋಗಿದೆ. ಬಿರುಕು ಬಿಟ್ಟ ಕೆಮ್ಮಣ್ಣು ಮಳೆ ನೀರಿಗೆ ಹಸಿದು ಬಾಯಿ ತೆರೆದಿದೆ. ಹುಲ್ಲು ಒಣಗಿ ಬಿಳಿಹಳದಿಯಾಗಿದೆ. ಕಸಕಡ್ಡಿಗಳು ನೆಲದ ತುಂಬ ಹರವಿಕೊಂಡಿವೆ. ಬಿರುಗಾಳಿಯೊಂದು ಭೋರೆಂದು ಬೀಸಿ ಕಸವನ್ನೂ ಧೂಳಿ ಯನ್ನೂ ಹಾರಿಸಿ ಕೋಲಾಹಲವನ್ನು ಎಬ್ಬಿಸುತ್ತಿದೆ.

'ನೆಲವು ಎಷ್ಟು ಭಣಭಣ ಸುರಿಯುತ್ತದೆ, ಮೂರ್ತಿಗಳೇ' ವಾಮಣ್ಣ ನೆಂದನು.

'ಅದು ಸರಿ. ಆದರೆ ಈ ಭಣಭಣದಲ್ಲಿಯೂ ಕಾಣುವ ಸೊಬಗನ್ನು ನೋಡು ವಾಮಣ್ಣಾ. ಅಲ್ಲಿ ನೋಡು ಹೊಂಗೆಮರದ ನುಣ್ಣಹಸಿರು, ಅಲ್ಲ ಮಾವಿನಮರದ ದಟ್ಟಹಸಿರು. ಮಾವುಗಳಲ್ಲಿ ಪಾಡಿಗೆ ಒಂದು ಅತ್ತಿತ್ತ

ಗಾಳಿಯಲ್ಲಿ ಜೋಲುತ್ತಿರುವ ಕೆಂಪು-ಹಳದಿ ಕಾಯಿಗಳನ್ನು ನೋಡು. ಏನು ಬೆಡಗದು!'

ಇಷ್ಟರಲ್ಲಿ ಸೂರ್ಯನು ಮುಳುಗಿದನು. ಕತ್ತಲೆ ತೆಳುವಾಗಿ ಹಬ್ಬ ತೊಡಗಿತು. 'ರಾಮಣ್ಣ, ಈಗ ನಮಗೆ ಸಂಜೆಗತ್ತಲೆಯಾಯಿತು, ಆದರೆ ಇನ್ನೆಲ್ಲಿಯೋ ಆಚೆ ಸೂರ್ಯೋದಯವಾಯಿತು. ಪ್ರತಿಕ್ಷಣವೂ ಸೂರ್ಯನು ನೆಲದೊಂದು ಕಡೆಗೆ ಅಸ್ತನಾಗುತ್ತಲೂ ಇನ್ನೊಂದು ಕಡೆಗೆ ಉದಯವಾಗುತ್ತಲೂ ಇರುವನು. ಈಗ ನಮಗೆ ಕತ್ತಲೆಯಾದರೆ ನಾಳೆ ಬೆಳಗು ಬಂದೇ ತೀರುವುದು. ಈಗ ಈ ನೆಲವು ಒಣಗಿ ಭಣಭಣವಾದರೆ ನಾಳೆ ಮಳೆಯುಂಡು ಹುಚ್ಚು ಹಸುರಾಗುವುದು. ಸೃಷ್ಟಿಚಕ್ರದಲ್ಲಿ ಎಂಥ ನಿಜವಾದ ಆಶಾವಾದ ಇದೆ, ರಾಮಣ್ಣ. ಅದನ್ನು ಮನುಷ್ಯಜೀವನದಲ್ಲಿ ಕಂಡುಕೊಂಡರೆ ಸುಖವೇ ಸುಖ.'

'ಅದನ್ನು ನೀವು ಕಂಡಿರುವಿರಿ, ಮೂರ್ತಿಗಳೇ.'

'ಅದೆಲ್ಲ ಹುಸಿಹೆಮ್ಮೆ, ರಾಮಣ್ಣ. ನಾನೂ ನೀನೂ ಅದನ್ನು ಇನ್ನೂ ಕಾಣಬೇಕು, ಪ್ರತಿನಿತ್ಯದ ಜೀವನದಲ್ಲಿ ಪೋಣಿಸಬೇಕು. ಕನ್ನಡ, ಭಾರತ, ಮಾನವ ಜಾತಿಯ ವಿಷಯದಲ್ಲಿಯೂ ಅದನ್ನು ಬಲಪಡಿಸಿಕೊಂಡು ಸಾಗಬೇಕು. ಅದಿಲ್ಲದ ಬಾಳು ಕುರುಡು ದಾರಿ.'

ಇಬ್ಬರೂ ಉನ್ನತ ಭಾವನೆಯ ಆವೇಶದಿಂದ ಮೈಯೆಲ್ಲ ಸುಖಸ್ಪರ್ಶವನ್ನು ಹೊಂದಿ ಕಟ್ಟೆಯಿಂದ ಕೆಳಗಿಳಿದು ಗುಡಿಸಲತ್ತ ಹೆಜ್ಜೆಯಿಟ್ಟರು. ತನ್ನೆಲ್ಲ ಸಮಸ್ಯೆಗಳು ಬಗೆಹರಿದವೇನೊ ಎನ್ನುವಂತೆ ಮುಖವನ್ನು ಅರಳಿಸಿ ರಾಮಣ್ಣನು ಸಿಳ್ಳು ಹಾಕುತ್ತ ಸಾಗಿದನು. ಆ ರಸನಿಮಿಷದಲ್ಲಿ ಅವನಿಗೆ ಅತಿ ಪ್ರಿಯವಾದ ಕನ್ನಡ ಕೋಗಿಲೆಯ ಹಾಡಿನ ಪಲ್ಲವಿಯೊಂದು ಅವನ ಬಾಯಿಂದ ಹೀಗೆ ಹೊರಹೊಮ್ಮಿತು :

ಸಾರುವೆ ಸಾರುವೆ ತೂರು ನಿರಾಶೆಯ
ಸಾರುವುದೈ ಸಿರಿ ಕನ್ನಡ ನೆಲಕೆ!
ಭಾರತ ಕನ್ನಡ ಕೂಡಿಯೆ ಕುಣಿವುವು
ಕಾರಣಪುರುಷನ ಬರವಿನ ತಾಳಕೆ!

ಅದನ್ನೆ ತಿರುತಿರುಗಿ ಅನ್ನುತ್ತ ರಾಮಣ್ಣನು ಆನಂದಮೂರ್ತಿಗಳನ್ನು ಹಿಂಬಾಲಿಸಿದನು.

---

# ಶಬ್ದಕೋಶ

—:o:—

| ಪುಟ | ಪದಪ್ರಯೋಗ | ಮೈಸೂರ ಕಡೆಯ ಸಮಾನ ಪದಪ್ರಯೋಗ ಅಥವಾ ಅರ್ಥ |
|---|---|---|
| ೧ | ಬ್ಯಾಂಡು-ಬಜಂತ್ರಿ | ಬ್ಯಾಂಡ್ ಮತ್ತು ಓಲಗ. |
| ,, | ಗ್ಯಾಸಬತ್ತಿ | ಗ್ಯಾಸಲೈಟು. |
| ,, | ಹುಶಾರ | ಜಾಣ. |
| ,, | ಪರದೇಸಿ | ತಬ್ಬಲಿ, ಅನಾಥ. |
| ೨ | ಲಕ್ಕ (ಬೆಳದಿಂಗಳು) | ಚೆನ್ನಾದ, ಭೇಷಾದ. |
| ,, | ಸಂಭಾಳಿಸು | ಹೊಂದಿಸು, ಹೊಂದಿಕೆಮಾಡು. |
| ೩ | ಬಿಸಿಲೂಟ. | ಬಿಸಿಲಡಿಗೆಯ ಊಟ. |
| ,, | ಅಕ್ಕೀಕಾಳು | ಮಂಗಲಾಕ್ಷತೆ. |
| ,, | ತಲೆಗಿಂಬು | ದಿಂಬು. |
| ,, | ಚಿಕ್ಕೆ | ನಕ್ಷತ್ರ. |
| ,, | ಮುರಮುಳೆ | ದೊಡ್ಡಮಳೆ. |
| ,, | ಪರಿಸೆ | ಜಾತ್ರೆ, ಜನಸಮುದಾಯ. |
| ೪ | ಕಿಡಿಗೇಡಿ | ಕುಚೋದ್ಯಗಾರ. |
| ೫ | ಆರಾಮಖುರ್ಚಿ | ಈಸಿ ಚೇರ್. |
| ,, | ಸನಾದಿಯವರು | ವಾದ್ಯದವರು, ಓಲಗದವರು. |
| ,, | ಸುರಿಗೆಯ ಸ್ನಾನ | ಮಲನೀರು ಹೊಯ್ಯುವುದು (?) |
| ೬ | ಬಂಕ | ಮನೆಯ ಒಳಗಡೆ ಮೂರು ಮಗ್ಗುಲಿಗೆ ಗೋಡೆಯಿದ್ದು ಒಂದು ಮಗ್ಗುಲು ಬಯಲಾಗಿದ್ದ ಮೊಗಸಾಲೆ. |
| ೭ | ಗಳಿಗೆಬಟ್ಟಲ | ಮುಹೂರ್ತ. |

| | | |
|---|---|---|
| ೭ | ಗಪ್ಪುಗಾರಾಗಿ | ತೀರ ಸುಮ್ಮನಾಗಿ. |
| ,, | ಅಳ್ಳು ( ಹುರಿದಂತೆ ) | ಅರಳು. |
| ,, | ಗೋಣಿಟ್ಟು | ಕತ್ತನ್ನು ಸೇರಿಸಿ. |
| ೮ | ಮೋರೆ | ಮುಖ. |
| ,, | ಕುತ್ತ ( ಕುತ್ತು ) | ಗಂಡಾಂತರ, ಅಪಾಯ. |
| ,, | ಸಾಡೆ | ಲಾಜಾಹೋಮ. |
| ,, | ಹೆಳಲು | ( ಜಡೆಯ ) ಹೆರಳು. |
| ,, | ಕಳವು | ಕಳ್ಳತನ. |
| ೯ | ಹಣಿಗೆ | ಬಾಚಣಿಗೆ. |
| ೧೦ | ಹುರುಬರಕಾದ | ಉಬ್ಬುತಗ್ಗಾದ, ಉರುಟಾದ. |
| ,, | ( ಸಮ ) ರೇಷೆ | ರೇಖೆ. |
| ,, | ಮಟಮಾಯ | ಅದೃಶ್ಯ, ಮಂಗಮಾಯ. |
| ೧೧ | ಕಳವೂಟ | ಬೀಗರನ್ನು ಕಳಹುವ ದಿನದೂಟ. |
| ,, | ಖಾನಾವಳಿ | ಹೋಟಲು. |
| ೧೨ | ಕಳೆಹಿಡಿ | ಲಕ್ಷಣವನ್ನು ಅರಿ. |
| ,, | ಸತ್ರೆ | ವಿಶ್ವಾಸ, ಸ್ನೇಹ ಸಂಬಂಧ. |
| ,, | ದೆಸೆಯಿಂದ, ದಸಿಂದ, | —ಗೋಸ್ಕರ, —ಸಲುವಾಗಿ. |
| ,, | ದಂಗುಬಡಿದು | ಗಾಬರಿಯಾಗಿ, ಚಕಿತನಾಗಿ. |
| ೧೭ | ಕರಡು | ಡ್ರಾಫ್ಟ. |
| ,, | ಪರಿವೆ | ಲಕ್ಷ್ಯ, ಗಮನ, ಎಚ್ಚರ. |
| ,, | ಕಿಸೆ | ಜೇಬು. |
| ೧೮ | ಮನವಾರೆ | ಮನಃಪೂರ್ವಕವಾಗಿ |
| ,, | ಛಂದ-ಚಾರ | ಒಳ್ಳೆಯದು, ಯೋಗ್ಯ ( ಛಂದ=ಸುಂದರ ) |
| ೧೯ | ಪಾಲಾಬಿಡು | ಮಾತು ಬಿಡು. |
| ,, | ಖರೆ | ನಿಜ, ಸತ್ಯ. |
| ,, | ಭಾಗಾದಿ | ದ್ವೇಷಿಸುವ ಅಣ್ಣತಮ್ಮಂದಿರು. |

| | | |
|---|---|---|
| ೧೯ | ಕಳಕಳಿ | ನೈಜಭಾವನೆ, ಅಂತಃಕರಣ. |
| ,, | ಇಯತ್ತೆ | ತರಗತಿ. |
| ೨೦ | ಗ್ಯಾಲರಿ | 'ಬಾಲ್ಕನಿ' |
| ,, | ಹಣಿಕಿಕ್ಕಿ | ಇಣಿಕಿ. |
| ೨೧ | ಒಮ್ಮೆಲೇ | ತತ್‌ಕ್ಷಣ. |
| ,, | ನಸೀಬ | ಅದೃಷ್ಟ, ದೈವ. |
| ,, | ಕಕ್ಕ | ಚಿಕ್ಕಪ್ಪ, ದೊಡ್ಡಪ್ಪ. |
| ೨೨ | ಬೇನೆಕೊಳಕ | ರೋಗಿಷ್ಠ. |
| ,, | ಗಂಟುಬೇನೆ | ಪ್ಲೇಗು. |
| ೨೩ | ಅಣಕಾಟ | ವಿಡಂಬನೆ ( Irony ) |
| ,, | ಕಾಣಾಕಾಣಾ | ಕಂಡೂ ಕಂಡೂ. |
| ,, | ಗೊತ್ತಿಗೆ ಹಚ್ಚು | ಹಾಳುಮಾಡು, ನಿಶ್ಶೇಷಗೊಳಿಸು. |
| ೨೪ | ಬಿಮ್ಮು ಸೊಮ್ಮು | ಗರ್ವ, ಸೊಕ್ಕು. |
| ೨೫ | ನಾಡ | ಸಾಮಾನುಗಳನ್ನು ಮಡುಗುವುದಕ್ಕೆ ಗೋಡೆಯಲ್ಲಿ ಮಾಡಿದ ಎಡೆ. |
| ೨೬ | ಕಿಡಕಿ | ಕಿಟಕಿ. |
| ,, | ಕಿಮ್ಮತ್ತು | ಬೆಲೆ. |
| ೨೭ | ಲಗೂನೆ | ಬೇಗ. |
| ,, | ಪಲ್ಲಂಗ | ಮಂಚ. |
| ,, | ತ್ರಾಸಾಸಿಕೊಂಡು | ಬೇಜಾರು ಪಟ್ಟುಕೊಂಡು. |
| ,, | ಪಗಾರ | ಸಂಬಳ. |
| ೨೮ | ಬೋರಮಾಳಾ | ಕೊರಳಹಾರ, ಪದಕ. |
| ,, | ಬಿಲವಾರ | ಚಿನ್ನದ ಬಳೆ. |
| ,, | ಒಸ್ತು-ಒಡವೆ | ಒಡವೆ, ವಸ್ತು. |
| ,, | ಪಡಸಾಲೆ | ಮೊಗಸಾಲೆ. |
| ,, | ಲೋಡು | ಒರಗುದಿಂಬು. |
| ,, | ಸಂಬರು ( ಇದೆ ) | ಸರದಿ, ಅನುಕ್ರಮ. |

| | | |
|---|---|---|
| ೩೦ | ಸಿಂಪಡಿಸು | ಚಿಮುಕಿಸು. |
| ,, | ಹೊರಪು | ಸ್ಪಷ್ಟ. |
| ೩೧ | ಸಿವಡು ಸಿವಡಾಗಿ | ಗುಂಪಾಗಿ |
| ೩೨. | ಲಂಡಕೋಟು | ಉದ್ದದಲ್ಲಿ ಕಿರಿದಾದ ಕೋಟು. |
| ,, | ನಗೆಚಾಟಿಕೆ | ಹಾಸ್ಯ, ಸರಸ. |
| ,, | ಖೋಲಿ | ಕೊಠಡಿ. |
| ೩೪ | ಕೊಳೀಬೇಕು | ಕೊಳೆಯಬೇಕು. |
| ,, | ಜೋಡಿ | ಜತೆ. |
| ,, | ಚಂಡಾಳ ಚೌಕಡಿ | ಕೇಡಿಗರ ಕೂಟ. |
| ,, | ಪಿಡುಗು | ಸೋಂಕು ರೋಗ, ಉಪದ್ರವ. |
| ,, | ಉಸಾಬರಿ | ಗೊಡವೆ, ಗೋಜು. |
| ೩೫ | ಥಪ್ಕಣಿಮಾಡು | ತಣ್ಣಗೆ ಮಾಡು, ಶಾಂತಗೊಳಿಸು (hush up) |
| ,, | ಕೀಲಿ | ಬೀಗ. |
| ೩೬ | ಸಿಂಪಿ | ದರ್ಜಿ. |
| ,, | ಅಲ್ಪರಿದು | ಅಂಗಲಾಚಿ. |
| ೩೭ | ತಾಟು | ತಬಕ, ತಟ್ಟೆ. |
| ,, | ಅಡಕೆಬೆಟ್ಟ | ಬೆಟ್ಟಡಕೆ,ಅಡಕೆಯ ಇಡಿಯ ಕಾ |
| ,, | ಚಾದರ | ಹೊದೆಯಲು ಉಪಯೋಗಿಸುವ ನೂಲಿನ ಹೊದಿಕೆ ಬಟ್ಟೆ. |
| ,, | ಕಂಗಾಲತನ | ಬಡತನ, ದಾರಿದ್ರ್ಯ. |
| ,, | ಸೂಟಿ | ರಜ. |
| ೩೮ | ದಡ್ಡಿಯ ಬಾಗಿಲು | ತೋಟದ ಸಣ್ಣ ತಡಿಕೆಬಾಗಿಲು. |
| ,, | ಚಕ್ಕಾಗು | ಆಶ್ಚರ್ಯ ಹೊಂದು. |
| ,, | ಲಂಡಂಗಿ | ಅರೆತೋಳಿನ ಷರಟು, ಬನೀನು. |
| ೩೯ | ತಿನಸು | ತಿನ್ನುವ ಪದಾರ್ಥ, ತಿಂಡಿ. |
| ೪೨ | ಕಕ್ಕುಲತೆ | ನೈಜಭಾವನೆ, ಅಂತಃಕರಣ. |

| | | |
|---|---|---|
| ೪೪ | ಜಂಜಾಟ | ಜಂಜಡ, ಕಷ್ಟನಿಷ್ಠುರ. |
| ೪೬ | ಹುಚ್ಚುಚ್ಚಾರ | ಹುಚ್ಚುತನ, ಅಸಂಬದ್ಧತೆ. |
| ೪೭ | ಚಾಳೀಸು | ಕನ್ನಡಕ. |
| ೪೮ | ಢೀಗು | ಗುಂಪು, ರಾಶಿ. |
| ,, | ಫೌಜದಾರೀ ಖಟ್ಲೆ | ಕ್ರಿಮಿನಲ್ ಮೊಕದ್ದಮೆ. |
| ,, | ಬಣ | ‘ ಪಾರ್ಟಿ. ’ |
| ,, | ಆದಾವತಿ | ದ್ವೇಷ, ವೈಮನಸ್ಯ. |
| ೪೯ | ಹುಂಬಗುತ್ತಿಗೆ | ಒರಟುತನ, ಹೆಡ್ಡತನ. |
| ,, | ಪಂಚನಾಮೆ | ಮುಹಜರ್ ( ? ), ಪಂಚರ ಸಾಕ್ಷಿಯಾಗಿ ಯಾವೊಂದು ಅಪರಾಧದ ವಿವರಗಳ ಲಿಖಿತ. |
| ,, | ಹೇವ | ಛಲ, ಹಠ. |
| ೫೦ | ತುಡುರು | ಗದರಿಸು, ಒದರಾಡು. |
| ,, | ಪುಡಿಕೆ | ಕಟ್ಟು ( Bundle ) |
| ೫೧ | ದೈನಾಸಬಟ್ಟು | ದೈನ್ಯದಿಂದ. |
| ,, | ಮಳ್ಳ | ಮರುಳ, ಮೂರ್ಖ. |
| ,, | ಮುಜಿಮುಜಿ | ತಕರಾರು, ದೂರು, ಸಂಕೋಚ. |
| ೫೨ | ಖಟ್ಟಿಗೆ ಹಚ್ಚು | ನಿಷ್ಕರ್ಷೆಗೊಳಿಸು. |
| ,, | ದೇಶಾವರಿ | ದಾನ ಭಿಕ್ಷೆ. |
| ೫೪ | ಪೋಟಗಿ | ವಿಧವೆ ಅಥವಾ ವಿತಂತುವಿಗೆ ಸಲ್ಲತಕ್ಕ ವಾರ್ಷಿಕ ಧನ. |
| ,, | ಹೌಹಾರಿಕೆ | ಗಾಬರಿ, ಭಯ. |
| ,, | ಡೊಕ್ಕೆ | ಪಕ್ಕದ ಎಲುಬು, ಅಳ್ಳೆ. |
| ೫೫ | ಕಪಾಟು | ಬೀರು |
| ,, | ಡಮಣಿ | ಎತ್ತುಹೂಡುವ ವಾಹನವಿಶೇಷ. |
| ,, | ಅತ್ತರದಾಣಿ | ಅತ್ತರನ್ನು ಹಾಕಿಡುವ ಬೆಳ್ಳಿಯ ವಿಶೇಷಾಕೃತಿಯ ತಟ್ಟೆ. |

| | | |
|---|---|---|
| ೫೫ | ಗುಲಾಬದಾಣಿ | ಪನ್ನೀರುದಾನಿ. |
| ೫೬ | ಕಾಳಜಿ | ಆತಂಕ, ಯೋಚನೆ. |
| ,, | ಜೋಪಾನ | ಸಂರಕ್ಷಣ. |
| ೫೭ | ಧರ್ತಿ | ಬಗೆ, ರೀತಿ. |
| ,, | ವಾಜವಿ | ಯೋಗ್ಯ, ಸರಿ. |
| ೫೮ | ಆರ್ಜವ | ಬೇಡಿಕೆ, ಅಪೀಲು. |
| ೫೯ | ಸಂವರಿಸಿಕೊಳ್ಳು | ಸರಿಪಡಿಸಿಕೊಳ್ಳು. |
| ,, | ಮರೋ | ಎಷ್ಟೋ, ಕೊಂಚವೂ. |
| ,, | ನಿಗ್ಗರ | ನಿಗ್ರಹ, ಕಾಟ. |
| ,, | ನಿಗೆಣ್ಣೀರು | ಗಂಡನ ಅಣ್ಣತಮ್ಮಂದಿರ ಹೆಂಡಂದಿರು. |
| ,, | ದಶಮಿ | ರೊಟ್ಟಿ ಅಥವಾ ಬಕ್ಕರಿಯ ಮಂಡಿ ಆವೃತ್ತಿ. |
| ೬೦ | ನಸಗಿನಾಗ | ನಸುಕಿನಲ್ಲಿ. |
| ೬೧ | ಜುಲುಮೆಮಾಡು | ಬಲವಂತಪಡಿಸು. |
| ,, | ಅರ್ಕ | ಸಾರ (Essence) |
| ೬೨ | ಹವಣಾದ | ಸರಿ, ಹೆಚ್ಚುಕಡಿಮೆಯಿಲ್ಲದ. |
| ೬೪ | ಕಿಚಡಿ | ಕಿಚ್ಚಡಿ. |
| ೬೫ | ಠಿಕಾಣೆ | ಸ್ಥಳ, ಊರು. |
| ,, | ತಳಿಹಾಕು | ಚಿಮುಕಿಸು. |
| ,, | ಓಳಖಾಸಿದೆ | ಗುರುತಿಸಿದೆ. |
| ,, | ಶಹಾರ | ಪಟ್ಟಣ. |
| ,, | ದಹಾಲಾಖ | ಹತ್ತುಲಕ್ಷ |
| ,, | ಅಗದೀ | ತೀರ, ಅತಿ. |
| ,, | ಹೇಲಪಾಟಿ ಹಾಕು | ತಿರುತಿರುಗಿ ಹೋಗು. |
| ,, | ಐಟು–ಅಭ್ರಾಟು | ಗರ್ವ, ಡೌಲು. |
| ,, | ಕಂಟಾಳ | ಬೇಸರ |
| ,, | ಮೋಜಶೀರ | ಚಮತ್ಕಾರಿಕ, ವಿಚಿತ್ರ. |

| | | |
|---|---|---|
| ೧೫ | ಪರತ | ತಿರುಗಿ, ಮರಳಿ. |
| ,, | ಗಂಟುಬೀಳು ಗಾಠಾಸು | ಭೇಟಿಯಾಗು. |
| ೧೬ | ಉತರಾಯಿಸು | ಇಳಿದುಕೊಳ್ಳು. |
| ,, | ದೇಖಾವಾ | ನೋಟ. |
| ,, | ಆಠವಡೆ | ವಾರ, ಏಳು ದಿನ. |
| ,, | ದಣಗಿ | ರಂಪು, ಗಲಭೆ. |
| ,, | ಓರಡಾಸು | ಕೂಗು, ಒದರು. |
| ,, | ಶೇವಟೀ | ಕೊನೆಗೆ. |
| ,, | ವೇಡ | ಹುಚ್ಚು. |
| ,, | ಠೀಕ | ಚೆನ್ನು, ಲೇಸು. |
| ೧೭ | ಮುನ್ನೂಗು | ಮುಂದೆ ಸುಗ್ಗು. |
| ,, | ಜಬ್ಬಿಹೋಗು | ತುಳಿಯಲ್ಪಡು, ಚಚ್ಚಿಹೋಗು. |
| ೧೮ | ಘಾಜೀಗಟ್ಟಿ | ಕೊನೆನಿಲ್ದಾಣ. (Terminus) |
| ೧೯ | ಬಕ್ಕನೆತ್ತಿ | ಬರಿತಲೆ. |
| ,, | ಕಾಯಾಸಕಟ್ಟು | ಅಂದಾಜುಮಾಡು. |
| ೨೧ | ಠೋಕ | ಪೂರ್ವನಿಶ್ಚಿತ, ಸ್ಪಷ್ಟ. |
| ,, | ನಿಕಾಲು | ತೀರ್ಪು, ತೀರ್ಮಾನ, ನಿರ್ಣಯ. |
| ೨೨ | ತವಡುಕುಟ್ಟು | ವ್ಯರ್ಥಹರಟೆಯಲ್ಲಿ ತೊಡಗು, ಒರೆ ಮಾತಾಡು. |
| ,, | ದುಪ್ಪಟ್ಟು | ಎರಡರಷ್ಟು. |
| ೨೩ | ಹೀಗಳೆದು | ತುಚ್ಛಮಾಡಿ. |
| ೨೪ | ಹಳವಂಡ | ಸ್ವಂತದ ಯೋಚನೆ, ಆದರಿಂದ ಉಂಟಾಗುವ ಭ್ರಮೆ. |
| ,, | ಬಾಕು | ಬೆಂಚು ( Bench ) |
| ೨೫ | ಕವುರು (ಧಾತು) | ಕೌರು, ಕೆಟ್ಟವಾಸನೆ ಬೀರು. |
| ೨೮ | ಗಂಟುಗದಡಿ | ಸಾಮಾನು ಸರಂಜಾಮು. |
| ,, | ಜಳಕ | ಸ್ನಾನ. |

೮೭ ಹಮಾಲ — ಕೂಲಿಯವನು.

೮೮ ಎಕ್ಕ — ಎಕ್ಕಾಗಾಡಿ.

,, ಖಜೀಲಾಗು — ಅವಮಾನವಾಗು, ಹೀನಾಯವಾಗು.

,, ಧಡಿಕೆ — ಧಡಧಡ ಎನ್ನುವುದು.

,, ಜಡ್ಡುಗಿಡ್ಡು — ಕಾಯಿಲೆ-ಗೀಯಿಲೆ.

೮೯ ಹೋದತೊಟ್ಟು — ಹೋದಂದಿನಿಂದ.

,, ಚುರುಚುರು — ಅಸಮಾಧಾನ, ಅಶಾಂತಿ.

೯೦ ಧೇನಿಸು — ಧ್ಯಾನಿಸು, ಆಲೋಚಿಸು.

,, ವತನದಾರ — ಜಮೀನದಾರ.

,, ರೊಕ್ಕಸ್ತ — ಹಣವಂತ, ಶ್ರೀಮಂತ.

೯೧ ಖಳಬಳ — ಗಡಿಬಿಡಿ.

೯೩ ರಕಮು — ನಗದು, ಹಣ.

,, ತಾಲೀಮು — ಅಭ್ಯಾಸ (Rehearsal)

೯೪ ಲುಚ್ಚ್ಯಾ — ಮೋಸಗಾರ, ಠಕ್ಕ.

೯೫ ಪರವಾನಿಗೆ — ಒಪ್ಪಿಗೆ, ಅನುಮತಿ.

೯೬ ಹುಜರಿ — ಹಾಜರಿ (Attendance)

,, ಪರಾಳ — ಫಲಹಾರ, ತಿಂಡಿ.

೯೭ ಬೋಬ್ಯಾಟ — ಗಲಾಟೆ, ಪ್ರಾಮುಖ್ಯ.

,, ಉಲವು — ಸಪ್ಪಳ, ಶಬ್ದ.

,, ಕಂಪೂ — ಗುಂಪು.

೯೮ ಜಬರಿಸು — ಗದ್ದರಿಸು.

೯೯ ಪಾಕೀಟು — ಕವರು.

,, ಟಾಪುಟೀಪು — ಠಾಕ್‌ಠೀಕ್ (upto date, neat)

೧೦೦ ಮುಚ್ಚರದಾಣಿ — ಸೊಳ್ಳೆಪರದೆ.

೧೦೩ ಬಡಿಗ್ಯಾ — ಬಡಗಿ (Carpenter)

೧೦೪ ಸಂವರಣೆ — ಸಿದ್ಧತೆ.

,, ಮಾಟಸ್ನ — ಚಿಕ್ಕ, ಚೆಲುವಾದ.

| | | |
|---|---|---|
| ೧೦೫ | ಕಟಾಂಜನ | ಬಾಲ್ಕನಿಯು ಕಬ್ಬಿಣಸಲಾಕೆ. |
| ,, | ಫಳಿ | ಹಲಿಗೆ, ಫಲಕ. |
| ೧೦೫ | ಸವಡು | ಅವಕಾಶ, ವ್ಯವಧಾನ. |
| ೧೦೬ | ಅಸೈ | ಅಸಹ್ಯ. |
| ೧೧೧ | ಜುಂಯ್‌ಹಿಡಿ | ಜೊಮ್ಮುಹಿಡಿ, ಮರವಾಗು. |
| ೧೧೨ | ಸಂಪು | ಮುಷ್ಕರ (Strike) |
| ೧೧೩ | ಪಾಳಿ | ಸರದಿ. |
| ,, | ಜಾಡಿಸು | ಕೊಡಹು. |
| ೧೧೪ | ಗುಳೆಕಟಿಗೊಂಡು | ಸಂಸಾರ ಕಿತ್ತು. |
| ,, | ಇತ್ತಾಕ | ಇತ್ತಕಡೆ. |
| ,, | ಅತ್ತಾಕ | ಅತ್ತಕಡೆ. |
| ,, | ದಗದ | ಕೆಲಸ, ಉದ್ಯೋಗ. |
| ೧೧೫ | ಜವುಳು ನೆಲ | ತಂಪು ಭೂಮಿ, ನೀರುಳ್ಳ ನೆಲ. |
| ೧೧೬ | ಕುಪ್ಪರಿಸಿ ಬೀಳು | ಸಿಂತಲ್ಲಿ ದೊಪ್ಪನೆ ಬೀಳು. |
| ,, | ಚಕ್ಕರ | ೧ ತಲೆಸುತ್ತು, ಪಿತ್ತಭ್ರಮಣ<br>ಇಲ್ಲಿ ೨ ಶೂನ್ಯ, ಸೊನ್ನೆ. |
| ,, | ಗಸಣೆ | ಯೋಚನೆ, ವ್ಯಥೆ. |
| ೧೧೭ | ಮುಗಿಬಿದ್ದು | ಮುಸುರಿ, ಸುತ್ತುವರಿದು. |
| ೧೧೮ | ಸಂಬಾಳಿಸು | ಸಾಕು, ಕಾಪಾಡು. |
| ೧೧೯ | ಚಾಳ | ಅನೇಕ ಮನೆಗಳುಳ್ಳ ಒಂದೇ ಕಟ್ಟಡ<br>ಇಲ್ಲವೆ ಸಾಲು ಮನೆ. |
| ೧೨೦ | ಡಾಗಿ | ಡವಗಿ, ಅಸ್ಥಿಪಂಜರ. |
| ೧೨೫ | ಝುಡತಿ | ಶೋಧನೆ (Police Raid) |
| ೧೨೬ | ಕುಬಸದ ಊಟ | ಚೊಚ್ಚಿಲ ಗರ್ಭಿಣಿಗೆ ಮಾಡುವ<br>ಹಬ್ಬದೂಟ. |
| ೧೩೦ | ಹತ್ತುಗಡೆಯುವರು | ಆಪ್ತೇಷ್ಟರು, ನೆಂಟರು. |
| ,, | ಹೊರಸು | ನೂಲುಬಿಗಿದ ಮಂಚ. |

| | | |
|---|---|---|
| ೧೩೧ | ಗೋಳಿಬಾರು | ಬಂದೂಕ ಪ್ರಯೋಗ (shooting) |
| ೧೩೨ | ಸಳನಳಿ | ಅಶಕ್ತ, ಕ್ಷೀಣ. |
| ೧೩೪ | ಕಟಕಿ | ವ್ಯಂಗ್ಯ, ಚುಚ್ಚುಮಾತು. |
| ೧೩೭ | ಅನಕಾತ | ಅನಕ, ಅಲ್ಲಿಯವರೆಗೆ. |
| ೧೩೯ | ರಂಬಾಟ | ರಂಪ, ರಂಪು. |
| ೧೪೦ | ಬುಬ್ಬುಣಾಚಾರ | ದಂಭಾಚಾರ, ಡೌಲು. |
| ,, | ಮಾಸಲಾಣಿ | ಮದುವೆಯಾದ ಮೇಲೆ ತಿಂಗಳಿಗೆ ಮಾಡತಕ್ಕಹಬ್ಬ, ‘ತಿಂಗಳ ಕಾಂಬೂಲಿ |
| ೧೪೩ | ರಸಕಸಿ | ತೀವ್ರ ಕಲಹ, ಸ್ನೇಹಭಂಗ. |
| ,, | ವಾಸ್ತವಿಕ | ಯೋಗ್ಯ, ಸಮಂಜಸ. |
| ,, | ಆಭಾರ್ಟ | ಆರ್ಭಟ, ಆವೇಶ. |
| ೧೪೪ | ನಕಾಶ | ನಕ್ಷೆ, ನಕಾಸೆ. |
| ೧೪೫ | ಪರಟೆ | ತೆಂಗಿನ ಚಿಪ್ಪು, ಕರಟ. |
| ೧೪೭ | ಆರಾಮು | ಸುಖಸಂತೋಷ, ವಿಲಾಸ. |
| ೧೫೧ | ಕಸಿವಿಸಿ | ಕ್ಲೇಶ, ಸಂಕಟ. |
| ೧೫೪ | ಪಟಾಯಿಸು | ಮಂದಟ್ಯಾಗು. |
| ೧೬೪ | ಚುಮುಚುಮು ನಸುಕು | ಅರುಣೋದಯಕ್ಕಿಂತ ಮುಂಚಿನ ಕಾಲ. |
| ೧೭೦ | ದಂದುಗ | ವಿಪರೀತ ವೇದನೆ, ಕ್ಲೇಶ. |
| ೧೭೫ | ಅರಿಷ್ಟ | ಅನಿಷ್ಟ, ಕೆಟ್ಟ. |
| ೧೭೬ | ಸೊಪ್ಪುಹಾಕು | ಲೆಕ್ಕಿಸು. |
| ,, | ಕಿರುಕುಳ | ಚಿಕ್ಕ, ಕ್ಷುಲ್ಲಕ. |
| ೧೭೭ | ಆಳದಕ್ಕಿ | ದುರ್ಬಲ, ಕ್ಷೀಣ, ಕೃಶ. |
| ,, | ಮೋಫತ | ಮುಫತ್ತು, ಉಚಿತ. |
| ೧೭೮ | ಸೋಗಲಾಡಿತನ | ಸೋಗು, ಜಂಬ, ಬೂಟಾಟಿಕೆ. |

| | | |
|---|---|---|
| ೧೭೮ | ಕಳ್ಳಉಸುಬು | ಕಾಣದಂತೆ ಒಳಗೆ ಮುಳ್ಳು ಹುದುಗಿರುವ ಮಳಲು. |
| ೧೭೯ | ಒಕ್ಕಲು | ಮನೆಯು ಒಂದು ಭಾಗ. |
| ,, | ಮುಸುಗುಡು | ರುಷ್ಟವಾಗು, ಕೆರಳಿರು. |
| ೧೮೦ | ಕಾಳಜಿ | ಆಸಕ್ತಿ ಗಮನ, ವಿಶ್ವಾಸ. |
| ,, | ಕೆತ್ತೇಬಜೆಕಾರಭಾರ | ಅಧಿಕಪ್ರಸಂಗ. |
| ,, | ಖಬರು | ಎಚ್ಚರ. |
| ,, | ರಂದಿ | ರಂಪು, ಗಲಭೆ. |
| ೧೮೧ | ಗುಡಿಗೆ ಹೋಗುವುದು | ಹೆತ್ತು ಮೂರು ತಿಂಗಳಾದ ಮೇಲೆ ದೇವಸ್ಥಾನಕ್ಕೆ ಹೋಗಿ ಬರುವ ಸಂಪ್ರದಾಯ. |
| ೧೮೩ | ನೀರ ಮೊಟ್ಟೆ | ಏತ, ಯಾತ. |
| ೧೮೪ | ಅರಕಳಿ | ಅರ್ಧ, ಅರೆ. |